


ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಹಿಳಾ ಅಧ್ಯಯನ

ಸಂಪುಟ ೧೦ ಸಂಚಿಕೆ ೧ ಜನವರಿ-ಜೂನ್- ೨೦೦೮
ಸಂಪುಟ ೧೦ ಸಂಚಿಕೆ ೨ ಜುಲೈ ಡಿಸೆಂಬರ್- ೨೦೦೮

ಸಂಯುಕ್ತ ಸಂಚಿಕೆ

# ಮಹಿಳಾ ಅಧ್ಯಯನ

ಸಂಪುಟ ೧೦ ಸಂಚಿಕೆ ೧-೨

ಜನವರಿ-ಡಿಸೆಂಬರ್ ೨೦೦೮

ಸಂಯುಕ್ತ ಸಂಚಿಕೆ

ಸಂಪಾದಕ

ಡಾ. ಶಿವಾನಂದ ಎಸ್. ವಿರಕ್ತಮಠ




ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**MAHILA ADHYAYANA**
Bi-Annual, Vol. 10, Combined Issue-1 and 2
Jan-June & July-December 2008

*Edited* by
**Dr. Shivananda S. Viraktamath**
Associate Professor
Department of Women's Studies
Kannada University, Hampi
Vidyaranya 583 276

*Published by*
**Dr. A. Subbanna Rai**
Director, Prasaranga
Kannada University, Hampi
Vidyaranya 583 276

Pages : vi + 204, Price: Rs. 50/-

www.kannadauniversity.org

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೧೦, ಸಂಚಿಕೆ ೧ ಮತ್ತು ೨
ಜನವರಿ-ಜೂನ್ ಮತ್ತು ಜುಲೈ-ಡಿಸೆಂಬರ್ ೨೦೦೮
ಸಂಯುಕ್ತ ಸಂಚಿಕೆ



| | | | |
|---|---|---|---|
| ಪ್ರಧಾನ ಸಂಪಾದಕರು | : ಡಾ. ಹಿ.ಚಿ. ಬೋರಲಿಂಗಯ್ಯ | | |
| ಸಂಪಾದಕರು | : ಡಾ. ಶಿವಾನಂದ ಎಸ್. ವಿರಕ್ತಮಠ | | |
| ಬಿಡಿ ಪ್ರತಿ ಬೆಲೆ | : ರೂ. ೫೦.೦೦ | | |
| ವಾರ್ಷಿಕ ಚಂದಾ | : ವ್ಯಕ್ತಿಗಳಿಗೆ | ರೂ. | ೮೦.೦೦ |
| | ಸಂಸ್ಥೆಗಳಿಗೆ | ರೂ. | ೧೦೦.೦೦ |
| ತ್ರೈವಾರ್ಷಿಕ ಚಂದಾ | : ವ್ಯಕ್ತಿಗಳಿಗೆ | ರೂ. | ೨೦೦.೦೦ |
| | ಸಂಸ್ಥೆಗಳಿಗೆ | ರೂ. | ೨೫೦.೦೦ |
| ಮುಖಪುಟ | : ಕೆ.ಕೆ. ಮಕಾಳಿ | | |

ಅಕ್ಷರ ಸಂಯೋಜನೆ
**ವಿದ್ಯಾರಣ್ಯ ಗಣಕ ಕೇಂದ್ರ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪುಸ್ತಕ ದೊರೆಯುವ ಸ್ಥಳ
**ಸರಸ್ವತಿ ಪುಸ್ತಕ ಮಾರಾಟ ಮಳಿಗೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩ ೨೭೬ , ದೂರವಾಣಿ : ೦೮೩೯೪-೨೪೧೩೧೩

**ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ**
ನಂ. ೧, ಕಾನೂನು ಕಾಲೇಜು ಹಳೆಯ ಕಟ್ಟಡ
ಮೈಸೂರು ಬ್ಯಾಂಕ್ ವೃತ್ತ, ಅರಮನೆ ರಸ್ತೆ
ಬೆಂಗಳೂರು ೫೬೦ ೦೦೯
ದೂರವಾಣಿ : ೦೮೦-೨೨೩೭೨೩೮೮

*ಮುದ್ರಣ*
**ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ**

# ಸಂಪಾದಕೀಯ

ಡಾ. ಶಿವಾನಂದ ಎಸ್. ವಿರಕ್ತಮಠ

ಮಹಿಳಾ ಅಧ್ಯಯನವು ಮಹಿಳಾ ಅಸ್ತಿತ್ವ ಶೋಧನೆಯತ್ತ ಮುಖಮಾಡಿ ಪ್ರಗತಿದಾಯಕವಾಗಿ ಸಾಗುತ್ತಿದೆ. ಎಲ್ಲಾ ಮಾನವಿಕ ಶೈಕ್ಷಣಿಕ ಶಿಸ್ತುಗಳಲ್ಲಿಯೂ ಮಹಿಳೆಯು ಇಂದು ಅಧ್ಯಯನ ವಿಷಯವಾಗಿರುವುದು ಸ್ತ್ರೀವಾದಿ ಹೋರಾಟದ ಗ್ರಹಿಕೆಯ ದೃಷ್ಟಿಯಿಂದ ಆಶಾದಾಯಕವಾದ ಬೆಳವಣಿಗೆಯಾಗಿದೆ. ಕನ್ನಡ ವಿಶ್ವವಿದ್ಯಾಲಯದ 'ಮಹಿಳಾ ಅಧ್ಯಯನ ವಿಭಾಗ'ವು ಈ ನಿಟ್ಟಿನಲ್ಲಿ ತನ್ನ ಶೈಕ್ಷಣಿಕ ಚಟುವಟಿಕೆಯ ಹೊಣೆಯನ್ನು ಈ ಪತ್ರಿಕೆಯ ಮೂಲಕ ನಿರಂತರವಾಗಿ ಹೊರಹಾಕುತ್ತಿದೆ. ಪ್ರಸ್ತುತ ಅಧ್ಯಯನ ವಿಷಯದಲ್ಲಿ ಬರೆಯುತ್ತಿರುವವರ ಸಂಖ್ಯೆ ಕಡಿಮೆ ಇದ್ದರೂ ಗುಣಾತ್ಮಕವಾಗಿ ಕೆಲವರು ಮಾತ್ರ ಈ ಅಧ್ಯಯನ ಶಾಖೆಯಲ್ಲಿ ತೊಡಗಿರುವುದರಿಂದ ಅವರನ್ನೇ ಆಶ್ರಯಿಸಿ ಪತ್ರಿಕೆಯನ್ನು ಮುನ್ನಡೆಸಲಾಗುತ್ತಿದೆ. ಇತ್ತೀಚೆಗೆ 'ಮಹಿಳಾ ಅಧ್ಯಯನ' ಶೈಕ್ಷಣಿಕ ಶಿಸ್ತಿನಲ್ಲಿ ಸ್ನಾತಕೋತ್ತರ ಹಾಗೂ ಸಂಶೋಧನಾ ಅಧ್ಯಯನಗಳಲ್ಲಿ ತೊಡಗಿಕೊಂಡಿರುವ ವಿದ್ಯಾರ್ಥಿ ಸಮುದಾಯವು ಸೇರಿಕೊಳ್ಳುತ್ತಿರುವುದು ಸಕಾರಾತ್ಮಕವಾದ ಗುಣಾಂಶವಾಗಿದೆ. ಪ್ರಸ್ತುತ ಸಂಪುಟವನ್ನು ಮೇಲೆ ಪ್ರಸ್ತಾಪಿಸಿದ ಎಲ್ಲಾ ಬಗೆಯ ಬರಹಗಾರರ ಸಮುದಾಯವನ್ನು ಹೊಂದಿ ತಮ್ಮ ಕೈಸೇರುತ್ತಿದೆ.

ಈ ಸಂಪುಟವನ್ನು ಮುಖ್ಯವಾಗಿ ಆರು ಉಪವಿಭಾಗದ ಶೀರ್ಷಿಕೆಗಳಲ್ಲಿ ಮುದ್ರಿಸಲಾಗಿದೆ. ಮಹಿಳಾ ಮೀಸಲಾತಿ, ಮಹಿಳಾ ಸಾಮಾಜಿಕತೆ, ಮಹಿಳಾ ಅಧ್ಯಯನ : ಮರು ವ್ಯಾಖ್ಯಾನ, ಆರೋಗ್ಯ ವಲಯ, ಸಾಹಿತ್ಯ ವಲಯ ಮತ್ತು ಮಹಿಳಾ ಅಭಿವೃದ್ಧಿಗಳೆಂಬ ವಿಭಾಗಗಳಲ್ಲಿ ಲೇಖನಗಳನ್ನು ಸಂಯೋಜಿಸಲಾಗಿದೆ. ಮಹಿಳಾ ಮೀಸಲಾತಿಯ ಚರ್ಚೆಯನ್ನು ಕುರಿತಂತೆ ವಿಭಾಗದಿಂದ ನಡೆಸಿದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನಗಳ ಜೊತೆಗೆ ಹೊಸ ಲೆಖನಗಳನ್ನು ಕೂಡಾ ಇಲ್ಲಿ ಒಳಗೊಳಿಸಲಾಗಿದೆ. ಮೀಸಲಾತಿಯ ತಾತ್ವಿಕತೆಯಿಂದ ಆರಂಭಗೊಂಡ ಇಲ್ಲಿನ ಚರ್ಚೆಯನ್ನು ರಾಜಕೀಯ ಮಹಿಳಾ ಮೀಸಲಾತಿಯ ಅಗತ್ಯ ಪ್ರತಿಪಾದನೆಯನ್ನು ಒತ್ತಾಯಿಸುವವರೆಗೆ ನಡೆದಿರುವುದನ್ನು ಗುರುತಿಸಬಹುದಾಗಿದೆ. ಮಹಿಳಾ ಸಾಮಾಜಿಕತೆಯ ವಲಯದಲ್ಲಿ ಮುಖ್ಯವಾಗಿ ದೇವದಾಸಿ ಪದ್ಧತಿಯನ್ನು ಪರಿಚಯಿಸುವ ಸಮಗ್ರ ಲೇಖನವನ್ನು ಮತ್ತು ಬಾಲ ವೇಶ್ಯೆಯರು ಹೆಚ್ಚಾಗುತ್ತಿರುವ ಮಾಹಿತಿಯನ್ನು ಹಾಗೂ ಜಾತೀ ಯತೆಯ ತೊಡಕನ್ನು ಕುರಿತ ಅಂಬೇಡ್ಕರರ ವಿಚಾರಧಾರೆಯನ್ನು ಮಹಿಳಾ ಚಿಂತನೆಗೆ ಅನ್ವಯಿಸಿ ಚರ್ಚಿಸುವ ಲೇಖನಗಳನ್ನು ಪ್ರಕಟಿಸಲಾಗಿದೆ.

ಮಹಿಳಾ ಅಧ್ಯಯನ : ಮರು ವ್ಯಾಖ್ಯಾನ ಭಾಗದಲ್ಲಿ ಸಬಲೀಕರಣದ ಪುನರ್ ನಿರ್ವಚನವನ್ನು ಹಾಗೂ ಮಹಿಳಾ ದೌರ್ಜನ್ಯ ಕುರಿತ ಸೈದ್ಧಾಂತಿಕ ಚರ್ಚೆಯನ್ನು ಪ್ರಕಟಪಡಿಸುವ ಲೇಖನಗಳಿವೆ. ಆರೋಗ್ಯ ವಲಯದಲ್ಲಿ ದಾದಿಯರ ಚಾರಿತ್ರಿಕ ನೋಟ ಹಾಗೂ ಕುಂಚಿ ಕೊರವ ಸಮುದಾಯವೊಂದರ ಆರೋಗ್ಯದ ದುಸ್ಥಿತಿಯನ್ನು ವಿವರಿಸುವ ಬರಹಗಳನ್ನು ಸೇರಿಸಲಾಗಿದೆ. ದಾನ ಚಿಂತಾಮಣಿಯೆಂದು ಖ್ಯಾತಳಾದ ಅತ್ತಿಮಬ್ಬೆ ಮತ್ತು ಕನ್ನಡದ ಮೊದಲ ಸ್ತ್ರೀವಾದಿ ಎಂದು ಕೀರ್ತಿತಳಾಗುತ್ತಿರುವ ಅಕ್ಕಮಹಾದೇವಿಯರ ಸಾಧನೆಗಳನ್ನು ಪುನರ್ ವ್ಯಾಖ್ಯಾನಿಸುವ ಬರಹವನ್ನು ಮತ್ತು ದೇವನೂರು, ಬರಗೂರರ  ಕಥನಗಳಲ್ಲಿನ ಜಾತಿ-ಲಿಂಗತ್ವದ ಪ್ರಶ್ನೆಗಳನ್ನು ಹಾಗೂ ವೀಣಾ ಶಾಂತೇಶ್ವರ 'ಕವಲು' ಕಥಾ ಸಂಕಲನದ ಕಥನಗಳ ಸ್ತ್ರೀವಾದಿ ವಿಮರ್ಶೆಯನ್ನು ಸಾಹಿತ್ಯ ವಲಯದ ವಿಭಾಗವು ಪರಿಚಯಿಸುತ್ತದೆ. ಕೊನೆಯದಾದ ಮಹಿಳಾ ಅಭಿವೃದ್ಧಿ ವಿಭಾಗದಲ್ಲಿ ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಅಭಿವೃದ್ಧಿಯನ್ನು ಕುರಿತಂತೆ ನಡೆಸುತ್ತಿರುವ ಚಟುವಟಿಕೆಗಳನ್ನು ವಿವರಿಸುವ ಬರಹವೊಂದನ್ನು ಮುದ್ರಿಸಿ ಸಂಪುಟವನ್ನು ಪೂರ್ಣಗೊಳಿಸಲಾಗಿದೆ. ಒಟ್ಟು ನೋಟದಲ್ಲಿ ಹೇಳುವುದಾದರೆ ಮಹಿಳಾ ಚಿಂತನೆಯ ವೈವಿಧ್ಯತೆಯನ್ನು ಈ ಸಂಪುಟದ ಲೇಖನಗಳು ಪ್ರಕಟಪಡಿಸುತ್ತವೆ ಎಂದು ಹೇಳಬಹುದು.

ಕೊನೆಯದಾಗಿ ಪತ್ರಿಕೆಗೆ ನೆರವಾದವರಲ್ಲಿ ನಾನು ಮುಖ್ಯವಾಗಿ ಸ್ಮರಿಸಿಕೊಳ್ಳಬೇಕಾದವರು ಮಾನ್ಯ ಕುಲಪತಿಗಳು. ಮಹಿಳಾ ಅಧ್ಯಯನ ಪತ್ರಿಕೆಗೆ ಬೆಂಬಲವಾಗಿರುವ ಅವರಿಗೆ ಈ ಸಂದರ್ಭದಲ್ಲಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಇನ್ನು ಪತ್ರಿಕೆಯ ಲೇಖನಗಳನ್ನು ಒದಗಿಸಿದ ಎಲ್ಲಾ ಲೇಖಕರಿಗೆ ವಿಶೇಷವಾಗಿ ಸ್ಮರಿಸುತ್ತೇನೆ. ಜೊತೆಗೆ ಯಾವಾಗಲೂ ಪತ್ರಿಕೆಯ ಮುದ್ರಣ ಹಾಗೂ ವಿತರಣೆಯ ಹೊಣೆಯನ್ನು ನಿರ್ವಹಿಸುತ್ತಿರುವ ಪ್ರಸಾರಾಂಗದ ನಿರ್ದೇಶಕರು, ಸಹಾಯಕ ನಿರ್ದೇಶಕರು ಹಾಗೂ ಅವರ ಸಿಬ್ಬಂದಿಯನ್ನು ವಿಶ್ವಾಸಪೂರ್ವಕವಾಗಿ ನೆನೆಯುತ್ತಾ ಸಹೃದಯ ಓದುಗರಿಗೆ ಈ ಸಂಪುಟವನ್ನು ತೆರೆದಿಡುತ್ತಿದ್ದೇನೆ.

# ಪರಿವಿಡಿ

## ಮಹಿಳಾ ಮೀಸಲಾತಿ



## ಮಹಿಳಾ ಸಾಮಾಜಿಕತೆ

೧

# ಕನ್ನಡಿಯೊಳಗಿನ ಗಂಟಾಗಿ ಕುಳಿತಿರುವ ಮಹಿಳಾ ಮೀಸಲಾತಿ ಮಸೂದೆ

ಶ್ರೀಮತಿ ಕೆ.ಎಸ್. ವಿಮಲಾ

ಶಾಸನ ಸಭೆಗಳಲ್ಲಿ ಮಹಿಳಾ ಮೀಸಲಾತಿ ಮಸೂದೆ ಬಹುಶಃ ದೇಶದಲ್ಲಿ ಬಹು ಚರ್ಚಿತಗೊಂಡ ಮಸೂದೆ. ಕಳೆದ ೧೪ ವರ್ಷಗಳಿಂದ ನೆನೆಗುದಿಗೆ ಬಿದ್ದ ಮಸೂದೆ ಈಗ ಒಂದು ರೀತಿಯಲ್ಲಿ ಅರೆ ಜೀವಾವಸ್ಥೆಯ ಸ್ಥಿತಿಯಲ್ಲಿದೆ.

ತಾರತಮ್ಯ ರಹಿತ ಸಮಾನತೆಯ ಆಶಯವನ್ನು ಹೊಂದಿದ ಸಂವಿಧಾನ ನಮ್ಮದು. ಈ ಸಮಾನತೆಯ ಕಲ್ಪನೆಯ ಆಧಾರದಲ್ಲಿಯೇ ಮಹಿಳೆ ಆಸ್ತಿಯ ಹಕ್ಕು, ಪುನರ್ವಿವಾಹದ ಹಕ್ಕು ಮುಂತಾದ ವಿಷಯಗಳ ಕುರಿತು ದೀರ್ಘ ಗಂಭೀರ ಚರ್ಚೆಗಳು, ವಾದ, ವಿವಾದ ಗಳು ನಡೆದಿವೆ ಮತ್ತು ಈಗಲೂ ನಡೆಯುತ್ತಿವೆ. ಕೌಟುಂಬಿಕ, ಸಾಮಾಜಿಕ, ಆರ್ಥಿಕ ನೆಲೆಯ ಸಮಾನತೆಯ ಜೊತೆ ರಾಜಕೀಯ ಸಮಾನತೆ ಕೂಡ ಸಿಗಬೇಕಾದುದು ನ್ಯಾಯ. ಆದರೆ ಸಂವಿಧಾನದ ಮೂಲ ಆಶಯಗಳಲ್ಲಿ ಒಂದಾದ ಲಿಂಗ ಸಮಾನತೆಯ ಕಲ್ಪನೆ ಅಷ್ಟು ಸುಲಭವಾಗಿ ಕಾರ್ಯಗತಗೊಳ್ಳಲು ಸಾಧ್ಯವಾಗಿಲ್ಲ. ಈ ನೆಲದಲ್ಲಿ ಆಳವಾಗಿ ಬೇರೂರಿರುವ ಪುರುಷ ಪ್ರಧಾನ ಧೋರಣೆಗಳು ತೀವ್ರ ಸೆಣಸಾಟವನ್ನು ಎದುರಿಸಿಯೂ ಇನ್ನೂ ಸ್ಥಿರವಾಗಿ ಕುಳಿತಿದೆ.

---

* ಇಂತಹ ಮುಖ್ಯ ಪ್ರಶ್ನೆಯನ್ನು ಎತ್ತಿಕೊಂಡು ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗವು ಗುಲಬರ್ಗಾದಲ್ಲಿ ಜನವಾದಿ ಮಹಿಳಾ ಸಂಘಟನೆಯ ಸಹಯೋಗ ದೊಂದಿಗೆ ಮೂರು ದಿನಗಳ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ನಡೆಸಿತ್ತು. ಈ ಸಂದರ್ಭ ದಲ್ಲಿ ಮಹಿಳಾ ಮೀಸಲಾತಿಯ ಅಗತ್ಯವನ್ನು ಕುರಿತಂತೆ ನಾಡಿನ ಪ್ರಮುಖ ಚಿಂತಕರು, ಹೋರಾಟಗಾರರು ವಿಚಾರಸಂಕಿರಣದಲ್ಲಿ ಮಂಡಿಸಿದ ಲೇಖನಗಳನ್ನು ಹಾಗೂ ಕೆಲ ಹೊಸ ಲೇಖನಗಳನ್ನು ಕೂಡಾ ಇಲ್ಲಿ ಪ್ರಕಟಿಸಲಾಗಿದೆ.

ನಮ್ಮದು ಪ್ರಜಾಪ್ರಭುತ್ವ ವ್ಯವಸ್ಥೆ. ಎಲ್ಲ ಪ್ರಜೆಗಳ ಅಥವಾ ಬಹುಸಂಖ್ಯೆಯ ಪ್ರಜೆಗಳ ತೀರ್ಮಾನದ ಆಧಾರದಲ್ಲಿ ದೇಶದ ಆಗು-ಹೋಗುಗಳು, ತೀರ್ಮಾನಗಳು ನಿರ್ಧಾರಿತಗೊಳ್ಳಬೇಕು. ಇದು ಪ್ರಜಾಪ್ರಭುತ್ವದ ಮೂಲ ಆಶಯ. ಈ ವ್ಯವಸ್ಥೆಯಲ್ಲಿ ರಾಜಕಾರಣವು ಬಹುಮುಖ್ಯ ಪಾತ್ರ ವಹಿಸುತ್ತದೆ. ದೇಶ ವಾಸಿಗಳ ಬದುಕಿನ ಕುರಿತು ನಿರ್ಧಾರಗಳನ್ನು ತೆಗೆದುಕೊಳ್ಳುವ ಅಧಿಕಾರದ ಕೇಂದ್ರ ಸ್ಥಾನವದು. ಇಲ್ಲಿ ಎಲ್ಲರಿಗೂ ಸಂವಿಧಾನದ ಆಶಯದಂತೆ ಸಮಾನ ಅವಕಾಶ ಸಹಜವಾಗಿಯೇ ಸಿಗಬೇಕು. ಅದಕ್ಕಾಗಿ ಚರ್ಚೆ, ವಾದ-ವಿವಾದಗಳು ನಡೆಯಬೇಕಾದ ಅಗತ್ಯವಿರಲಿಲ್ಲ. ಆದರೆ ಅಂತಹ ಒಂದು ಸಹಜ ಸಂಚಲನ ತಂತಾನಾಗಿ ನಡೆಯಲಿಲ್ಲ. ಅದಕ್ಕೆ ಕಾರಣ ಆಳವಾಗಿ ಬೇರೂರಿರುವ ಪುರುಷ ಪ್ರಾಧಾನ್ಯ ಮೌಲ್ಯಗಳು. ಹಾಗೆಂದ ಮಾತ್ರಕ್ಕೆ ಈ ನೆಲದಲ್ಲಿ ಸ್ತ್ರೀಯರ ಪಾತ್ರ ಪೂರ್ತಿ ನಗಣ್ಯವೆಂದೂ ಅಲ್ಲ ಅಥವಾ ಸ್ತ್ರೀ ಪ್ರಾತಿನಿಧ್ಯದ ಕಲ್ಪನೆ ಇರಲೇ ಇಲ್ಲ ಎಂದೂ ಅಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಎಂದರೆ ೧೯೨೬ರಲ್ಲಿಯೇ ಪ್ರಾವೆನ್ಷಿಯಲ್ ಲೆಜಿಸ್ಲೇಟರ್‌ನಲ್ಲಿ ಮಹಿಳಾ ಮೀಸಲಾತಿಯಿದ್ದು ಪ್ರಥಮ ಮಹಿಳಾ ಉಪಾಧ್ಯಕ್ಷರಾಗಿ ಲಕ್ಷ್ಮಿರೆಡ್ಡಿಯವರು ನೇಮಕಗೊಂಡಿದ್ದರು. ಈ ಪ್ರಾತಿನಿಧ್ಯ ಆಶಯ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮುಂದುವರೆಯಲಿಲ್ಲ.

ದೇಶಕ್ಕೆ ಬಂದ ಸ್ವಾತಂತ್ರ್ಯ ಎಲ್ಲರಿಗೂ ಸಮಾನ ಸ್ವಾತಂತ್ರ್ಯ, ಅವಕಾಶಗಳನ್ನು ಹೊತ್ತುಕೊಂಡೇ ಬರಬೇಕಾಗಿತ್ತು ಅಥವಾ ಆ ನಿರೀಕ್ಷೆ ಇತ್ತು. ಕಾರಣ ದೇಶದ ಸ್ವಾತಂತ್ರ್ಯಕ್ಕಾಗಿ ದುಡಿದು ಹಣ್ಣಾದ, ಮಡಿದು ಮಣ್ಣಾದ ಅಸಂಖ್ಯರಲ್ಲಿ ಮಹಿಳೆಯರು ಸೇರಿದ್ದಾರೆ. ಸ್ವಾತಂತ್ರ್ಯದ ಕನಸು ಕಂಡಿದ್ದಾರೆ. ಪುರುಷರ ಹೆಗಲಿಗೆ-ಹೆಗಲು ಹೆಜ್ಜೆಗೆ ಹೆಜ್ಜೆ ಸೇರಿಸಿ ಹೋರಾಡಿದ್ದಾರೆ. ಹೆಗಲಿಗೆ ಬಂದೂಕು ಏರಿಸಿ ಕಾಡು-ಮೇಡುಗಳಲ್ಲಿ ಅಲೆದ ಕ್ಯಾಪ್ಟನ್ ಲಕ್ಷ್ಮಿ ಸೆಹಗಲ್, ಮಲ್ಲು ಸ್ವರಾಜ್ಯಂರಂತಹ ಹಲವಾರು ಕ್ರಾಂತಿಕಾರಿ ಮಹಿಳೆಯರೂ ಇದ್ದಾರೆ. ಅಧಿಕಾರದ ಗದ್ದುಗೆಯಲ್ಲಿದ್ದೇ ಬ್ರಿಟೀಷರ ವಿರುದ್ಧ ನೇರ ರಣರಂಗದಲ್ಲಿ ಸೆಣಸಿದ ಝಾನ್ಸಿರಾಣಿ ಲಕ್ಷ್ಮೀಬಾಯಿ, ಕಿತ್ತೂರು ಚೆನ್ನಮ್ಮರಂತಹ ವೀರ ಮಹಿಳೆಯರಿದ್ದಾರೆ. ಗಾಂಧೀಜಿಯವರ ನೇತೃತ್ವದ ಸತ್ಯಾಗ್ರಹ ಅಸಹಕಾರ ಚಳುವಳಿಗಳಲ್ಲಿ ಪಾಲ್ಗೊಂಡ ಮಹಿಳೆಯರೂ ಇದ್ದಾರೆ. ತೆರೆ ಮರೆಯ ಕಾಯಿಗಳಂತೆ ಅಸಂಖ್ಯಾತ ಸತ್ಯಾಗ್ರಹಿಗಳಿಗೆ ಊಟ, ನೀರು ಕೊಟ್ಟು, ಅಡಗುದಾಣಗಳನ್ನು ಕೊಟ್ಟ ಮಹಾತಾಯಂದಿರೂ ಇದ್ದಾರೆ. ಇವರೆಲ್ಲರ ಕನಸು ದೇಶವನ್ನು ಬ್ರಿಟಿಷರ ದಾಸ್ಯದಿಂದ ಮುಕ್ತಗೊಳಿಸಿ ಸರ್ವತಂತ್ರ-ಸ್ವತಂತ್ರ ಭಾರತ ಸ್ಥಾಪಿಸುವುದೇ ಆಗಿತ್ತು. ಆದರೆ ಬಂದ ಸ್ವಾತಂತ್ರ ಪುರುಷ-ಮಹಿಳೆಯರಿಬ್ಬರಿಗೂ ಸಹಜವಾಗಿ ಸಮಾನ ಅಧಿಕಾರ ನೀಡುವ ವ್ಯವಸ್ಥೆಯಾಗಿ ಮೂಡಿ ಬರಲಿಲ್ಲ. ಅದರ ಪರಿಣಾಮವೇ ಇಂದಿಗೂ ಶಾಸನ ಸಭೆಗಳಲ್ಲಿ ೩೩% ಮೀಸಲಾತಿಗಾಗಿ ಒತ್ತಾಯಿಸುವ ಹೋರಾಟ ಮುಂದುವರೆದಿದೆ.

ಸಮಾನತೆಯನ್ನು ಕೇಳುವಾಗ ಮೀಸಲಾತಿಯ ಅಗತ್ಯವೇನು ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಸಹಜ ಸಮಾನತೆ ದೊರಕಬೇಕೆನ್ನುವ ಧೋರಣೆಯಿಂದ ಪ್ರಾವೆನ್ಷಿಯಲ್ ಲೆಜಿಸ್ಲೇಟರ್‌ನಲ್ಲಿ ಮಹಿಳಾ ನೇಮಕಾತಿ ಒತ್ತು ಕೊಡುತ್ತಲೇ ಅಥವಾ ಸಮಾನ ಅವಕಾಶದ ನಿರೀಕ್ಷೆ

ಮಾಡುತ್ತಲೇ ಜೊತೆಯಿದ್ದ ಪುರುಷ ಸಮುದಾಯದ ಬಗ್ಗೆ ಅತೀವ ವಿಶ್ವಾಸ ಮತ್ತು ನಂಬಿಕೆಯನ್ನಿಟ್ಟುಕೊಂಡು ವ್ಯಕ್ತಪಡಿಸಿದ್ದಾಗಿತ್ತು. ಆದರೆ ಇಂತಹ ಒಂದು ಸಮಾನತೆಯ ಆಶಯ ಸಾಕಾರಗೊಳ್ಳಲೇ ಇಲ್ಲ ಎಂಬುದು ಅಂದಿನಿಂದ ಇಂದಿನವರೆಗೂ ನಡೆಯುತ್ತಿರುವ ವಿದ್ಯಮಾನಗಳಿಂದ ತಿಳಿಯುತ್ತದೆ. ಶಿಕ್ಷಣ, ಆರ್ಥಿಕ, ಸಾಮಾಜಿಕ ವಲಯಗಳಲ್ಲಿ ಸಿಕ್ಕಷ್ಟು ಅವಕಾಶಗಳೂ ಕೂಡ ರಾಜಕೀಯ ಕ್ಷೇತ್ರದಲ್ಲಿ ಸಿಗದುದಕ್ಕೆ ಅತಿ ಮುಖ್ಯ ಕಾರಣವೇ ಅದು ಅಧಿಕಾರದ ಕೇಂದ್ರವಾಗಿರುವುದರಿಂದ. ಈ ಹೇಳಿಕೆಯನ್ನು ದೃಢೀಕರಿಸುವ ಇನ್ನೊಂದು ಉದಾಹರಣೆಯೆಂದರೆ, ಸ್ಥಳೀಯ ಸಂಸ್ಥೆಗಳಲ್ಲಿ ಈ ಹಿಂದೆ ೩೩% ಈಗ ಅದು ೫೦% ಆಗಿದೆ. ಮಹಿಳಾ ಮೀಸಲಾತಿ ನೀಡಿದಾಗ ಕನಿಷ್ಟ ವಿರೋಧವೂ ವ್ಯಕ್ತವಾಗದ್ದು. ಇದಕ್ಕೆ ಕಾರಣ ಈ ಹಂತಗಳಲ್ಲಿ ಶಾಸನ ಸಭೆಗಳಿಗೆ ಹೋಲಿಸಿದರೆ ಅಧಿಕಾರ ಮತ್ತು ಹಣ ಸೀಮಿತಿ ಪರಿಮಿತಿಯೊಳಗೆ ಇರುತ್ತದೆ.

ಹೀಗೆ ಸ್ವಾತಂತ್ರ್ಯಾನಂತರದ ೬+ ದಶಕಗಳು ಪೂರೈಸಿದ ಮೇಲೂ ನ್ಯಾಯಯುತ ಪಾಲು ಸಿಗದೇ ಇರುವುದಕ್ಕೆ ಪುರುಷ ಪ್ರಧಾನ ಮನಃಸ್ಥಿತಿಗಳೇ ಕಾರಣ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಎಂದರೆ ಪಾಳೆಯಗಾರಿ, ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರನ್ನು ತನಗೆ ಬೇಕಾದ ಹಾಗೆ ಬಳಿಸಿಕೊಳ್ಳುತ್ತದೆ ಮತ್ತು ಸದಾ ತನ್ನ ಅಂಕೆಯಲ್ಲಿ ಸದಾ ಇಟ್ಟುಕೊಳ್ಳಬೇಕು ಎಂದೂ ಬಯಸುತ್ತದೆ.

## ಮಹಿಳಾ ಮೀಸಲಾತಿ ಮಸೂದೆಯ ಕಥೆ

ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರೀಯವಾಗಿ ಅಸಂಖ್ಯಾತ ಮಹಿಳೆಯರು ಪಾಲ್ಗೊಂಡಿದ್ದರೆಂಬುದು ಎಲ್ಲರಿಗೂ ತಿಳಿದ ವಿಷಯ. ದೇಶದ ಮಹಿಳಾ ಚಳುವಳಿಯ ಗಟ್ಟಿ ತಳಪಾಯಕ್ಕೆ ಈ ಹೋರಾಟವೂ ಕೊಡುಗೆ ನೀಡಿತೆಂದರೆ ತಪ್ಪಾಗಲಾರದು. ಅಂತಾರಾಷ್ಟ್ರೀಯ ಮಟ್ಟದಲ್ಲಿ ಕೂಡ ನಡೆದ ಬೆಳವಣಿಗೆಗಳು ೭೦ರ ದಶಕದ ಹೊತ್ತಿಗೆ ರಾಷ್ಟ್ರದಲ್ಲಿ ಒಂದು ಹಂತದ ಮಹಿಳಾ ಸಮೂಹದ ಸಂಘಟನಾ ಪ್ರಜ್ಞೆಗೆ ಕಾರಣವಾಯಿತು. ೧೯೭೫ನ್ನು ವಿಶ್ವಸಂಸ್ಥೆ ಅಂತಾರಾಷ್ಟ್ರೀಯ ಮಹಿಳಾ ವರ್ಷವೆಂದು ಘೋಷಿಸುವ ಮೂಲಕ ಮಹಿಳೆಯರ ಹಕ್ಕು-ಅಧಿಕಾರಗಳತ್ತ ವಿವಿಧ ದೇಶಗಳ ಸರ್ಕಾರಗಳು ಗಮನ ಹರಿಸಲೇಬೇಕು ಎಂಬ ಒತ್ತಾಸೆಯನ್ನು ನೀಡಿತು. ೧೯೭೫ರಿಂದೀಚೆಗೆ ಮಹಿಳಾಪರ ಚಿಂತನೆಗಳಿಗೆ ವ್ಯಾಪಕತೆ ಸಿಕ್ಕಿದ್ದು, ಸಂಘಟನೆಗಳು ಮಹಿಳೆಯರನ್ನು ಬಾಧಿಸುವ ಹಲವು ಪ್ರಶ್ನೆಗಳನ್ನು ಎತ್ತಿಕೊಂಡು ನಡೆಸಿದ ಹೋರಾಟಗಳು ತೆಗೆದುಕೊಂಡ ಸ್ಪಷ್ಟ ನಿಲುವುಗಳು ಮಹಿಳೆಯರ ಪ್ರಶ್ನೆಗಳನ್ನು ಮುನ್ನೆಲೆಗೆ ತಂದಿತು ಮತ್ತು ಆದ್ಯತಾ ವಿಭಾಗವಾಗಿ ವ್ಯಾಪಕ ಚರ್ಚೆಗಳು ನಡೆಯುವಂತಾಯಿತು. ಈ ಸಂಗತಿಗಳು ಅಥವಾ ಬೆಳವಣಿಗೆಗಳು ಮಹಿಳೆಯರನ್ನು ರಾಜಕೀಯದ ಸಂದರ್ಭದಲ್ಲೂ ಪರಿಗಣಿಸಬೇಕಾದ ಒತ್ತಡವನ್ನು ನಿರ್ಮಿಸಿದವು. ಹಾಗಾಗಿಯೇ ೧೯೯೬ರ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ಎಲ್ಲ ಪಕ್ಷಗಳೂ ತಮ್ಮ ಚುನಾವಣಾ ಪ್ರಣಾಳಿಕೆಗಳಲ್ಲಿ ೩೩% ಮಹಿಳಾ ಮೀಸಲಾತಿಯನ್ನು ಬೆಂಬಲಿಸುವ ಅಂಶವನ್ನು ಪ್ರಕಟಿಸಿದ್ದರು. ಈ ಪ್ರಸ್ತಾಪ ಮತ ಗಳಿಕೆಗಾಗಿ ಮಾಡಿದ ಓಲೈಕೆಯ ರಾಜಕಾರಣ ಮಾತ್ರ ಆಗಿತ್ತು ಎಂಬುದು ನಂತರದ ಬೆಳವಣಿಗೆಗಳಿಂದ ಈಗ

ಸ್ಪಷ್ಟವಾಗಿದೆ. ಆದರೂ ಸಾಮಾಜಿಕ ನೆಲೆಗಳಲ್ಲಿ ಬೆಳೆದ ಹೋರಾಟಗಳು ರಾಜಕೀಯ ಪಕ್ಷಗಳ ಮೇಲೆ ಅಂಥದ್ದೊಂದು ಅನಿವಾರ್ಯತೆಯನ್ನು ಹೇರಿದವು ಎಂಬುದನ್ನು ಗುರುತಿಸಬೇಕು. ಅದೇ ಸಂದರ್ಭದಲ್ಲಿ ಆಳುವ ವರ್ಗದ ವರ್ಗ ಗುಣವನ್ನೂ ನಾವು ಅರ್ಥ ಮಾಡಿಕೊಳ್ಳಬೇಕು. ಅದೆಂದರೆ ತನಗೆ ಬೇಕಾದುದನ್ನು ಬೇಕಾದಾಗ ಬೇಕಾದ ರೀತಿಯಲ್ಲಿ ಬಳಸಿಕೊಳ್ಳುವ ಮತ್ತು ನಂತರ ಮೂಲೆಗೆ ತಳ್ಳುವ ಅಥವಾ ಮತ್ತು ಮರುಬಳಕೆಗಾಗಿ ಕಾಪಿಟ್ಟುಕೊಳ್ಳುವ ಪ್ರವೃತ್ತಿ. ಇಂಥದ್ದೊಂದು ಚುನಾವಣಾ ರಾಜಕಾರಣದಲ್ಲಿಯೂ ಮೆರೆಯಿತು ಮತ್ತು ಮೆರೆಯುತ್ತಿವೆ.

### ಮೀಸಲಾತಿ ಮಸೂದೆಯ ಮೊದಲ ಹೆಜ್ಜೆ

೯೬ ರ ಚುನಾವಣೆಯ ನಂತರ ಅಧಿಕಾರ ಸ್ವೀಕರಿಸಿದ ದೇವೇಗೌಡ ನೇತೃತ್ವದ ಯುನೈಟೆಡ್ ಫ್ರಂಟ್ ಸರ್ಕಾರ ಮೊದಲ ಅಧಿವೇಶನದ ಕೊನೆಯ ದಿನವಾದರೂ ಪ್ರಾಮಾಣಿಕವಾಗಿ ಮಹಿಳಾ ಮೀಸಲಾತಿ ಮಸೂದೆಯನ್ನು ಸದನದಲ್ಲಿ ಮಂಡಿಸಿತು. ತಮ್ಮ ಪ್ರಣಾಳಿಕೆಗೆ ಬದ್ಧರಾಗಿ ನಡೆದುಕೊಂಡಿದ್ದರೆ ಸರ್ವಾನುಮತದಿಂದ ಮಸೂದೆ ಅಂಗೀಕಾರವಾಗಬೇಕಿತ್ತು. ಆದರೆ ಅದು ನಡೆಯಲಿಲ್ಲ. ಅಧಿಕಾರಕ್ಕೆ ಬಂದರೆ ಮೀಸಲಾತಿ ಜಾರಿಗೆ ತರುವ ವಿರೋಧ ಪಕ್ಷವಾದರೆ ಸರ್ಕಾರದ ಮೇಲೆ ಒತ್ತಾಯ ತರುವೆವೆಂಬ ತಮ್ಮ ಚುನಾವಣಾ ಭರವಸೆಯನ್ನು ಪಕ್ಷಗಳು ಮರೆತವು. ಇಲ್ಲಿ ಪ್ರಸ್ತಾಪಿಸಲೇಬೇಕಾದ ಅಂಶವೆಂದರೆ, ತಮ್ಮ ಪಕ್ಷಗಳ ಮಹಿಳಾ ಪರವಾದ ಸೈದ್ಧಾಂತಿಕ ಬದ್ಧತೆಗನುಗುಣವಾಗಿ ಸ್ಪಷ್ಟ ಬೆಂಬಲವನ್ನು ಸೂಚಿಸಿದ್ದು ಎಡ ಪಕ್ಷಗಳು ಮಾತ್ರ. ಈ ಅಂಶವನ್ನು ಈ ದೇಶದ ಚರಿತ್ರೆ ಎಂದಿಗೂ ಮರೆಯಬಾರದು ಮತ್ತು ಮಹಿಳೆಯರನ್ನು ಮಾತೆಯರೆಂದು ಗೌರವಿಸುವುದಾಗಿ ಹೇಳಿಕೊಳ್ಳುವ ಬಿ.ಜೆ.ಪಿ. ಚುನಾವಣೆಯ ಸಂದರ್ಭದಲ್ಲಿ ದೇಶದ ಮಹಿಳೆಯರಿಗೆ ಕೊಟ್ಟ ಮಾತಿಗೆ ವ್ಯತಿರಿಕ್ತವಾಗಿ ಅಸಂವಿಧಾನಿಕ ಕಾರಣವನ್ನೊಡ್ಡಿ ಪ್ರಥಮ ವಿಘ್ನವನ್ನೊಡ್ಡಿದ ಪಕ್ಷ ಎಂಬುದನ್ನು ಅಳಿಸಿ ಹಾಕಲಾಗದು.

### ಅಂದು ಸದನದಲ್ಲಿ ನಡೆದದ್ದೇನು?

ಮಸೂದೆಯ ಮಂಡನೆಯಾದಾಗ ಅಂದು ಬಿ.ಜೆ.ಪಿ.ಯನ್ನು ಪ್ರತಿನಿಧಿಸುತ್ತಿದ್ದ ಸಂಸದೆ ಉಮಾಭಾರತಿಯವರು ಪ್ರಸಕ್ತ ಮೀಸಲಾತಿ ಮಸೂದೆಯಲ್ಲಿ ಇತರ ಹಿಂದುಳಿದ ವರ್ಗಗಳ ಮಹಿಳೆಯರಿಗೆ ಒಳಮೀಸಲಾತಿ ಕಲ್ಪಿಸುವ ಅಂಶವನ್ನು ಸೇರಿಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟರು. ಪ್ರಸ್ತುತ ನಮ್ಮ ಸಂವಿಧಾನದಲ್ಲಿ ಎಸ್.ಸಿ. ಮತ್ತು ಎಸ್.ಟಿ. ವಿಭಾಗಕ್ಕೆ ಮೀಸಲಾತಿ ಬಂದರೂ ಸಹಜವಾಗಿಯೇ ಆ ವಿಭಾಗಕ್ಕೆ ಅವರ ಪಾಲಿನ ಮೀಸಲಾತಿ ದೊರೆಯುತ್ತದೆ. ಆದರೆ ಇತರ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಮೂಲ ಸಂವಿಧಾನದಲ್ಲಿ ಇಲ್ಲದಿರುವುದರಿಂದ ಕೇವಲ ಮಹಿಳಾ ಮೀಸಲಾತಿಯಲ್ಲಿ ಮಾತ್ರ ಆ ವಿಭಾಗಕ್ಕೆ ಮೀಸಲಾತಿ ಕಲ್ಪಿಸಲು ಸಾಧ್ಯವಿಲ್ಲ. ಎಂದರೆ ಇಂತಹ ಒಂದು ಅಸಾಧು ಬೇಡಿಕೆಯನ್ನು ಒಂದು ರಾಷ್ಟ್ರೀಯ ಪಕ್ಷದ ಮಹಿಳಾ ಸಂಸದರು ಸದನದಲ್ಲಿ ಕೇವಲ ಒಬ್ಬ ವ್ಯಕ್ತಿಯಾಗಿ ಎತ್ತಿ ಬಿಡಲು ಸಾಧ್ಯವೇ? ಸಾಮಾನ್ಯ ತಿಳುವಳಿಕೆಯ ನೆಲೆಯಲ್ಲಿ ನೋಡುವುದಾದರೆ, ಇಂತಹ ಒಂದು ಚಾರಿತ್ರಿಕ

ಮಸೂದೆಯ ಮೇಲೆ ನಡೆಯುವ ಚರ್ಚೆಯಲ್ಲಿ ರಾಷ್ಟ್ರೀಯ ಪಕ್ಷದ ಪ್ರತಿನಿಧಿಯೊಬ್ಬರು ತಮ್ಮ ವೈಯಕ್ತಿಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. ಹಾಗೊಂದು ವೇಳೆ ಆಗಿದ್ದಿದ್ದರೆ ಆ ಪಕ್ಷ ಅದು ತನ್ನ ಅಭಿಪ್ರಾಯ ಅಲ್ಲವೆಂದು ಸ್ಪಷ್ಟಪಡಿಸಬೇಕಾಗುತ್ತದೆ. ಇಲ್ಲವಾದಲ್ಲಿ ಅದರ ಹೊಣೆ ಹೊತ್ತುಕೊಳ್ಳಬೇಕಾಗುತ್ತದೆ. ಈ ಚರ್ಚೆಯ ನಂತರ ಮಸೂದೆಯ ಕುರಿತು ಪರಿಶೀಲಿಸಿ ವರದಿ ನೀಡಲು ಸಿ.ಪಿ.ಐ. ಸದಸ್ಯೆ ಗೀತಾ ಮುಖರ್ಜಿಯವರ ನೇತೃತ್ವದಲ್ಲಿ ಸದನ ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯು ಮಸೂದೆಯ ಸಾಧಕ ಬಾಧಕಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕೇವಲ ೩ ತಿಂಗಳಲ್ಲಿ ದಾಖಲೆಯ ವರದಿಯಾಗಿ ಪ್ರಸಕ್ತ ಇರುವ ರೀತಿಯಲ್ಲಿಯೇ ಮಸೂದೆಯ ಮಂಡನೆಯಾಗಬೇಕು. ನೆಲದ ಅನುಭವದ ಆಧಾರದಲ್ಲಿ ಮುಂದಿನ ದಿನಗಳಲ್ಲಿ ಅಗತ್ಯ ತಿದ್ದುಪಡಿ ತರಬಹುದು ಎಂದು ಶಿಫಾರಸ್ಸು ಮಾಡಿತ್ತು. ಈ ಮಸೂದೆಯ ಕುರಿತು ಯು.ಪಿ.ಎ. ಆಡಳಿತದಲ್ಲಿ ಕೂಡ ಕಾಂಗ್ರೆಸ್ ಸಂಸದ ಪಚ್ಚೆಯಪ್ಪನ್ ನೇತೃತ್ವದಲ್ಲಿ ರಚನೆಯಾದ ಸಮಿತಿ ದೇಶದಾದ್ಯಂತ ಸಂಚರಿಸಿ ಅಭಿಪ್ರಾಯ ಸಂಗ್ರಹಿಸಿದ ಮೇಲೂ ಅಂತಹುದೇ ಅಭಿಪ್ರಾಯಕ್ಕೆ ಬಂದಂತಿದೆ. ಹಾಗಾಗಿಯೇ ೨೦೧೦ ರ ಮಾರ್ಚ್ ತಿಂಗಳಲ್ಲಿ ಮೂಲ ಕರಡು ಮಸೂದೆಯೇ ರಾಜ್ಯಸಭೆಯಲ್ಲಿ ಮಂಡನೆಯಾಗಿ ಗದ್ದಲದ ನಡುವೆ ಅಂಗೀಕಾರಗೊಂಡಿದೆ.

## ಏನೀ ಹಿಂದುಳಿದ ವರ್ಗಗಳ ಹೆಸರಿನಲ್ಲಿ ರಾಜಕಾರಣ?

ಮೇಲ್ನೋಟಕ್ಕೆ ಈ ವಾದ ಸರಣಿ ದೇಶದ ಜನಸಂಖ್ಯೆಯ ಬಹುಭಾಗವಿರುವ ಇತರ ಹಿಂದುಳಿದ ವರ್ಗಗಳ ಮಹಿಳೆಯರ ಪರವಾಗಿರುವುದು ಸತ್ಯ. ಆದರೆ ಇದು ಮಹಿಳಾ ಮೀಸಲಾತಿ ಮಸೂದೆ ಜಾರಿಯಾಗದಿರಲು ಅನುಸರಿಸಿದ ತಂತ್ರ. ಹೇಗೆಂದರೆ,

೧. ಈಗ ಈ ಮೀಸಲಾತಿ ಮಸೂದೆಗೆ ೧೪ ವರ್ಷ. ಈ ಅವಧಿಯಲ್ಲಿ ಒಳ ಮೀಸಲಾತಿಯನ್ನು ಒತ್ತಾಯಿಸುತ್ತಿರುವ ಯಾವ ಪಕ್ಷಗಳೂ ಇತರ ಹಿಂದುಳಿದ ವರ್ಗಗಳಿಗೆ ಮೂಲ-ಸಂವಿಧಾನದಲ್ಲಿ ತಿದ್ದುಪಡಿ ತಂದು ಮಹಿಳಾ ಮೀಸಲಾತಿ ಮಸೂದೆಗೆ ಸಹಜವಾಗಿ ಅನ್ವಯವಾಗುವಂತೆ ಮಾಡುವತ್ತ ಒಂದು ಸಣ್ಣ ಪ್ರಸ್ತಾಪವನ್ನೂ ಮಾಡಲಿಲ್ಲ.

೨. ದೇಶದ ಸಂವಿಧಾನದ ಆಶಯಕ್ಕೆ ವಿರುದ್ಧವಾಗಿ ಆಳವಾಗಿ ಬೇರೂರಿರುವ ಜಾತಿ ವ್ಯವಸ್ಥೆಯನ್ನು ಹೊಂದಿರುವ ಈ ದೇಶದಲ್ಲಿ ಸಹಜವಾಗಿಯೇ ಎಲ್ಲ ರಾಜ್ಯಗಳಲ್ಲಿಯೂ ಸಂಖ್ಯಾ ಪ್ರಾಬಲ್ಯ ಹೊಂದಿರುವ ಜನಾಂಗದ ಜನರೇ ಜನಪ್ರತಿನಿಧಿಗಳಾಗಿ ಆಯ್ಕೆಯಾಗಿ ಬರುತ್ತಿದ್ದಾರೆ. ಇದು ದೃಗ್ಗೋಚರ ಸತ್ಯ. ಸಂವಿಧಾನದಲ್ಲಿ ತಿದ್ದುಪಡಿ ಕೇಳಿದರೆ ಈ ಅಂಶ ಹೊರಬಂದು ಬಿಡುವುದರಿಂದ ಮಹಿಳಾ ಮೀಸಲಾತಿ ಮಸೂದೆಗೆ ಒಪ್ಪಿಗೆ ಕೊಡಲೇಬೇಕಾದ ಅನಿವಾರ್ಯತೆ ಬರುತ್ತವೆ. ಇದಕ್ಕೆ ಉದಾಹರಣೆ ಕರ್ನಾಟಕದಲ್ಲಿ ಆಯ್ಕೆಯಾಗಿ ಬಂದಿರುವ ೬ ಮಹಿಳೆಯರಲ್ಲಿ ೪ ಜನ ಇತರ ಹಿಂದುಳಿದ ವರ್ಗಕ್ಕೆ ಸೇರಿದವರು. ಈ ತಂತ್ರದ ಭಾಗವಾಗಿಯೇ ಐ.ಕೆ. ಗುಜ್ರಲ್ ನೇತೃತ್ವದಲ್ಲಿ ಸರ್ಕಾರ ಮತ್ತೊಮ್ಮೆ ಮಸೂದೆಯನ್ನು ಸಂಸತ್ತಿ

ನಲ್ಲಿ ಮಂಡಿಸಲು ಪ್ರಯತ್ನಿಸಿದಾಗ ಯಾದವ ತ್ರಯರು ಮತ್ತು ಪಾಸ್ವಾನ್‌ರಂತವರು ಇತರ ಹಿಂದುಳಿದ ವರ್ಗಗಳ ಮೀಸಲಾತಿಯ ಪ್ರಶ್ನೆಯನ್ನೆತ್ತಿಕೊಂಡು ಗದ್ದಲ ಎಬ್ಬಿಸಿದರು. ಅಷ್ಟೇ ಅಲ್ಲದೇ ಅತ್ಯಂತ ಅನಾಗರಿಕವಾಗಿ ಮಸೂದೆಯ ಪ್ರತಿಯನ್ನು ಹರಿದು ಪ್ರಧಾನಮಂತ್ರಿಯವರ ಮುಖಕ್ಕೆ ಎಸೆಯುವಷ್ಟು ಕೀಳುಮಟ್ಟಕ್ಕೆ ಇಳಿದದ್ದು ಈ ದೇಶ ವಾಸಿಗಳು ಕಂಡ ಸತ್ಯ. ಇದರ ಮುಂದುವರೆದ ಭಾಗವನ್ನೇ ನಾವು ಮಾರ್ಚ್ ೨೦೧೦ರಲ್ಲಿ ಮಸೂದೆ ಮಂಡನೆ ಯಾದಾಗಲೂ ಕಂಡಿದ್ದೇವೆ. ಎಂದರೆ ೧೪ ವರ್ಷಗಳಲ್ಲಿ ಅವರ ಆಲೋಚನಾ ಕ್ರಮದಲ್ಲಿ ಒಂದಿಷ್ಟು ಬದಲಾವಣೆಗಳಾಗಿಲ್ಲ ಎಂಬುದಕ್ಕೆ ಇದು ಸಾಕ್ಷಿ. ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿಯ ಮಾರ್ಗದಿಂದ ಗೆದ್ದು ಬಂದ ಮಹಿಳೆಯರು ಸಾಧಿಸಿದ ಸಾಧನೆಗಳು, ತೋರಿಸು ತ್ತಿರುವ ಯಶೋಗಾಥೆಗಳು ಇವರ ಗಮನಕ್ಕೆ ಬಂದೇ ಇಲ್ಲ ಎನ್ನುವುದೇ ಈ ನೆಲದ ದುರಂತ.

ಮೀಸಲಾತಿ ಮಸೂದೆಯನ್ನು ವಿರೋಧಿಸುತ್ತಿರುವವರ ಉದ್ದೇಶ ನೈಜವಾದುದಲ್ಲ ಎಂಬುದಕ್ಕೆ ಮತ್ತೊಂದು ಉದಾಹರಣೆಯೆಂದರೆ, ೯೦ರ ದಶಕದಲ್ಲಿ ಮಹಿಳಾ ಮೀಸಲಾತಿ ಮಸೂದೆ ಚರ್ಚೆಗಿರುವಾಗಲೆ ಬಹುಸಂಖ್ಯಾತ ದಲಿತ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದವರೆ ಹೆಚ್ಚಿರುವ ಕೃಷಿ-ಕೂಲಿಕಾರರ ಕನಿಷ್ಟ ವೇತನದ ಮಸೂದೆಯೂ ಸಂಸತ್ತಿನ ಕಡತಗಳ ಮೂಲೆಯಲ್ಲಿ ಕುಳಿತಿತ್ತು. ವಿಪರ್ಯಾಸವೆಂದರೆ ಮಹಿಳಾ ಮೀಸಲಾತಿ ಮಸೂದೆಯಲ್ಲಿ ಈ ವರ್ಗದ ಮಹಿಳೆಯರಿಗೆ ಪ್ರತ್ಯೇಕ ಮೀಸಲಾತಿ ಕೇಳಿ ಗದ್ದಲ ಎಬ್ಬಿಸುತ್ತಿರುವ ಜನರೇ ಆ ಮಸೂದೆಯನ್ನು ವಿರೋಧಿಸಿದ್ದವರು. ಇಂತಹ ಮಸೂದೆ/ಕಾನೂನು ಜಮೀನ್ದಾರರ ಹಿತಕ್ಕೆ ವಿರುದ್ಧವಾಗಿದ್ದು ದೇಶದಲ್ಲಿ ಅಲ್ಲೋಲ ಕಲ್ಲೋಲವಾಗಿ ಬಿಡುತ್ತದೆ ಎಂಬ ವಾದ!

ಆ ಸಂದರ್ಭದಲ್ಲಿಯೇ ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ ಈ ಎರಡೂ ಮಸೂದೆಗಳ ಬಗ್ಗೆ ದೇಶ ವ್ಯಾಪೀ ಚರ್ಚೆಯಾಗುವಂತೆ ಪ್ರಯತ್ನಿಸಿತ್ತು. ಮಹಿಳಾ ಮೀಸಲಾತಿ ಮಸೂದೆಯ ವಿರೋಧಿಗಳು ಅಂದಿನಿಂದ ಇಂದಿನವರೆಗೂ ವಿವಿಧ ಕಾರಣಗಳನ್ನೊಡ್ಡಿ ವಿರೋಧ ವ್ಯಕ್ತಪಡಿಸುತ್ತಲೇ ಬಂದಿದ್ದಾರೆ. ಈ ಮಸೂದೆ ಅಂಗೀಕಾರವಾದರೆ ವಿಷ ಕುಡಿಯುವುದಾಗಿ ಶರದ್‌ಯಾದವ್‌ರಂತಹ ಹಿರಿಯ ರಾಜಕಾರಣಿಗಳು ಬೆದರಿಕೆಯೊಡ್ಡುವವರೆಗೂ ಹೋಗುತ್ತಾ ರೆಂದರೆ ಅಧಿಕಾರ ಸ್ಥಾನವನ್ನು ಮಹಿಳೆಯರೊಂದಿಗೆ ಹಂಚಿಕೊಳ್ಳಲು ಸಿದ್ಧರೇ ಇಲ್ಲ ಎಂದರ್ಥ ವಲ್ಲವೇ?

ಈಗ ಮಸೂದೆ ರಾಜ್ಯಸಭೆಯ ಹೊಸ್ತಿಲು ದಾಟಿದೆ. ಆದರೆ ಲೋಕಸಭೆಯಲ್ಲಿ ಅಲ್ಲಿ ತೋರಿಸಿದಷ್ಟೇ ದಿಟ್ಟತನವನ್ನು ಆಡಳಿತಾರೂಢ ಕಾಂಗ್ರೆಸ್ ಪಕ್ಷ ತೋರುತ್ತಿಲ್ಲ. ರಾಜ್ಯಸಭೆಯಲ್ಲಿ ಮಸೂದೆಯ ಮಂಡನೆಯಾಗಿದ್ದು ಕೂಡ ಒಂದು ರಾಜಕೀಯ ತಂತ್ರವೆಂದೇ ಭಾವಿಸುವಂತಾಗಿದೆ. ಯಾಕೆಂದರೆ ಪೋತಾ ಕಾಯ್ದೆಯನ್ನು ಜಾರಿಗೆ ತರಲು ಜಂಟಿ ಅಧಿವೇಶನ ಕರೆಯಲಾಗಿತ್ತು. ಅಲ್ಲದೇ ಇನ್ನೂ ಹಲವು ಮಸೂದೆಗಳಿಗೆ ವಿರೋಧ ಮತ್ತು ಮಿತ್ರ ಪಕ್ಷಗಳ ಸಹಮತವಿಲ್ಲದೆಯೂ ಏನಕೇನ ಪ್ರಕಾರೇಣ ಅಧಿಕಾರಸ್ಥ ಪಕ್ಷಗಳು ಮಸೂದೆಗಳನ್ನು ಅಂಗೀಕರಿಸಿಕೊಂಡಿವೆ. ಈ

ಮಸೂದೆಯ ಜಾರಿಗೆ ಬೇಕಿರುವುದು ಕೇವಲ ರಾಜಕೀಯ ದೃಢ ನಿರ್ಧಾರ ಮಾತ್ರ. ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯ ಶತಮಾನೋತ್ಸವದ ನೆನಪಿನಲ್ಲಿ ರಾಜ್ಯಸಭೆ ದಾಟಿದ ಮಸೂದೆ ಆ ದಿನಾಚರಣೆ ವಿಶ್ವದಾದ್ಯಂತ ಸಂಭ್ರಮದಿಂದ ಆಚರಿಸಿದ ದಿನದ ಶತಮಾನದ ಅಂಚಿಗೆ ಎಂದರೆ ೨೦೧೧ರ ಮಾರ್ಚ್ ಗತಿಸಿದರೂ ಹಾಗೆಯೇ ನೆನೆಗುದಿಗೆ ಬಿದ್ದಿರುವುದು ಚಾರಿತ್ರಿಕ ನಿರ್ಲಕ್ಷಕ್ಕೆ ಸಾಕ್ಷಿಯಾಗಿದೆ.

...

೨

# ಮೀಸಲಾತಿ : ಒಂದು ಅವಲೋಕನ

**ಶ್ರೀ ಪ್ರಕಾಶ ಕೆ.**

ದಶಕ ದಾಟಿದರೂ ಜಾರಿಯಾಗದಿರುವ, ಶಾಸನಸಭೆಗಳಲ್ಲಿ ಶೇ. ೩೩ರಷ್ಟು ಮಹಿಳಾ ಮೀಸಲಾತಿ ಮಸೂದೆಯು ನಮ್ಮ ಸಾಮಾಜಿಕ-ರಾಜಕೀಯ ವ್ಯವಸ್ಥೆಯಲ್ಲಿ ಹಲವು ವಾದಗಳಿಗೆ ಎಡೆ ಮಾಡಿಕೊಟ್ಟಿದೆ. ಸಂಸತ್ತಿನ ಮೂರರಲ್ಲಿ ಎರಡಕ್ಕಿಂತ ಹೆಚ್ಚು ಪಕ್ಷಗಳು ಈಗಿರುವ ಮಸೂದೆಯ ಪರವಾಗಿದ್ದರೂ ಮಸೂದೆಯನ್ನು ಅಂಗೀಕರಿಸಲು ಮೀನಮೇಷ ಎಣಿಸಲಾಗುತ್ತಿದೆ. ಮಸೂದೆ ಯಥಾವತ್ತಾಗಿ ಜಾರಿಯಾದರೆ ಹಿಂದುಳಿದ ಬಡಮಹಿಳೆಯರಿಗೆ ಅನ್ಯಾಯವಾಗುತ್ತದೆಂದು ವಾದಗಳನ್ನು ಮಾಡಲಾಗುತ್ತಿದೆ. ಈ ವಾದದ ನೆರಳಲ್ಲಿ. ಮಸೂದೆಯನ್ನು ಸಂಸತ್ತಿನ ಕಪಾಟಿನಲ್ಲ ಭದ್ರವಾಗಿ ಹೂತುಬಿಡುವ ಹುನ್ನಾರಗಳು ನಡೆದಿವೆ.

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ದುರ್ಬಲ ವಿಭಾಗಗಳಿಗೆ ಮೀಸಲಾತಿಯನ್ನು ನೀಡಬೇಕೆಂಬ ಪ್ರಶ್ನೆ ಬಂದಾಗಲೆಲ್ಲಾ ನಮ್ಮ ದೇಶದಲ್ಲಿ ಗಲಭೆಗಳು, ವಿರೋಧಗಳು, ಇತ್ತೀಚಿಗೆ ಆತ್ಮಾಹುತಿಗಳು ನಡೆಯುತ್ತಿರುವುದನ್ನು ಮತ್ತು ಅದಕ್ಕೆ ಕುಮ್ಮಕ್ಕು ನೀಡುತ್ತಿರುವುದನ್ನು ಕಾಣುತ್ತಿದ್ದೇವೆ. ಆದರೆ ಮೀಸಲಾತಿಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಸಬಲವಾಗಿರುವ ವರ್ಗಗಳಿಗೆ ಸಿಗುವಾಗ ಅದನ್ನು ಅಗತ್ಯವೆಂದು ಮಹತ್ವದ ಕಾರ್ಯವೆಂದು, ಮನಗಾಣಿಸಲು ಪ್ರಯತ್ನಗಳು ನಡೆಯುವುದನ್ನು ಕಾಣುತ್ತೇವೆ.

ಸಂವಿಧಾನ ರಚನೆಯೊಳಗೇ ಪ.ಜಾ./ಪ.ಪಂ.ಕ್ಕೆ ನೀಡಲಾಗಿರುವ ಮೀಸಲಾತಿ ಪ್ರಶ್ನೆಯಲ್ಲಾಗಲೀ ಅಥವಾ ಹಿಂದುಳಿದ ವರ್ಗಗಳಿಗೆ ಮಂಡಲ್ ವರದಿಯ ಶಿಫಾರಸ್ಸುಗಳನ್ನು ಅನುಸರಿಸಿ ನೀಡಬೇಕೆನ್ನುವ ಮೀಸಲಾತಿ ಪ್ರಶ್ನೆಯಲ್ಲಾಗಲೀ, 'ಮುಂದುವರೆದ' ಜಾತಿಗಳ ಲಕ್ಷಾಂತರ ಯುವಕ-ಯುವತಿಯರು. ತೀವ್ರ ಆತಂಕಕ್ಕೆ ಒಳಗಾಗುತ್ತಾರೆ. ಸರ್ಕಾರಿ ಶಿಕ್ಷಣ ಮತ್ತು ಉದ್ಯೋಗಗಳು ಕೇವಲ ಮೀಸಲಾತಿಯುಳ್ಳ ಜನರಿಗೇ ಲಭಿಸುತ್ತದೆ ಎಂದು, ಮೀಸಲಾತಿ ವಿಸ್ತರಣೆಯಾದರೆ ನೇರ ಸ್ಪರ್ಧೆಯಲ್ಲಿ ಗಳಿಸಲು ತಮಗಿರುವ ಅವಕಾಶವನ್ನು ಕಿತ್ತುಕೊಳ್ಳಲಾಗುತ್ತದೆ

ಎಂದು ಇವರು ಭಾವಿಸುತ್ತಾರೆ. ಹೀಗಾಗಿ ಪ.ಜಾ./ಪ.ಪಂ. v/s ಇತರರು, ಪ.ಜಾ./ ಪ.ಪಂ./ ಓ.ಬಿ.ಸಿ. v/s ಇತರರು ಎಂಬ ಗುಂಪುಗಳಾಗಿ ವಿಭಜನೆಯಾಗುವುದನ್ನು ಕಾಣುತ್ತೇವೆ.

ಮಹಿಳಾ ಮೀಸಲಾತಿಯೂ ತಮಗಿರುವ ಅವಕಾಶಗಳನ್ನು ಕಿತ್ತುಕೊಳ್ಳಬಹುದು ಎಂಬ ಸ್ಥಾಪಿತ-ಹಿತಾಸಕ್ತಿಗಳ ಆತಂಕಕ್ಕೆ ಕಾರಣವಾಗಿದೆ. ಆದರೆ ಇಲ್ಲಿ ಸ್ವಲ್ಪ ವ್ಯತ್ಯಾಸವಿದೆಯಷ್ಟೆ. ಕೇವಲ ಮಹಿಳಾ ಮೀಸಲಾತಿಯೆಂದರೆ, ಅದು ಮೇಲ್ವರ್ಗದ ಶ್ರೀಮಂತ ಮಹಿಳೆಯರಿಗಷ್ಟೇ ಸೀಮಿತವಾಗಿ ಬಿಡುವ ಅಪಾಯವಿದೆ. ಆದ್ದರಿಂದ ಮಹಿಳಾ ಮೀಸಲಾತಿಯೊಳಗೇ ಹಿಂದುಳಿದ ಜಾತಿಗಳಿಗೆ ಮೀಸಲಾತಿ ಪ್ರಮಾಣವನ್ನು ನಿಗದಿಪಡಿಸಬೇಕೆಂಬ ವಾದ ಮಾಡಲಾಗುತ್ತಿದೆ. ಭಾರತದ ಜಾತಿ ರಾಜಕಾರಣದ ಡೈನಮಿಕ್ಸ್‌ನ್ನು ಗಮನಿಸುತ್ತಿರುವವರಿಗೆ ಒಂದು ವಿಷಯ ಅರ್ಥವಾಗುತ್ತದೆ : ಶಾಸನಸಭೆಗಳಿಗೆ ಈಗಿರುವ ಸ್ಥಾನ ಮೀಸಲಾತಿಯಲ್ಲಿ ಪ.ಜಾ./ಪ.ಪಂ. ದವರನ್ನು ಹೊರತುಪಡಿಸಿ ಉಳಿದ ಕ್ಷೇತ್ರಗಳಲ್ಲಿ ಕ್ಷೇತ್ರ-ಜಾತಿ ಬಲಾಬಲಗಳನ್ನು ಆಧರಿಸಿಯೇ ಪುರುಷ ಅಭ್ಯರ್ಥಿಗಳು ಚುನಾವಣೆಗೆ ನಿಲ್ಲುತ್ತಾರೆ. ಈಗಿನ ಮಹಿಳಾ ಮೀಸಲು ಮಸೂದೆ ಜಾರಿಯಾದರೆ ಆಯಾ ಕ್ಷೇತ್ರಗಳಲ್ಲಿ ಪುರುಷ ಅಭ್ಯರ್ಥಿಗಳ ಬದಲಿಗೆ ಜಾತಿ ಬಲಾಬಲಗಳನ್ನು ಆಧರಿಸಿ ಮಹಿಳಾ ಅಭ್ಯರ್ಥಿಗಳು ಸ್ಪರ್ಧಿಸುತ್ತಾರೆ ಎಂಬುದನ್ನು ಗಮನಿಸಬೇಕು.

ಮೀಸಲಾತಿ ಎಂಬ ಪರಿಕಲ್ಪನೆಯೇ ಸ್ವತಂತ್ರ ಭಾರತದ ಸಾಮಾಜಿಕ ರಾಜಕಾರಣದೊಳಗೆ ಅನುಮಾನ-ಅಪನಂಬಿಕೆ ಮತ್ತು ಪರಸ್ಪರ ಶತೃತ್ವಗಳನ್ನು ಸೃಷ್ಟಿಸಬಲ್ಲ ಆಯಾಯವಾಗಿ ಹೊರಹೊಮ್ಮಿದೆ. ಮೀಸಲಾತಿ ಏಕೆ ಮತ್ತು ಹೇಗೆ ಎಂಬ ವಿಚಾರದಲ್ಲಿ ಸರಿಯಾದ ತಿಳುವಳಿಕೆಯ ಕೊರತೆ ಮತ್ತು ಕೆಲವು ಜಾತಿ/ವರ್ಗಗಳ ಹಿತಾಸಕ್ತಿಗಳು ಸಮಸ್ಯೆಯನ್ನು ಬಿಗಡಾಯಿಸಿವೆ.

## ಹಿಂದೂ ಜಾತಿ ವ್ಯವಸ್ಥೆ

"ಉತ್ಪಾದನಾ ಸಂಘಟನೆ ಮತ್ತು ವಿತರಣೆಯ ಒಂದು ವ್ಯವಸ್ಥೆಯಾಗಿ ಜಾತಿ, ಕೆಲವು ನಿರ್ದಿಷ್ಟ ಅಸಾಮಾನ್ಯ ಮತ್ತು ಏಕರೂಪವಲ್ಲದ ಸಾಂಪ್ರದಾಯಿಕ ಕಾನೂನುಗಳು ಮತ್ತು ರೂಢಿಗಳಿಂದ ನಿರ್ವಹಿಸಲ್ಪಡುತ್ತಿದೆ. ಸಾಮಾನ್ಯವಾಗಿ ಜಾತಿ ಆಧಾರಿತ ಆರ್ಥಿಕತೆಯಲ್ಲಿ ವೃತ್ತಿಗಳು (ಅಥವಾ ಆಸ್ತಿ ಹಕ್ಕುಗಳು) ಅನುವಂಶೀಯ. ಕಡ್ಡಾಯ ಮತ್ತು ಸ್ವಗೋತ್ರ ವಿವಾಹವಾಗಿವೆ. ಜಾತಿ ವ್ಯವಸ್ಥೆಯ ಸಂಘಟನಾ ಯೋಜನೆಯು ಸಾಮಾಜಿಕ ಗುಂಪುಗಳಾಗಿ (ಅಥವಾ ಜಾತಿಗಳಾಗಿ) ಜನರನ್ನು ವಿಭಜಿಸಿರುವುದರ ಮೇಲೆ ನಿಂತಿದೆ. ಇದರ ಆಧಾರದಲ್ಲಿ ಪ್ರತಿ ವೈಯಕ್ತಿಕ ಜಾತಿಯ ವೃತ್ತಿಗಳು ಮತ್ತು ಆಸ್ತಿಯ ಹಕ್ಕುಗಳು ಹುಟ್ಟು ಮತ್ತು ಅನುವಂಶೀಯತೆ ಆಧಾರದಲ್ಲಿ ಪೂರ್ವ ನಿರ್ಧಾರಿತವಾಗಿವೆ. ವೃತ್ತಿಗಳ ಮತ್ತು ಆಸ್ತಿ ಹಕ್ಕುಗಳ ವಿಭಜನೆ ಅಥವಾ ನಿರೂಪಣೆಯು ವಿವಿಧ ಜಾತಿಗಳ ನಡುವೆ ಅಸಮಾನವಾಗಿದೆ ಮತ್ತು ಶ್ರೇಣೀಕೃತವಾಗಿದೆ. ಕೆಲವು ವೃತ್ತಿಗಳನ್ನು ಮತ್ತು ಅದರಲ್ಲಿ ತೊಡಗಿರುವವರನ್ನು ಸಾಮಾಜಿಕವಾಗಿ ಕೀಳು (ಅಥವಾ ಕಲುಷಿತ) ಎಂದು ಪರಿಗಣಿಸಲಾಗಿದೆ ಮತ್ತು ಕೊನೆಯದಾಗಿ ಜಾತಿ ಆರ್ಥಿಕತೆಯನ್ನು ಸಾಮಾಜಿಕ ಬಹಿಷ್ಕಾರ (ಸಾಮಾಜಿಕ ಮತ್ತು ಆರ್ಥಿಕ ದಂಡಗಳ)ದಂತಹ ಆಯುಧಗಳ ಮೂಲಕ ನಿರ್ವಹಿಸ

ಲಾಗುತ್ತಿದೆ ಅಥವಾ ಹೇರಲಾಗಿದೆ. ಇದಕ್ಕೆ ಹಿಂದೂ ಧರ್ಮದ ತತ್ವಶಾಸ್ತ್ರದ ಅಂಶಗಳ ಸಹಾಯ ಮತ್ತು ಸಮರ್ಥನೆ ಪಡೆಯಲಾಗಿದೆ"(ಸುಖದೇವ್ ಥೋರಟ್, ಕ್ಯಾಸ್ಟ್, ಎಕನಾಮಿಕ್ ಎಕ್ಸ್‌ಕ್ಲೂಷನ್ ಅಂಡ್ ಪಾವರ್ಟಿ : ದಲಿತ ಡಿಪ್ರೈವೇಷನ್ ಇನ್ ಇಂಡಿಯಾ).

ಈ ರೀತಿ ಬಹುತೇಕ ಪಿರಮಿಡ್ ರೀತಿಯಲ್ಲಿರುವ ಹಿಂದೂ ಜಾತಿ ವ್ಯವಸ್ಥೆಯ ಮೂಲಕ ಕೆಳಸ್ತರದಿಂದ ಬಹುಸಂಖ್ಯಾತರನ್ನು ಶೋಷಣೆಗೆ ಒಳಪಡಿಸಿರುವ ಲಕ್ಷಣಗಳನ್ನು ಕಾಣಬಹುದು. - ಜಾತಿ ರೂಪದ ಹಿಂದೂ ಉತ್ಪಾದನೆ. ವಿತರಣೆ ಮತ್ತು ಉಪಭೋಗದ ವ್ಯವಸ್ಥೆಯು ಒಂದು ಚಾರಿತ್ರಿಕವಾಗಿ ನಿರ್ಮಾಣಗೊಂಡ ಪ್ರಕ್ರಿಯೆಯಾಗಿದೆ. ಶ್ರಮದ ಸಾಮಾಜಿಕ ವಿಭಜನೆ ಮತ್ತು ಅದರಲ್ಲಿ ಪಡೆಯುವ ಸಾಮಾಜಿಕ ಸಂಪತ್ತಿನ ಪಾಲು. ಅದರ ವಿಧಾನಗಳು ಕೆಲವು ಗುಂಪು ಗಳ ಮೇಲುಗೈಯನ್ನು ಸಾಬೀತುಪಡಿಸುತ್ತವೆ. ಉತ್ಪಾದನಾ ಶಕ್ತಿಗಳ ಬೆಳವಣಿಗೆಯೊಂದಿಗೆ ಮೂಡಿಬಂದ ಶ್ರಮವಿಭಜನೆಯು ಮೊದಲಿಗೆ ಶುರುವಾದದ್ದು ಪುರುಷರು ಮತ್ತು ಮಹಿಳೆಯರ ನಡುವೆ. ಹೀಗಾಗಿಯೇ ಮಹಿಳೆ ಜಗತ್ತಿನ ಮೊದಲ ಶೋಷಿತೆಯಾಗಿದ್ದಾಳೆ. ಅಂದರೆ ಸಾಮಾಜಿಕ ಸಂಪತ್ತಿನ ಒಡೆತನದಿಂದ ಮೊದಲು ಮಹಿಳೆಯನ್ನು ಬೇರ್ಪಡಿಸಲಾಗಿದೆ. ಭಾರತ ಸಂದರ್ಭ ದಲ್ಲಿ, ನಂತರ ಜಾತಿ ರೂಪದ ಶ್ರೇಣೀಕೃತ ಉತ್ಪಾದನಾ ಸಂಘಟನೆಯಿಂದ. ಅಸ್ಪೃಶ್ಯರು, ಶೂದ್ರರು ಹೀಗೆ, ಕೆಳಸ್ತರದಿಂದ ಬಹುಸಂಖ್ಯಾತರನ್ನು ಸಾಮಾಜಿಕ ಸಂಪತ್ತಿನಿಂದ ಬೇರ್ಪಡಿಸ ಲಾಯ್ತು. ಇಂತಹ ಪ್ರಕ್ರಿಯೆಯನ್ನು ಗಟ್ಟಿಗೊಳಿಸುವ ಭಾಗವಾಗಿ ಮನುಸ್ಮೃತಿ, ಹಲವು ಧಾರ್ಮಿಕ ಕೃತಿಗಳು, ಕಾನೂನುಗಳು ರಚನೆಗೊಂಡವು.

ಬಹುಸಂಖ್ಯಾತ ಶ್ರಮಾಧಾರಿತ ಮನುಷ್ಯರನ್ನು (ಮಹಿಳೆಯರನ್ನು ಒಳಗೊಂಡಂತೆ) ಸಂಪತ್ತಿನ ಮತ್ತು ಆಸ್ತಿಯ ಹಕ್ಕುಗಳಿಂದ ವಂಚಿಸುವ ಈ ಪ್ರಕ್ರಿಯೆಗೆ ಸಹಸ್ರಾರು ವರ್ಷಗಳ ಇತಿಹಾಸವೇ ಇದೆ. ವಾಸ್ತವವಾಗಿ ಹೇಳುವುದಾದರೆ, ಮೇಲ್‌ಸ್ತರದ ಪರವಾದ ಮೀಸಲಾತಿಯ ಚರಿತ್ರೆ ಇಲ್ಲಿಂದಲೇ ಪ್ರಾರಂಭವಾಗಿದೆ. ಈ ಪ್ರಕ್ರಿಯೆ ಪಾಳೇಗಾರಿ ವ್ಯವಸ್ಥೆಯ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಗರ್ಭದೊಳಗೆ ಹಲವಾರು ರೂಪಾಂತರಗಳನ್ನು ಕಂಡಿದೆ. ೨೦ ಮತ್ತು ೨೧ನೇ ಶತಮಾನಗಳ ಎಸ್.ಸಿ./ಎಸ್.ಟಿ ಮತ್ತು ಹಿಂದುಳಿದ ವರ್ಗಗಳ ಮೀಸಲಾತಿ ಪ್ರಶ್ನೆಯನ್ನು ಈ ಹಿನ್ನೆಲೆಯಲ್ಲಿ ಗಮನಿಸುವುದಾದರೆ, ಇದು ಸಹಸ್ರಾರು ವರ್ಷಗಳ ಅಮಾನವೀಯ ಮೀಸಲಾತಿಯನ್ನು ಸರಿಪಡಿಸುವ ತುಡಿತದ ಒಂದು ಸಣ್ಣ ಭಾಗವಷ್ಟೆ.

### ಮೀಸಲಾತಿ ಬೇಡಿಕೆಯ ಕೂಗು

ಸುಮಾರು ನೂರು ವರ್ಷಗಳ ಕಾಲ ಭಾರತದ ಸಂಪತ್ತಿನ ಅಧಿನಾಯಕರಾಗಿದ್ದ ಬ್ರಿಟಿಷ್ ಕಂಪನಿಗಳು - ಬಂಡವಾಳದಾರರು. ಇಲ್ಲಿನ ಜಮೀನ್ದಾರಿ/ಪಾಳೇಗಾರಿ ಶಕ್ತಿಗಳೊಂದಿಗೆ ಸಹಯೋಗವನ್ನು ಹೊಂದಿದ್ದರು. ಗ್ರಾಮೀಣ ಸಾಮಾನ್ಯ ಜನರನ್ನು ರಾಷ್ಟ್ರೀಯ ಚಳುವಳಿಯಿಂದ ದೂರ ಇರಿಸಬೇಕೆಂಬ ಹಿನ್ನೆಲೆಯಲ್ಲಿ ಈ ಬಡಂಬಡಿಕೆ ಇತ್ತು. ರಾಷ್ಟ್ರೀಯ ಚಳುವಳಿಯ ಪ್ರಭಾವಕ್ಕೆ ಒಳಗಾದ ಗ್ರಾಮೀಣ ಕೆಳಜಾತಿಗಳ ಜನ ಬ್ರಿಟಿಷರ ವಿರುದ್ಧ ಅಣಿನೆರೆಯಲು

ಮುಂದಾಗುತ್ತಿದ್ದಂತೆ ಅದನ್ನು ನಿಯಂತ್ರಿಸಲು ಬ್ರಿಟಿಷರು ಕೆಲವು ಕ್ರಮಗಳನ್ನು ರೂಪಿಸಿದರು. ಮಂಡಲ್ ವರದಿಯಲ್ಲಿ ಈ ರೀತಿ ಹೇಳಲಾಗಿದೆ.

"ಸುಮಾರು ೧೦೦ ವರ್ಷಗಳಿಂದ ಭಾರತದ ಪ್ರಾಂತೀಯ ಸರ್ಕಾರಗಳು ಸಮಾಜದ ನಿಮ್ನ ವರ್ಗಗಳು ಅಥವಾ ವಂಚಿತ ವಿಭಾಗಗಳ ಏಳಿಗೆಗಾಗಿ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿವೆ. ನಿಮ್ನ ವರ್ಗಗಳ ವಿದ್ಯಾರ್ಥಿಗಳಿಗೆ ವಿಶೇಷ ಅನುಕೂಲಗಳನ್ನು ಕಲ್ಪಿಸುವ ಶಿಕ್ಷಣ ಸಂಸ್ಥೆಗಳಿಗೆ ನೀಡುವ ಹಣಕಾಸು ನೆರವನ್ನು ನಿಯಂತ್ರಿಸಲು ೧೮೮೫ರಲ್ಲಿ ಮದ್ರಾಸ್ ಸರ್ಕಾರವು ಗ್ರಾಂಟ್-ಇನ್-ಏಡ್(Grant-in-Aid) ಕೋಡ್ ರೂಪಿಸಿತು. ನಂತರ ೧೯೨೧ರಲ್ಲಿ ರಾಜ್ಯ ವಿಧಾನ ಪರಿಷತ್ತಿನ ನಿರ್ಣಯವನ್ನು ಆಧರಿಸಿ ಮದ್ರಾಸ್ ಸರ್ಕಾರವು, ಸರ್ಕಾರಿ ಸೇವೆಗಳಲ್ಲಿ ಅಬ್ರಾಹ್ಮಣರಿಗೆ ಹೆಚ್ಚಿನ ಪ್ರಾತಿನಿಧ್ಯವನ್ನು ಒದಗಿಸಲು ಕ್ರಮವಹಿಸಿತು...."

ಬ್ರಿಟಿಷರು ತಮ್ಮದೇ ಹಿತಾಸಕ್ತಿಗಾಗಿ ಪ್ರಾರಂಭಿಸಿದ ಆಧುನಿಕ ಶಿಕ್ಷಣದ ಬಗ್ಗೆ ಎಲ್ಲರಿಗೂ ತಿಳಿದ ವಿಷಯ. ಅದರ ಲಾಭವನ್ನು ಮೊದಲಿಗೆ ಪಡೆದವರು ಭಾರತೀಯ ಬ್ರಾಹ್ಮಣರು. ಹಿಂದೂ ಶ್ರೇಣೀಕೃತ ಸಮಾಜದ ಮೇಲ್‌ಸ್ತರದಿಂದ ಕೆಳಸ್ತರದ ಕಡೆಗೆ ಆಧುನಿಕ ಬಂಡವಾಳಶಾಹಿಯ ಸೀಮಿತ ಫಲಗಳು ಹರಿಯತೊಡಗಿದ್ದು ಇಲ್ಲಿಂದಲೇ ಕಾಣಸಿಗುತ್ತದೆ. ಅಂದಿನ ಐಸಿಎಸ್ ಪರೀಕ್ಷೆಯಲ್ಲಿ ಬ್ರಿಟಿಷರು ಮತ್ತು ಭಾರತೀಯರ ನಡುವೆ ಅಸಮಾನ ಮತ್ತು ತಾರತಮ್ಯ ನೀತಿಗಳನ್ನು ಅನುಸರಿಸುತ್ತಿದ್ದುದರ ವಿರುದ್ಧ ಸುರೇಂದ್ರನಾಥ್ ಬ್ಯಾನರ್ಜಿಯಂತಹವರು ಪ್ರತಿಭಟಿಸಿದ್ದನ್ನು ಈ ಪ್ರಕ್ರಿಯೆಯಲ್ಲಿ ಗಮನಿಸಬಹುದು. ಅದರ ಆಧಾರದಲ್ಲಿ ಹೆಚ್ಚಿನ ಉದ್ಯೋಗ ತಮಗೆ ಸಿಗದಿದ್ದಾಗ ಅಥವಾ ತಾರತಮ್ಯವಾದಾಗ ಪ್ರಾರಂಭದ ಇಂಗ್ಲೀಷ್ ಶಿಕ್ಷಣ ಪಡೆದ ಬ್ರಾಹ್ಮಣರು ಪ್ರತಿಭಟಿಸಿದ್ದು ಮೀಸಲಾತಿ ಬೇಡಿಕೆಯ ಪ್ರಾರಂಭ ಹೆಜ್ಜೆಗಳು. ಇಂತಹ ಹೋರಾಟಗಳು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದ ಜೊತೆಯಲ್ಲೇ ಮೇಳೈಸಿಕೊಂಡಿತ್ತು.

ಮೈಸೂರು ಪ್ರಾಂತ್ಯದಲ್ಲಿ ನಡೆದ ಬ್ರಾಹ್ಮಣರ ಮೀಸಲಾತಿ ಚಳುವಳಿಯು ಗಮನಾರ್ಹವಾದುದು. ಮೈಸೂರಿನ ರಾಜರ ಆಡಳಿತ ಯಂತ್ರದಲ್ಲಿ ಪ್ರಮುಖ ಅಧಿಕಾರದ ಸ್ಥಾನಗಳಲ್ಲಿದ್ದವರು ದಿವಾನ್ ಶ್ರೇಷಾದ್ರಿ ಅಯ್ಯರ್, ದಿವಾನ್ ರಂಗಾಚಾರ್ಲು ಇಂತಹ ತಮಿಳುನಾಡಿನ ಬ್ರಾಹ್ಮಣರು. ತಮಿಳುನಾಡಿನ ಬ್ರಾಹ್ಮಣರಿಗಿಂತ ತಡವಾಗಿ ಆಧುನಿಕ ಶಿಕ್ಷಣದ ಲಾಭ ಪಡೆದ ಮೈಸೂರಿನ ಬ್ರಾಹ್ಮಣರಿಗೇ ಉದ್ಯೋಗಗಳನ್ನು ನೀಡಬೇಕೆಂಬ ಬೇಡಿಕೆ ಎತ್ತಲಾಯಿತು. "೧೮೮೦ ರಿಂದ ೧೯೧೦ರವರೆಗೆ ಸುಮಾರು ಮೂರು ದಶಕಗಳ ಕಾಲ ನಡೆದ ಈ ಹೋರಾಟಕ್ಕೆ ಮೈಸೂರಿನ ವೆಂಕಟಕೃಷ್ಣಯ್ಯ ಎಂಬುವರು ನೇತೃತ್ವ ಕೊಟ್ಟರು. ಮೈಸೂರು ಬ್ರಾಹ್ಮಣರಾದ ವಿಶ್ವೇಶ್ವರಯ್ಯನವರಿಗೆ ದಿವಾನಗಿರಿ ದೊರೆತ ಮೇಲೆಯೇ ಅದು ತಣ್ಣಗಾದದ್ದು" (ಜಿ.ಎನ್. ನಾಗರಾಜ್, ಐಕ್ಯರಂಗ ಪತ್ರಿಕೆ).

ಇದರ ಮುಂದುವರಿಕೆಯಾಗಿ, ಒಕ್ಕಲಿಗರು, ವೀರಶೈವರು, ಮುಸ್ಲಿಮರಲ್ಲಿ ಆಧುನಿಕ ಶಿಕ್ಷಣ ಪಡೆದ ಯುವಕರು ಸರ್ಕಾರಿ ಉದ್ಯೋಗದ ಕನಸೊತ್ತು ಆಚೆ ಬರತೊಡಗಿದರು. ಈ

ಪ್ರಕ್ರಿಯೆ ಹಲವಾರು ರಾಜ್ಯಗಳಲ್ಲಿ ವಿವಿಧ ಹಂತಗಳಲ್ಲಿ ನಡೆಯಲು ಪ್ರಾರಂಭಿಸಿತು. ಬ್ರಾಹ್ಮಣೇತರ ಜಾತಿಗಳಲ್ಲಿ ವಿದ್ಯಾವಂತರಾದ ಕೆಲವರು ಹಿಂದುಳಿದ ಮತ್ತು ಕೆಳಜಾತಿಗಳಿಗೆ ವಿದ್ಯಾಭ್ಯಾಸ ಮತ್ತು ಉದ್ಯೋಗದ ವಿಸ್ತರಣೆಗಾಗಿ ಬೇಡಿಕೆಗಳನ್ನು ಎತ್ತತೊಡಗಿದರು. ಮಹಾರಾಷ್ಟ್ರದ ಜ್ಯೋತಿಬಾ ಫುಲೆ, ಕೇರಳದ ನಾರಾಯಣಗುರು, ಮದ್ರಾಸ್ ಪ್ರಾಂತದ ರಾಮಸ್ವಾಮಿ ನಾಯ್ಕರ್, ಜಸ್ಟೀಸ್ ಪಾರ್ಟಿ ಮುಂತಾದವರು ಹಿಂದುಳಿದವರ ಸಾಮಾಜಿಕ ನ್ಯಾಯಕ್ಕಾಗಿ ವ್ಯಾಪಕ ಅಭಿಪ್ರಾಯ ರೂಪಿಸತೊಡಗಿದರು. ಮೈಸೂರಿನಲ್ಲಿ ಹಿಂದುಳಿದವರಿಗೆ ಮೀಸಲಾತಿ ಒದಗಿಸಬೇಕೆಂದು ಮೈಸೂರು ರಾಜರಿಗೆ ಮನವಿ ಅರ್ಪಿಸಲಾಯಿತು.

ಮಹಾರಾಜರು ಈ ಬಗ್ಗೆ ವರದಿ ನೀಡಲು ೧೯೧೮ರಲ್ಲಿ ಮಿಲ್ಲರ್ ಸಮಿತಿಯನ್ನು ನೇಮಿಸಿದರು. ಮಿಲ್ಲರ್ ಸಮಿತಿಯು ಮೇಲ್ಮಟ್ಟದ ಹುದ್ದೆಗಳಲ್ಲಿ ಶೇ. ೫೦ ಹಾಗೂ ಕೆಳಮಟ್ಟದ ಹುದ್ದೆಗಳಲ್ಲಿ ಶೇ. ೬೬ರಷ್ಟು ಬ್ರಾಹ್ಮಣೇತರರಿಗೆ ಮೀಸಲಾತಿ ನೀಡಬೇಕೆಂದು ಇದನ್ನು ಏಳು ವರ್ಷಗಳೊಳಗೇ ಸಾಧಿಸಬೇಕೆಂದು ೧೯೨೧ರಲ್ಲಿ ಶಿಫಾರಸ್ಸು ನೀಡಿತು. ದಿವಾನರಾಗಿದ್ದ ವಿಶ್ವೇಶ್ವರಯ್ಯನವರು ಅರ್ಹತೆ ಅಥವಾ ಯೋಗ್ಯತೆಯ ಪ್ರಶ್ನೆಯನ್ನು ಎತ್ತಿ ಶಿಫಾರಸ್ಸುಗಳನ್ನು ವಿರೋಧಿಸಿದರು. ಆದರೆ ೧೯೨೧ರಲ್ಲಿ ಮೈಸೂರು ರಾಜರು ಮಿಲ್ಲರ್ ವರದಿ ಜಾರಿಗೊಳಿಸಿದರು. ಇದನ್ನು ವಿರೋಧಿಸಿ ವಿಶ್ವೇಶ್ವರಯ್ಯನವರು ದಿವಾನ್‌ಗಿರಿಗೆ ರಾಜಿನಾಮೆ ನೀಡಿದರು.

ಹಿಂದುಳಿದ ವರ್ಗಗಳಿಗೆ ಮೀಸಲಾತಿ ಪ್ರಕ್ರಿಯೆಯು ೧೯೦೨ರಲ್ಲಿ ಸಣ್ಣ ರಾಜ ಸಂಸ್ಥಾನದ ಕೊಲ್ಹಾಪುರದಲ್ಲಿ ಪ್ರಾರಂಭವಾಯಿತು. ನಂತರ ಭಾರತದ ಮೊದಲ ಹಿಂದುಳಿದ ವರ್ಗಗಳ ಸಮಿತಿಯಾಗಿ ಮಿಲ್ಲರ್ ವರದಿಯು ೧೯೨೧ರಲ್ಲಿ ಜಾರಿಗೆ ಬಂದಿತು. ನಂತರ ಮದ್ರಾಸ್ ಪ್ರಾಂತೀಯ ಸರ್ಕಾರವು ೧೯೨೧ರಲ್ಲಿ ಪ.ಜಾ.ಗಳನ್ನು ಒಳಗೊಂಡಂತೆ ಬಹುತೇಕ ಅಬ್ರಾಹ್ಮಣರಿಗೆ ಮೀಸಲಾತಿ ನೀಡಿತು. ಬಾಂಬೆ ಸರ್ಕಾರವು ನಿಮ್ನ ವರ್ಗಗಳ ರಾಜ್ಯ ಸಮಿತಿಯ ವರದಿಯಾಧಾರದಲ್ಲಿ ೧೯೩೧ರಲ್ಲಿ. ತಿರುವಾಂಕೂರು ಸಂಸ್ಥಾನದಲ್ಲಿ ೧೯೩೫ರಲ್ಲಿ ಇಂತಹ ಪ್ರಯತ್ನಗಳು ನಡೆದವು. ರಾಷ್ಟ್ರಮಟ್ಟದಲ್ಲಿ ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಗಾಂಧೀಜಿ ನಡುವಿನ ೧೯೩೨ರ ಎರವಾಡ ಅಥವಾ ಪೂನಾ ಒಪ್ಪಂದವು, ೧೯೩೫ರ ಭಾರತ ಸರ್ಕಾರ ಕಾಯ್ದೆಯಲ್ಲಿ ಕೇಂದ್ರ ಮತ್ತು ರಾಜ್ಯ ಶಾಸನಸಭೆಗಳಲ್ಲಿ ಪ.ಜಾ.ಗಳಿಗೆ ಸ್ಥಾನ ಮೀಸಲಾತಿಯ ಅವಕಾಶಗಳನ್ನು ಕಲ್ಪಿಸಲು ಆಧಾರವಾಯಿತು. ಆದರೆ ೧೯೩೫ರ ಸಂವಿಧಾನದಲ್ಲಿ ಮುಸ್ಲಮರು, ಕ್ರಿಶ್ಚಿಯನ್ನರು, ಆಂಗ್ಲೋ-ಇಂಡಿಯನ್ಸ್, ಯೂರೋಪಿಯನ್ನರಿಗೆ ಬ್ರಿಟೀಷರ ಒಡೆದು ಆಳುವ ನೀತಿಯ ಭಾಗವಾಗಿ ಪ್ರತ್ಯೇಕ ಮತಕ್ಷೇತ್ರಗಳನ್ನು ಒದಗಿಸಲಾಯಿತು. ೧೯೫೦ರ ಭಾರತದ ಸಂವಿಧಾನ ರಚನೆಯಲ್ಲಿ ಇದನ್ನು ರದ್ದು ಮಾಡಲಾಯಿತು. ಡಾ. ಅಂಬೇಡ್ಕರ್‌ರವರು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ಪ.ಜಾ./ಪ.ಪಂ.ದವರಿಗೆ ರಾಜ್ಯಗಳು ಮತ್ತು ಕೇಂದ್ರ ಶಾಸನ ಸಭೆಗಳಿಗೆ ನಿಗದಿತ ಪ್ರಮಾಣದಲ್ಲಿ ಮೀಸಲಾತಿ ಒದಗಿಸಿದರು. ಜೊತೆಗೆ ಸರ್ಕಾರಿ ಸೇವೆಗಳಲ್ಲಿಯೂ ಇದನ್ನು ಅನ್ವಯಿಸಿದರು. ಹೀಗೆ ಹೇಳುವಾಗಲೇ ಯಾವುದಾದರೂ ಜಾತಿ ಅಥವಾ ಸಮುದಾಯ

ಮತ್ತು ಜನತೆಯ ಒಂದು ವಿಭಾಗ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದರೆ ಆ ವಿಭಾಗಗಳಿಗೆ ಸರ್ಕಾರಿ ಸೇವೆಗಳಲ್ಲಿ ಮೀಸಲಾತಿ ಒದಗಿಸುವ ಬಗ್ಗೆ ಸರ್ಕಾರ ಗಮನಿಸಬಹುದು ಎಂದೂ ಹೇಳಿದ್ದರು. ಇದು ಮೊದಲ ಬಾರಿಗೆ ಪ್ರಸ್ತಾಪವಾದ ವಿಚಾರವೇನೂ ಆಗಿರಲಿಲ್ಲ. ಹಲವು ರಾಜ್ಯಗಳಲ್ಲಿ ಸ್ವಾತಂತ್ರ್ಯಪೂರ್ವದಿಂದಲೇ ಇಂತಹ ಕ್ರಮ ಜಾರಿಯಲ್ಲಿತ್ತು. ಹಿಂದುಳಿದ ಜಾತಿಗಳಿಗೆ ಕೆಲವು ರಾಜ್ಯಗಳಲ್ಲಿರುವ ಹಾಗೆ ರಾಷ್ಟ್ರಮಟ್ಟದಲ್ಲಿ ಅನ್ವಯಿಸುವ ಮತ್ತು ಪ.ಜಾ./ಪ.ಪಂ.ದ ರೀತಿಯಲ್ಲೇ ಸಂವಿಧಾನಬದ್ಧವಾಗಿ ಸರ್ಕಾರಿ ಸೇವೆಗಳಲ್ಲಿ ಮೀಸಲಾತಿ ಒದಗಿಸುವ ಪ್ರಯತ್ನ ನೆಹರೂ ಸರ್ಕಾರದ ಸಂದರ್ಭದಲ್ಲೇ ಪ್ರಾರಂಭವಾಯಿತು. ಆದರೆ ಇಂತಹ ಪ್ರಯತ್ನಕ್ಕೆ ತೀವ್ರ ವಿರೋಧ ಮತ್ತು ವಾದ-ವಿವಾದಗಳು ಸೃಷ್ಟಿಯಾದದ್ದು ಮಾತ್ರ ವಿ.ಪಿ. ಸಿಂಗ್ ಸರ್ಕಾರ ಮಂಡಲ್ ವರದಿಯನ್ನು ಜಾರಿ ಮಾಡಲು ಹೊರಟಾಗಲೇ.

ಈ ರೀತಿ ಮೀಸಲಾತಿಯ ಅವಕಾಶಗಳು ನಿರ್ಮಾಣವಾಗಿ ನಿಮ್ನ ವರ್ಗಗಳು ಮತ್ತು ಹಿಂದುಳಿದ ಜಾತಿಗಳ ಕೆಲವರಿಗೆ ಶಿಕ್ಷಣ ಮತ್ತು ಉದ್ಯೋಗಾವಕಾಶಗಳು ಲಭಿಸಲು ಪ್ರಾರಂಭಿಸಿದವು. ಮೊದಲಿಗೆ ಗುರುತಿಸಲಾದ ಹಿಂದುಳಿದ ಜಾತಿಗಳ ಪಟ್ಟಿಯು ಕ್ರಮೇಣ ಬದಲಾಗುತ್ತಾ ಹೊಸ ಜಾತಿಗಳ ಪಟ್ಟಿ ಬಂದಿರುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು.

ಪ್ರಾರಂಭದಲ್ಲಿ ಪ್ರಸ್ತಾಪಿಸಿದ ಹಾಗೆ ಬ್ರಿಟಿಷರು, ಬ್ರಿಟನ್ ರೀತಿಯ ಸಾಮಾಜಿಕ ಬೆಳವಣಿಗೆಯ ಬಂಡವಾಳಶಾಹಿ ವಿಧಾನವನ್ನು ಇಲ್ಲಿ ಅನುಸರಿಸಲು ಮುಂದಾಗಲಿಲ್ಲ. ಬಂಡವಾಳಶಾಹಿ ಬೆಳವಣಿಗೆಯ ಸರ್ವಾಂಗೀಣ ಅಭಿವೃದ್ಧಿಗೆ ಹಿಂದುಳಿದ ಪಾಳೇಗಾರಿ/ಊಳಿಗಮಾನ್ಯ ಸಾಮಾಜಿಕ ಉತ್ಪಾದನಾ ಸಂಬಂಧಗಳನ್ನು ನಾಶ ಮಾಡುವುದು ಅಗತ್ಯವಾಗಿತ್ತು. ಆದರೆ ಬ್ರಿಟಿಷ್ ಆಡಳಿತಗಾರರು ತಮಗೆ ಭಾರತದಲ್ಲಿ ಸಾಮಾಜಿಕ ನೆಲೆ ಅಥವಾ ಬೆಂಬಲ ಇಲ್ಲವೆಂಬುದನ್ನು ಮನಗಂಡು ಭಾರತದ ಜಾತಿ ವ್ಯವಸ್ಥೆಯ ರಕ್ಷಕರಾಗಿರುವ ಪಾಳೇಗಾರಿ/ಜಮೀನ್ದಾರಿ ಶಕ್ತಿಗಳೊಂದಿಗೆ ಶಾಮೀಲಾದರು. ಒಂದು ಆಧುನಿಕ ಸಮಾಜವನ್ನು ನಿರ್ಮಿಸಲು ಇದ್ದ ಅವಕಾಶವನ್ನು ಬ್ರಿಟಿಷರು ತಮ್ಮ ಅನುಕೂಲದ ಕಾರಣಕ್ಕೆ ಕೈಬಿಟ್ಟರು.

ಆದರೆ ಸಿಕ್ಕ ಅಲ್ಪ ಅವಕಾಶಗಳನ್ನೇ ಬಳಸಿ, ವಿವಿಧ ಜಾತಿಗಳ ಜನರು ಶಿಕ್ಷಣ ಮುಗಿಸಿ ಉದ್ಯೋಗ ಮಾರುಕಟ್ಟೆಗೆ ಬರುತ್ತಿದ್ದಂತೆ ಅಸಹ್ಯ ಪೈಪೋಟಿಗೆ ಸಿಲುಕುತ್ತಿದ್ದರು. ಆಗ ಮೀಸಲಾತಿ ಬೇಕೆಂಬ ಬೇಡಿಕೆ ಎತ್ತುತ್ತಾ ಬಂದರು. ಬ್ರಿಟಿಷರು ಅನುಸರಿಸಿದ ವಿಚಿತ್ರವಾದ ಬೆಳವಣಿಗೆಯ ಮಾದರಿಯ ಫಲವಿದು. ಮೊದಲು ಬ್ರಾಹ್ಮಣರು ನಂತರ ಭೂಮಿ ಮತ್ತು ಇತರೆ ಸಂಪತ್ತನ್ನು ಹೊಂದಿದ್ದ ಬ್ರಾಹ್ಮಣೇತರರು ಮೀಸಲಾತಿಯ ಪ್ರಶ್ನೆಯನ್ನು ಎತ್ತಿದರು. ಇಂತಹ ಪ್ರಶ್ನೆ ಬಂದಾಗಲೆಲ್ಲಾ ಮೀಸಲಾತಿಯ ಲಾಭವನ್ನು ಮೊದಲಿಗೆ ಅನುಭವಿಸಿದವರು ನಿಧಾನಕ್ಕೆ ಮೀಸಲಾತಿ ಬೇಕೆನ್ನುವವರನ್ನು ವಿರೋಧಿಸುತ್ತಿದ್ದರು. ಈಗಲೂ ಅದೇ ಪರಿಸ್ಥಿತಿಯೇ ಇರುವುದು.

ಸ್ವಾತಂತ್ರ್ಯ ನಂತರ ಕಾಕಾ ಕಾಲೇಲ್ಕರ್ ನೇತೃತ್ವದಲ್ಲಿ ೧೧ ಜನರ ಹಿಂದುಳಿದ ವರ್ಗಗಳ ಆಯೋಗ ೧೯೫೩ರಲ್ಲಿ ರಚನೆಯಾಯಿತು. ಹಿಂದುಳಿದ ವರ್ಗಗಳಿಗೆ ವೃತ್ತಿಪರ ಮತ್ತು

ತಾಂತ್ರಿಕ ಸಂಸ್ಥೆಗಳಲ್ಲಿ ಶೇ. ೭೦ರಷ್ಟು ಜೊತೆಗೆ, ಎಲ್ಲ ಸರ್ಕಾರಿ ಸೇವೆಗಳು ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ೩ ಹಂತಗಳ ಕ್ಲಾಸ್-೧ ಶೇ. ೨೫, ಕ್ಲಾಸ್-೨ ಶೇ. ೩೩.೫, ಕ್ಲಾಸ್-೩ ಮತ್ತು ೪ ಶೇ. ೪೦ - ಸ್ಥಾನಗಳನ್ನು ಮೀಸಲು ಮಾಡಬೇಕೆಂದು ಶಿಫಾರಸ್ಸು ಮಾಡಿತು. ಸರ್ಕಾರ ಅಂಗೀಕರಿಸಲಿಲ್ಲ.

ಕರ್ನಾಟಕದಲ್ಲಿ ೧೯೭೭ರಲ್ಲಿ ದೇವರಾಜ ಅರಸು, ಎಲ್.ಜಿ. ಹಾವನೂರು ನೇತೃತ್ವದ ಹಿಂದುಳಿದ ವರ್ಗಗಳ ಆಯೋಗ ನೇಮಿಸಿದರು. ಹಾವನೂರ್ ಆಯೋಗವು ವೀರಶೈವರನ್ನು ಮೀಸಲಾತಿ ಪಟ್ಟಿಯಿಂದ ಕೈಬಿಟ್ಟು ಶೇ. ೬೫ ಮೀಸಲಾತಿ ಶಿಫಾರಸ್ಸು ಮಾಡಿತು. ಇದರ ವಿರುದ್ಧ ಚಳುವಳಿ ಜಾತಿಗಳ ಪಟ್ಟಿಯನ್ನು ಪುನರ್‌ಪರಿಶೀಲಿಸಬೇಕೆಂದು ಕೋರ್ಟ್ ಹೇಳಿತು. ನಂತರ ಬಂದ ರಾಮಕೃಷ್ಣ ಹೆಗಡೆ ಸರ್ಕಾರದ ಸಂದರ್ಭದಲ್ಲಿ ವೆಂಕಟಸ್ವಾಮಿ ಆಯೋಗ ರಚನೆಯಾಯಿತು. ೧೯೮೭ರಲ್ಲಿ ವರದಿ ಬಂತು. ಇದರಲ್ಲಿ ವೀರಶೈವರ ಜೊತೆ ಒಕ್ಕಲಿಗರನ್ನು ಮೀಸಲಾತಿ ಪಟ್ಟಿಯಿಂದ ಕೈಬಿಡಬೇಕೆಂದು ಶಿಫಾರಸು ಮಾಡಲಾಯಿತು. ದಕ್ಷಿಣ ಕರ್ನಾಟಕ ಭಾಗದಲ್ಲಿ ಇದರ ವಿರುದ್ಧ ಚಳುವಳಿಗಳು ನಡೆದವು. ಕರ್ನಾಟಕದ ಶಿಕ್ಷಣ ರಂಗದಲ್ಲಿ ಜಾತಿ ಆಧಾರಿತ ಶಿಕ್ಷಣ ಸಂಸ್ಥೆಗಳು ಪ್ರಭಾವಶಾಲಿಯಾಗಿರುವುದರಿಂದ ಎರಡೂ ಆಯೋಗಗಳ ಶಿಫಾರಸ್ಸುಗಳನ್ನು ವಿರೋಧಿಸುವಲ್ಲಿ ಪ್ರಮುಖ ಪಾತ್ರವಹಿಸಿದವು.

ಇದೇ ಸಂದರ್ಭಕ್ಕೆ ೧೯೭೭ರ ಜನವರಿಯಲ್ಲಿ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಮೊರಾರ್ಜಿ ಸರ್ಕಾರ ಬಿ.ಪಿ. ಮಂಡಲ್ ಆಯೋಗವನ್ನು ನೇಮಿಸಿತು. ೧೯೮೦ರ ಡಿಸೆಂಬರ್‌ನಲ್ಲಿ ಇದು ವರದಿ ನೀಡಿತು. ಜಾರಿ ಮಾಡಬೇಕೆನ್ನುವಾಗ ಸರ್ಕಾರ ಬಿದ್ದು ಹೋಯಿತು. ನಂತರ ವಿ.ಪಿ. ಸಿಂಗ್ ಸರ್ಕಾರ್ ಮಂಡಲ್ ವರದಿಯನ್ನು ಜಾರಿ ಮಾಡಲು ಮುಂದಾಯಿತು. ಒಟ್ಟು ೧೧ ಶಿಫಾರಸ್ಸುಗಳನ್ನು ಇದು ಮಾಡಿದ್ದರೂ ಎರಡು ಶಿಫಾರಸ್ಸುಗಳ ಬಗ್ಗೆ ಮಾತ್ರ ಚರ್ಚೆಯಾಗುತ್ತಿದೆ. ಕೇಂದ್ರ ಸರ್ಕಾರದ ಅಡಿಯಲ್ಲಿ ಬರುವ ಎಲ್ಲಾ ಸೇವೆಗಳು ಹಾಗೂ ಸಾರ್ವಜನಿಕ ಉದ್ದಿಮೆ ಗಳಲ್ಲಿ ಶೇ. ೨೭ರಷ್ಟು ಹಾಗೂ ಉನ್ನತ ಶಿಕ್ಷಣ ಸಂಸ್ಥೆಗಳ ಎಲ್ಲ ಪ್ರವೇಶಾತಿಗಳಲ್ಲಿ ಶೇ. ೨೭ರಷ್ಟು ಓಬಿಸಿ ಮೀಸಲಾತಿಯನ್ನೂ (ಇದಕ್ಕಿಂತಲೂ ಹೆಚ್ಚಿದ್ದರೆ ಅಂತಹ ರಾಜ್ಯಗಳನ್ನು ಹೊರತುಪಡಿಸಿ) ನೀಡುವಂತೆ ಮಂಡಲ್ ವರದಿ ಶಿಫಾರಸ್ಸು ಮಾಡಿತು. ರಾಜಕೀಯ ಕಾರಣ ಗಳಿಗಾಗಿ ಕಾಂಗ್ರೆಸ್ ಮತ್ತು ಬಿಜೆಪಿ ಹಾಗೂ ಅದರ ವಿದ್ಯಾರ್ಥಿ-ಯುವಜನ ಸಂಘಟನೆಗಳು ಹಲವೆಡೆ ನೇರವಾಗಿ, ಕೆಲವೆಡೆ ಪರೋಕ್ಷವಾಗಿ ಗಲಭೆಗಳನ್ನು ಸೃಷ್ಟಿಸಿದವು. ಸರ್ಕಾರ ಚುನಾವಣೆ ಯಲ್ಲಿ ಸೋತ ನಂತರ ಈಗ ಮನಮೋಹನ್‌ಸಿಂಗ್ ಸರ್ಕಾರ ಮತ್ತೊಮ್ಮೆ ಈ ಶಿಫಾರಸ್ಸು ಗಳನ್ನು ಜಾರಿ ಮಾಡುವುದಾಗಿ ಘೋಷಿಸಿದೆ. ಮತ್ತೊಮ್ಮೆ ಅದಕ್ಕೆ ವಿರೋಧವಾಗಿ ಹಲವಾರು ಕಡೆ ಪ್ರತಿಭಟನೆ ನಡೆದಿದೆ.

ಸಂವಿಧಾನದ ರಚನೆಯೊಂದಿಗೇ ಜಾರಿಗೆ ಬಂದ ಪ.ಜಾ./ಪ.ಪಂ.ಗಳಿಗೆ ಮೀಸಲಾತಿಯು ಪ್ರಾರಂಭದ ಒಂದೆರಡು ದಶಕಗಳಲ್ಲಿ ತೀವ್ರ ಪ್ರತಿರೋಧವನ್ನು ಎದುರಿಸಲಿಲ್ಲ. ಏಕೆಂದರೆ

ಪ್ರಾರಂಭದ ದಶಕಗಳಲ್ಲಿ ದೇಶದಲ್ಲಿ ಗಣನೀಯ ಪ್ರಮಾಣದಲ್ಲಿ ಸಾರ್ವಜನಿಕ ಉದ್ದಿಮೆಗಳು, ಸರ್ಕಾರಿ ಸೇವೆಗಳು ನಿರ್ಮಾಣವಾಗುತ್ತಿದ್ದವು. ಉದ್ಯೋಗ ಮತ್ತು ಶಿಕ್ಷಣ ಪೈಪೋಟಿ ಈಗಿನಷ್ಟು ತೀವ್ರವಾಗಿರಲಿಲ್ಲ. ಆದರೆ ಕ್ರಮೇಣ ಸರ್ಕಾರದ ನೀತಿಗಳು, ಸರ್ಕಾರಿ ಶಿಕ್ಷಣ ಮತ್ತು ಸಾರ್ವಜನಿಕ ಸೇವೆಗಳನ್ನು ರದ್ದುಗೊಳಿಸುತ್ತಿರುವುದರಿಂದ ಅವಕಾಶಗಳು ಕುಂಠಿತವಾಗುತ್ತಿವೆ. ಇದರಿಂದಾಗಿ ಮೀಸಲಾತಿಯಿಂದ ಸೌಲಭ್ಯ ಪಡೆದವರು ತಮಗೆ ಸಿಗಬೇಕಾದ ಸ್ಥಾನಗಳನ್ನು ಕಸಿಯುತ್ತಿದ್ದಾರೆ ಎಂಬ ಭಾವನೆ ಮೂಡಿದೆ. ಇದು ಅತ್ಯಂತ ಸಹಜವಾಗಿ ತಿಳುವಳಿಕೆಯ ಕೊರತೆಯಿಂದ ಮೂಡುವ ಅಭಿಪ್ರಾಯ. ಆದರೆ ಜಾತಿ ವ್ಯವಸ್ಥೆ ಮತ್ತು ಅಸಮಾನತೆಯನ್ನು ರಕ್ಷಿಸಬೇಕೆಂದಿರುವ ಶಕ್ತಿಗಳು, ವರ್ಗಗಳು ಈ ಅತೃಪ್ತಿಯನ್ನು ಎಸ್.ಎಸಿ./ಎಸ್.ಟಿ. ಮತ್ತು ಓ.ಬಿ.ಸಿ.ಗಳ ವಿರುದ್ಧವಾದ ಜಾತಿ ಪ್ರಜ್ಞೆಯನ್ನಾಗಿ ಗಟ್ಟಿಗೊಳಿಸುತ್ತಿದ್ದಾರೆ.

ಆರು ದಶಕಗಳ ಸ್ವಾತಂತ್ರ್ಯ ಮತ್ತು ಅದರೊಂದಿಗೆ ಬಂದ ಎಸ್.ಸಿ./ಎಸ್.ಟಿ. ಮೀಸಲಾತಿ ಮತ್ತು ನಂತರ ವಿವಿಧ ರಾಜ್ಯಗಳಲ್ಲಿ ಜಾರಿಗೆ ಬಂದ ಹಿಂದುಳಿದ ವರ್ಗಗಳ ಮೀಸಲಾತಿ ಈ ಜಾತಿ ವರ್ಗಗಳ ಅಭಿವೃದ್ಧಿಗೆ ಖಂಡಿತವಾಗಿ ಸಹಾಯಕವಾಗಿದೆ. ಒಂದು ವಿಭಾಗದ ಜನರಲ್ಲಿ ಸಾಕಷ್ಟು ಮಾನವಾಭಿವೃದ್ಧಿಯ ಲಕ್ಷಣಗಳನ್ನು ಸೃಷ್ಟಿಸಿದೆ. ಇದನ್ನು ನಿರಾಕರಿಸಲು ಸಾಧ್ಯವಿಲ್ಲ. ಆದರೆ ಸಮಗ್ರವಾದ ಪರಿಹಾರದ ಅಸ್ತ್ರವಾಗಿ ಇದು ಬಳಕೆಯಾಗಲಿಲ್ಲ ಮತ್ತು ಆಗಲು ಸಾಧ್ಯವಿಲ್ಲ. ಸಂವಿಧಾನದತ್ತವಾದ ಮೀಸಲಾತಿಯಿದ್ದಾಗಲೂ ದೇಶದ ಬಹುಸಂಖ್ಯಾತ ಎಸ್‌ಸಿ./ಎಸ್.ಟಿ. ಜನರ ಸ್ಥಿತಿಗತಿಗಳನ್ನು ಗಮನಿಸಿದರೆ ಪರಿಸ್ಥಿತಿಯು ಆತಂಕಕಾರಿಯಾಗಿದೆ ಅನಿಸುತ್ತದೆ.

## ಭೂಮಿ ಒಡೆತನ

ಒಟ್ಟು ಎಸ್.ಸಿ. ಕುಟುಂಬಗಳಲ್ಲಿ ಒಂದು ಎಕರೆಗಿಂತ ಕಡಿಮೆ ಅಥವಾ ಭೂರಹಿತ ಕುಟುಂಬ ಗಳ ಸಂಖ್ಯೆ ೧೯೯೧ರಲ್ಲಿ ಶೇ. ೭೦ರಷ್ಟಿತ್ತು. ೨೦೦೦ದಲ್ಲಿ ಶೇ. ೭೫ಕ್ಕೆ ತಲುಪಿದೆ. ಭೂಮಿ ಯನ್ನು ಕಳೆದುಕೊಳ್ಳುತ್ತಿರುವವರ ಸಂಖ್ಯೆ ಹೆಚ್ಚುತ್ತಿರುವುದು ಇಲ್ಲಿ ಕಾಣುತ್ತದೆ. ೧೯೯೫-೯೬ರ ಕೃಷಿ ಸೆನ್ಸಸ್ ಪ್ರಕಾರ ಕೆಳಸ್ತರದ ಶೇ. ೬೧.೬ರಷ್ಟು ಭೂಹಿಡುವಳಿ ಕುಟುಂಬಗಳು ಕೇವಲ ಶೇ. ೧೭.೨ರಷ್ಟು ಕೃಷಿ ಯೋಗ್ಯ ಭೂಮಿಯನ್ನು ಹೊಂದಿವೆ. ಇದಕ್ಕೆ ವ್ಯತಿರಿಕ್ತವಾಗಿ ಮೇಲಿನ ಶೇ. ೭.೩೦ರಷ್ಟು ಭೂ ಹಿಡುವಳಿ ಕುಟುಂಬಗಳು ಶೇ. ೪೦.೧ರಷ್ಟು ಕೃಷಿ ಯೋಗ್ಯ ಭೂಮಿಯನ್ನು ಹೊಂದಿವೆ. ಕೆಲವೇ ಜನರ ನಡುವೆ ಭೂಮಿಯ ಕೇಂದ್ರೀಕರಣವಾಗುತ್ತಿದೆ ಎಂಬುದನ್ನು ಇದು ತೋರಿಸುತ್ತದೆ.

ಜೊತೆಗೆ ಭೂಮಿಯನ್ನು ಬಂಡವಾಳಶಾಹಿ ಅಗತ್ಯಗಳಿಗೆ ಹೆಚ್ಚೆಚ್ಚು ಬಳಸುತ್ತಿರುವುದರಿಂದ ಪ್ರಸಕ್ತ ದಶಕದಲ್ಲಿ ದೊಡ್ಡ ಪ್ರಮಾಣದಲ್ಲಿ ರೈತರಿಂದ ಭೂಮಿ ಕೈಬಿಟ್ಟು ಹೋಗುತ್ತಿದೆ. ಈ ರೀತಿ ಭೂಮಿಯನ್ನು ಕಳೆದುಕೊಳ್ಳುವವರಲ್ಲಿ ಅರ್ಧ ಎಕರೆ, ಒಂದು ಎಕರೆ ಭೂಮಿಗಳನ್ನು ಹೊಂದಿರುವ ಪ.ಜಾತಿ/ಪ.ಪಂಗಡ ಮತ್ತು ಹಿಂದುಳಿದ ಜಾತಿಗಳವರೇ ಹೆಚ್ಚಾಗಿದ್ದಾರೆ ಎಂಬು ದನ್ನು ಗಮನಿಸಬೇಕಾಗಿದೆ. ಈ ಹಿನ್ನೆಲೆಯಲ್ಲೇ ಗ್ರಾಮೀಣ ಎಸ್.ಸಿ./ಎಸ್.ಟಿ. ಭೂರಹಿತರಿಗೆ

ತಲಾ ಒಂದೊಂದು ಎಕರೆ ಭೂಮಿಯನ್ನು ಸರ್ಕಾರ ವಿತರಿಸಬೇಕೆಂದು ಎಮ್.ಎಸ್. ಸ್ವಾಮಿನಾಥನ್ ರೈತ ಆಯೋಗ ಶಿಫಾರಸ್ಸು ಮಾಡಿದೆ. ಆದರೆ ಸರ್ಕಾರ ಈ ವಿಚಾರದಲ್ಲಿ ಕಿವುಡಾಗಿದೆ.

**ಕೃಷಿ ಕಾರ್ಮಿಕರು**

೨೦೦೦ರ ಅಂಕಿ-ಸಂಖ್ಯೆಗಳ ಪ್ರಕಾರ ಒಟ್ಟು ಕೃಷಿ ಕಾರ್ಮಿಕರ ಸಂಖ್ಯೆಯಲ್ಲಿ ಶೇ. ೪೯.೦೬ ರಷ್ಟು ಎಸ್.ಸಿ. ಶೇ. ೩೨.೬೯ರಷ್ಟು ಎಸ್.ಟಿ. ಮತ್ತು ಶೇ. ೧೯.೬೬ ಇತರೆ ಜಾತಿಗಳವರಿದ್ದಾರೆ. ೧೯೯೨-೨೦೦೨ರ ನಡುವೆ ದೇಶದಲ್ಲಿ ಭೂರಹಿತ ಕೃಷಿ ಕಾರ್ಮಿಕರ ಸಂಖ್ಯೆ ಶೇ. ೨೨ ರಿಂದ ಶೇ. ೩೨ಕ್ಕೆ ಏರಿಕೆಯಾಗಿದೆ. ಒಟ್ಟು ಕೃಷಿ ಕಾರ್ಮಿಕರ ಸಂಖ್ಯೆಯಲ್ಲಿ ದಲಿತರೇ ಪ್ರಧಾನವಾಗಿರುವುದು ಇದರಲ್ಲಿ ತಿಳಿಯುತ್ತದೆ. ಜೊತೆಗೆ ಕೃಷಿ ಕಾರ್ಮಿಕರಿಗೆ ವಾರ್ಷಿಕ ಲಭ್ಯವಾಗುವ ಕೆಲಸದ ದಿನಗಳ ಸಂಖ್ಯೆ ೧೯೮೧ರಲ್ಲಿ ೧೨೩, ೧೯೯೧ರಲ್ಲಿ ೧೦೦, ೨೦೦೧ರಲ್ಲಿ ೭೮ ಮತ್ತು ೨೦೦೫ರಲ್ಲಿ ೭೦ಕ್ಕೆ ಇಳಿದಿದೆ. ಇದು ಎಸ್.ಸಿ./ಎಸ್.ಟಿ. ಜನರ ಜೀವನ ಪರಿಸ್ಥಿತಿಗಳ ಮೇಲೆ ತೀವ್ರವಾದ ಪರಿಣಾಮಗಳನ್ನು ಬೀರಿದೆ.

**ಬಡತನ**

೨೦೦೦ದಲ್ಲಿ, ಗ್ರಾಮಾಂತರದಲ್ಲಿ ಶೇ. ೩೫.೪ರಷ್ಟು ಎಸ್.ಸಿ.ಗಳು, ಶೇ. ೨೧ ಇತರರು ಹಾಗೂ ನಗರ ಪ್ರದೇಶಗಳಲ್ಲಿ ಶೇ. ೩೯, ಎಸ್.ಸಿ. ಮತ್ತು ಶೇ. ೧೫ ಇತರರು ಬಡತನ ರೇಖೆಗಿಂತ ಕೆಳಗಿದ್ದಾರೆ. ಗ್ರಾಮಾಂತರ ಬಡವರು ಹೆಚ್ಚಿನವರು ಕೃಷಿ ಕಾರ್ಮಿಕರಾಗಿದ್ದಾರೆ. ನಗರದ ಬಡವರು ಹೆಚ್ಚು ಅಸಂಘಟಿತ ಮತ್ತು ಸಾಂದರ್ಭಿಕ ಕೆಲಸಗಳಲ್ಲಿದ್ದಾರೆ. ಈ ದಶಕದಲ್ಲೇ ಕೃಷಿ ಕಾರ್ಮಿಕರ ಸಂಖ್ಯೆ ಮತ್ತು ಅಸಂಘಟಿತ-ಸಾಂದರ್ಭಿಕ ಉದ್ಯೋಗಗಳೆರಡೂ ಹೆಚ್ಚಾಗಿರುವ ಹಿನ್ನೆಲೆಯಲ್ಲಿ ಬಡತನದ ಪ್ರಮಾಣ ತೀವ್ರವಾಗಿ ಹೆಚ್ಚಾಗಿದೆ.

**ಮೀಸಲಾತಿ**

ಇದುವರೆಗಿನ ಸಂವಿಧಾನ ಬದ್ಧ ಮೀಸಲಾತಿ ನಂತರವೂ ತುಂಬಿರುವ ಸ್ಥಾನಗಳ ಪ್ರಮಾಣ ಗಮನಿಸೋಣ. ಪ.ಜಾ.ಗಳಿಗೆ ಶೇ. ೧೫ರಷ್ಟಿರುವ ಸ್ಥಾನಗಳ ಪೈಕಿ ಗುಂಪು-ಎ-೧೦.೧೫%, ಗುಂಪು-ಬಿ-೧೨.೬೭%, ಗುಂಪು-ಸಿ-೧೬.೧೫% ಮತ್ತು ಗುಂಪು-ಡಿ-೨೧.೨೬%ರಷ್ಟು ಸ್ಥಾನಗಳನ್ನು ತುಂಬಲಾಗಿದೆ. ಪ.ಪಂ.ಗಳಿಗೆ(ಶೇ. ೭.೫%) - ಇದು ಕ್ರಮವಾಗಿ - ೨.೮೯%, ೨.೬೮%, ೫.೬೯% ಮತ್ತು ೬.೪೮% ಇದೆ. ದೇಶದ ಒಟ್ಟಾರೆ ಶಾಲಾ ಶಿಕ್ಷಕರಲ್ಲಿ ಕೇವಲ ೬.೭% ಕಾಲೇಜು ಮತ್ತು ವಿ.ವಿ. ಶಿಕ್ಷಕರಲ್ಲಿ ಶೇ. ೨.೬% ಮಾತ್ರ ಎಸ್.ಸಿ./ಎಸ್.ಟಿ.ಗಳಿದ್ದಾರೆ. ಸಂವಿಧಾನದ ಪೂರ್ಣ ರಕ್ಷಣೆಯ ಸಂದರ್ಭದಲ್ಲಿನ ಪರಿಸ್ಥಿತಿಯಿದು.

**ಉನ್ನತ ಶಿಕ್ಷಣದಲ್ಲಿ ಉಳಿದಿರುವ ಅಸಮಾನತೆಗಳಿಗೆ ಸಂಬಂಧಿಸಿ ಕೆಳಗಿನ ಪಟ್ಟಿಯನ್ನು ಗಮನಿಸಿ.**

**ಉನ್ನತ ಶಿಕ್ಷಣದಲ್ಲಿ ಗುಂಪು ಅಸಮಾನತೆಗಳು**

ಎಸ್.ಟಿ.ಗಳು, ಎಸ್.ಸಿ.ಗಳು ಮತ್ತು ಓ.ಬಿ.ಸಿ.ಗಳು ಹಿಂದಿದ್ದಾರೆ. ಸಿಕ್ಕರು, ಕ್ರಿಶ್ಚಿಯನ್ನರು, ಹಿಂದೂ ಮೇಲ್‌ಜಾತಿಗಳು ಮತ್ತು ಇತರರು ತುಂಬಾ ಮುಂದಿದ್ದಾರೆ.

**ಜನಸಂಖ್ಯೆಯಲ್ಲಿ ೨೦ ವರ್ಷ ಮತ್ತು ಮೇಲ್ಪಟ್ಟ ಪದವೀಧರರ ಶೇಕಡವಾರು**

| ಜಾತಿಗಳು/ ಸಮುದಾಯಗಳು | ಗ್ರಾಮೀಣ ಭಾರತ | ನಗರ ಭಾರತ |
|---|---|---|
| ಎಸ್.ಟಿ. | ೧.೧. | ೧೦.೯ |
| ಎಸ್.ಸಿ. | ೧.೨ | ೪.೭ |
| ಮುಸ್ಲಿಮರು | ೧.೩. | ೬.೧ |
| ಹಿಂದೂ ಓಬಿಸಿ | ೨.೧ | ೮.೬ |
| ಸಿಕ್‌ರು | ೨.೮ | ೨೫.೦ |
| ಕ್ರಿಶ್ಚಿಯನ್ | ೪.೭ | ೨೩.೭ |
| ಹಿಂದೂ ಮೇಲ್ಜಾತಿ | ೫.೩ | ೨೫.೩ |
| ಇತರೆ ಮತದವರು | ೫.೪ | ೩೧.೫ |
| ಅಖಿಲ ಭಾರತ ಸರಾಸರಿ | ೨.೬ | ೧೫.೫ |

**(ಮೂಲ: ಸತೀಶ್ ದೇಶಪಾಂಡೆ ಮತ್ತು ಯೋಗೇಂದ್ರ ಯಾದವ್, ೨೦೦೬, ಹಿಂದೂ ಪತ್ರಿಕೆಯಲ್ಲಿ)**

ಈ ಪಟ್ಟಿಯಲ್ಲಿ ಸ್ಪಷ್ಟವಾಗಿ ಕೆಲವು ಸಂಗತಿಗಳು ಗೋಚರಿಸುತ್ತವೆ. ಗ್ರಾಮೀಣ ಭಾರತದಲ್ಲಿ ಶೇ. ೧ರ ಆಸುಪಾಸಿನಲ್ಲಿ ಎಸ್.ಸಿ./ಎಸ್.ಟಿ. ಮತ್ತು ಮುಸ್ಲಿಂ ಪದವೀಧರರು ಇದ್ದಾರೆ. ಹಿಂದೂ ಮೇಲ್ಜಾತಿಗಳಲ್ಲಿ ಈ ಪ್ರಮಾಣ ಶೇ. ೫ಕ್ಕಿಂತ ಹೆಚ್ಚಾಗಿದೆ. ತೀವ್ರವಾದ ಅಸಮಾನತೆಗಳನ್ನು ನಗರ ಭಾರತದಲ್ಲಿ ಕಾಣಬಹುದು. ಎಸ್.ಸಿ./ಎಸ್.ಟಿ./ಮುಸ್ಲಿಮರು ಮತ್ತು ಹಿಂದೂ ಓ.ಬಿ.ಸಿ.ಗಳು, ಮುಂದುವರೆದ ಜಾತಿಗಳ ಪದವೀಧರರ ಸಂಖ್ಯೆಗಿಂತ ಬಹಳ ಹಿಂದಿದ್ದಾರೆ.

ಇಂತಹ ಪರಿಸ್ಥಿತಿಯನ್ನು ಸುಧಾರಿಸಬೇಕೆಂದು ಯಾರಿಗಾದರೂ ಅನ್ನಿಸದಿದ್ದರೆ, ಅವರು ಪೂರ್ವಗ್ರಹ ಪೀಡಿತರಾಗಿದ್ದಾರೆ. ಆದರೆ ಮೀಸಲಾತಿಯಿಂದಾಗಿ ಪ್ರತಿಭೆಗೆ ಅನ್ಯಾಯವಾಗುತ್ತಿದೆ. ಅರ್ಹತೆ ಮತ್ತು ಯೋಗ್ಯತೆಯಿಲ್ಲದವರಿಗೆ ಮಣೆ ಹಾಕಲಾಗುತ್ತಿದೆ ಮುಂತಾದ ವಾದಗಳನ್ನು ಹರಿಬಿಡಲಾಗಿದೆ. ಇಂತಹ ಕೆಲ ಪ್ರಮುಖ ವಾದಗಳನ್ನು ಪರಿಶೀಲಿಸುವುದು ಅಗತ್ಯ.

## ಅರ್ಹತೆ ಮತ್ತು ಸಾಮರ್ಥ್ಯ

ಮೀಸಲಾತಿ ನೀಡುವುದರಿಂದ ಅರ್ಹತೆ ಮತ್ತು ಸಾಮರ್ಥ್ಯಕ್ಕೆ ಬೆಲೆ ಇಲ್ಲದಂತಾಗುತ್ತದೆ. ಇದರಿಂದ ಶಿಕ್ಷಣ ಮತ್ತು ಉದ್ಯೋಗದ ಗುಣಮಟ್ಟ ಕುಸಿಯುತ್ತದೆ ಎಂಬ ವಾದವನ್ನು ಮಾಡಲಾಗುತ್ತಿದೆ. ಯಾವುದೇ ಸಮಾಜದ ಬಹುಸಂಖ್ಯಾತ ಜನ ಶಿಕ್ಷಣ ಮತ್ತು ಉದ್ಯೋಗಾವಕಾಶ

ಗಳಿಂದ ವಂಚಿತರಾದರೆ ಸಮಾಜದ ಸಾಮರ್ಥ್ಯ ಮತ್ತು ಗುಣಮಟ್ಟವೇ ಕುಸಿಯುತ್ತದೆ ಎಂಬ ಸರಳ ಸೂತ್ರವನ್ನು ಇಲ್ಲಿ ಮರೆಮಾಚಲಾಗುತ್ತಿವೆ. ಭಾರತದ ಮಾನವಾಭಿವೃದ್ಧಿ ಸೂಚ್ಯಂಕದಲ್ಲಿ ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ, ಕೇರಳ ದಕ್ಷಿಣ ಭಾರತದ ಈ ರಾಜ್ಯಗಳು ಉತ್ತರದ ಬಹುತೇಕ ರಾಜ್ಯಗಳಿಗಿಂತ ಮುಂದಿವೆ. ಈ ನಾಲ್ಕು ರಾಜ್ಯಗಳಲ್ಲಿ ಕ್ರಮವಾಗಿ ಶೇ. ೫೦, ಶೇ. ೬೯, ಶೇ. ೪೯.೯ ಹಾಗೂ ಶೇ. ೫೦ರಷ್ಟು ಪ.ಜಾ./ಪ.ಪಂ/ಓ.ಬಿ.ಸಿ. ಮೀಸಲಾತಿ ಜಾರಿ ಯಲ್ಲಿದೆ. ಈ ರಾಜ್ಯಗಳಲ್ಲಿ ಮೀಸಲಾತಿ ಒದಗಿಸಿರುವುದರಿಂದ ಅರ್ಹತೆ ಗುಣಮಟ್ಟಗಳಿಗೆ ತೊಂದರೆಯಾಗಿದೆಯೆಂದು ಹೇಳಲು ಆಧಾರ ಏನಿದೆ?

ಇನ್ನು ಪ.ಜಾ./ಪ.ಪಂ. ಮತ್ತು ಓ.ಬಿ.ಸಿ. ವಿದ್ಯಾರ್ಥಿಗಳು ಕಡಿಮೆ ಅಂಕ ಪಡೆದರೂ ಮೆಡಿಕಲ್, ಇಂಜಿನಿಯರಿಂಗ್ ಮತ್ತಿತರ ವೃತ್ತಿಪರ ಕೋರ್ಸ್‌ಗಳಿಗೆ ಸಲೀಸಾಗಿ ಪ್ರವೇಶ ಪಡೆ ಯುತ್ತಾರೆ ಎಂಬ ವಾದ. ಕರ್ನಾಟಕದಲ್ಲಿ ಪ್ರತಿ ವರ್ಷ ನಡೆಯುವ ಸಿ.ಈ.ಟಿ. ಪ್ರವೇಶಾತಿಯಲ್ಲಿ ಕಟ್ ಆಫ್ ಅಂಕಗಳನ್ನು ಗಮನಿಸಿದರೆ ಈ ವಾದದಲ್ಲಿ ಎಷ್ಟು ತಿರುಳಿದೆ ಗೊತ್ತಾಗುತ್ತದೆ.

ಇಷ್ಟಕ್ಕೂ ಹೆಚ್ಚಿನ ಅಂಕಗಳನ್ನು ಗಳಿಸಲು ಇರುವ ಮಾನದಂಡಗಳೇನು? ಶ್ರೀಮಂತ ಮೇಲ್ ಮಧ್ಯಮ ವರ್ಗಗಳ ಪೋಷಕರು ತಮ್ಮ ಮಕ್ಕಳಿಗೆ ಟ್ಯೂಷನ್, ಕೋಚಿಂಗ್ ಕ್ಲಾಸ್ ಇತ್ಯಾದಿ ಹೆಸರಲ್ಲಿ ಸಾಕಷ್ಟು ಹಣವನ್ನು ಖರ್ಚು ಮಾಡುತ್ತಾರೆ. ಜೊತೆಗೆ ಬಹುತೇಕ ಖಾಸಗಿ ಶಿಕ್ಷಣ ಸಂಸ್ಥೆಗಳು ಉತ್ತಮ ಶಿಕ್ಷಣದ ಹೆಸರಲ್ಲಿ ಹಣವನ್ನು ಲೂಟಿ ಮಾಡುವ ದಂಧೆಗೆ ಇಳಿದಿವೆ. ಎಲ್ಲ ರೀತಿಯಿಂದಲೂ ಹಣ ಸುರಿಯುವ ಸಾಮರ್ಥ್ಯವಿದ್ದು ಈ ಪೈಪೋಟಿಯಲ್ಲಿ ಹೆಚ್ಚು ಅಂಕ ಪಡೆದವರನ್ನು 'ಅರ್ಹ', 'ಯೋಗ್ಯ' ಎಂದು ಕರೆಯಲಾಗುತ್ತದೆ. ಈ ರೀತಿಯಿದ್ದಾಗಲೂ ಎಲ್ಲ 'ಅರ್ಹ'ರಿಗೂ ಸೀಟು/ಉದ್ಯೋಗ ಸಿಕ್ಕುವ ಖಾತರಿಯಾದರೂ ಏನು? ಆದ್ದರಿಂದ ಪ್ರತಿಭೆ ಯೋಗ್ಯತೆ ಎಂಬುದು ಯಾವುದೇ ಒಂದು ಸಾಮಾಜಿಕ ವರ್ಗದ ಆಸ್ತಿಯಲ್ಲ ಅಥವಾ ಸಾಮಾನ್ಯ ವರ್ಗದಲ್ಲಿ ಮಾತ್ರ ಇವು ಅಡಕವಾಗಿರುತ್ತೆ ಎಂಬುದಕ್ಕೆ ಯಾವ ವೈಜ್ಞಾನಿಕ ಆಧಾರವೂ ಇಲ್ಲ.

ಪ್ರತಿ ವರ್ಷ ನಡೆಯುವ ಐಐಟಿಗಳ ಪ್ರವೇಶ ಪರೀಕ್ಷೆಯನ್ನೇ ಗಮನಿಸಿ. ೪೦೦೦ ಸೀಟು ಗಳಿಗೆ ೩ ಲಕ್ಷ ವಿದ್ಯಾರ್ಥಿಗಳು ಪರೀಕ್ಷೆ ಬರೆಯುತ್ತಾರೆ. ಇಲ್ಲಿ ಅರ್ಹತೆ ಎಂಬುದು ರ್‍ಯಾಂಕ್ ಪಟ್ಟಿಯಲ್ಲಿ ಒಂದು ಸ್ಥಾನವಷ್ಟೆ. ಬಹುತೇಕ ಮೇಲ್ಜಾತಿಗಳೇ ಇರುವ ಈ ಪೈಪೋಟಿಯಲ್ಲಿ ಹಾಗಾದರೆ, ಅರ್ಹತೆ ಕೇವಲ ೪೦೦೦ ಜನರಿಗೆ ಮಾತ್ರ ಇರುತ್ತದಾ? ಉಳಿದವರಿಗೆ ಇಲ್ಲವಾ? ಇತ್ತೀಚಿಗೆ ಜೀವ ವಿಮಾ ನಿಗಮದಲ್ಲಿ ೫ ಸಾವಿರ ಹುದ್ದೆಗಳಿಗೆ ನೇಮಕಾತಿ ನಡೆಯಿತು. ಸುಮಾರು ೩ ಲಕ್ಷ ಯುವಕ-ಯುವತಿಯರು ಅರ್ಜಿಗಳನ್ನು ಹಾಕಿದ್ದರು. ಅರ್ಹತೆ ಇದ್ದವರೇ ಅವರೆಲ್ಲರೂ. ಆದರೆ ೨ ಲಕ್ಷ ೯೫ ಸಾವಿರ ಅಭ್ಯರ್ಥಿಗಳಿಗೆ ಉದ್ಯೋಗ ಸಿಗಲಿಲ್ಲ. ಅಂದರೆ ತೀರಾ ಕಡಿಮೆ ಸ್ಥಾನಗಳಿಗೆ ದೊಡ್ಡ ಪ್ರಮಾಣದಲ್ಲಿ ಅರ್ಜಿಗಳು ಬಂದು ಬಹುತೇಕರಿಗೆ ಉದ್ಯೋಗ ಸಿಗದಿದ್ದಾಗ ಅರ್ಹತೆ/ಗುಣಮಟ್ಟಕ್ಕೆ ಬೆಲೆಯೆಲ್ಲಿದೆ?

ಮೀಸಲಾತಿ V/S ಪ್ರತಿಭೆಯ ವಾದವನ್ನು ಮಂಡಲ್ ವರದಿಯಲ್ಲೇ, ಸಂಪೂರ್ಣ ವಿಭಿನ್ನ ಸಾಮಾಜಿಕ ಹಿನ್ನೆಲೆಯ ಇಬ್ಬರು ಅಭ್ಯರ್ಥಿಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಚರ್ಚಿಸಲಾಗಿದೆ.

"ಒಬ್ಬರು ಉತ್ತಮ ಶಿಕ್ಷಣ ಪಡೆದ ಪೋಷಕರನ್ನು ಹೊಂದಿರುವ ಮೇಲ್‌ಮಾಧ್ಯಮ ವರ್ಗದ ಹಿನ್ನೆಲೆಯಿರುವವರು. ಇವರು ನಗರದಲ್ಲಿರುವ ಪಬ್ಲಿಕ್ ಶಾಲೆಯಲ್ಲಿ ಓದುತ್ತಾರೆ. ಅಲ್ಲಿ ವೈವಿಧ್ಯ ಮಯವಾದ ಚಟುವಟಿಕೆಗಳು ನಡೆಯುತ್ತವೆ". "ಮತ್ತೊಬ್ಬರು ಹಳ್ಳಿಯ ಹುಡುಗ ಮತ್ತು ಆತನ ಪೋಷಕರು ಹಳ್ಳಿಯ ಜಾತಿ ವ್ಯವಸ್ಥೆಯಲ್ಲಿ ಸಾಮಾಜಿಕವಾಗಿ ಕೆಳಸ್ಥಾನವನ್ನು ಹೊಂದಿದ್ದಾರೆ. ಪೋಷಕರಿಬ್ಬರೂ ಅನಕ್ಷರಸ್ಥರು. ೮ ಜನರಿರುವ ಇವರ ಕುಟುಂಬ ೨ ಕೋಣೆಗಳ ಗುಡಿಸಿಲಿನಲ್ಲಿದೆ"... "ಹುಟ್ಟುವಾಗ ಇಬ್ಬರಿಗೂ ಒಂದೇ ಮಟ್ಟದ ಬುದ್ಧಿವಂತಿಕೆ ಇತ್ತು ಎಂದು ಪರಿಗಣಿಸಿದಾಗ, ಈಗ ಅಪಾರ ಪ್ರಮಾಣದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಪರಿಸರದ ವ್ಯತ್ಯಾಸಗಳ ಕಾರಣಗಳಿಂದಾಗಿ ಮೊದಲಿನ ಹುಡುಗ ಎರಡನೆಯವನನ್ನು ಯಾವುದೇ ಸ್ಪರ್ಧಾತ್ಮಕ ರಂಗದಲ್ಲೇ ಆಗಲಿ ದೊಡ್ಡ ಅಂತರದಲ್ಲಿ ಸೋಲಿಸಬಹುದಾಗಿದೆ. ಇಬ್ಬರೂ ಅಖಿಲ ಭಾರತ ಸೇವೆಗಳ ಪರೀಕ್ಷೆಗೆ ಕೂರುತ್ತಾರೆ ಮತ್ತು ಮೊದಲಿನವ ಎರಡನೆಯವನಿಗಿಂತ ೫೦ ಅಂಕಗಳನ್ನು ಹೆಚ್ಚುಗಳಿಸುತ್ತಾನೆಂದು ಭಾವಿಸಿಕೊಳ್ಳೋಣ. ಇದರರ್ಥ ಮೊದಲಿನವನು ಶೇ. ೫೦ ರಷ್ಟು ಹೆಚ್ಚು ಪ್ರತಿಭಾವಂತನೆಂದು ಅರ್ಥವೇ? ಅಥವಾ ಹಳ್ಳಿಯ ಹುಡುಗನಿಗಿಂತಾ ಶೇ. ೫೦ರಷ್ಟು ಹೆಚ್ಚು ಕೌಶಲ್ಯವಂತನೆಂದು ಅರ್ಥವೇ? ಪರಸ್ಪರ ಅವರಿಗಿರುವ ಸ್ಥಳೀಯ ಬುದ್ಧಿವಂತಿಕೆಯ ಆಧಾರದಲ್ಲಿ. ಇವರಿಬ್ಬರೂ ಸ್ಥಳ ವಿನಿಮಯ ಮಾಡಿಕೊಂಡರೆ, ಏನಾಗುತ್ತಿತ್ತೆಂದು ನಿರ್ಧರಿಸಲು ಸಾಧ್ಯವೇ?"

ಇಂತಹ ವಾತಾವರಣ ವ್ಯಾಪಕವಾಗಿರುವಾಗ ಅರ್ಹತೆ, ಪ್ರತಿಭೆ, ಸಾಮರ್ಥ್ಯ ಮುಂತಾದ ವಾದಗಳಿಗೆ ಯಾವ ಮಹತ್ವವಿದೆ? ಸಮಾಜದಲ್ಲಿ ಅಸಮಾನತೆಯನ್ನು ಪೋಷಿಸುತ್ತಾ ಸಮಾನತೆಯನ್ನು ಗಾಳಿಯಲ್ಲಿ ಸಾಧಿಸಲು ಸಾಧ್ಯವಿಲ್ಲ. ಸಾಮಾಜಿಕ ಜೀವನದ ಎಲ್ಲ ಆಯಾಮಗಳಲ್ಲೂ ಸಮಾನ ಅಭಿವೃದ್ಧಿಯನ್ನು ಸಾಧಿಸುವುದು ಅತ್ಯವಶ್ಯಕ. ಅದಕ್ಕಾಗಿ ಶಿಕ್ಷಣದಲ್ಲಿ ಪ್ರತಿಯೊಬ್ಬರಿಗೂ ತಮಗೆ ಇಷ್ಟವಾದ ಮತ್ತು ಅಗತ್ಯವಾದ ಕೋರ್ಸ್‌ಗಳನ್ನು ಓದಲು ಅವಕಾಶಗಳನ್ನು ಹೆಚ್ಚು ಮಾಡಬೇಕಾಗುತ್ತದೆ. ಭಾರತದ ಎಲ್ಲರಿಗೂ ಕೈಗೆಟುಕುವಂತಹ ಶಿಕ್ಷಣ ಅವಕಾಶಗಳನ್ನು ತೆರೆದಿಟ್ಟರೆ ಮೀಸಲಾತಿಯ ಗೊಡವೆಯೇ ಬರುವುದಿಲ್ಲ. ಆದರೆ ಆಳುವ ಸರ್ಕಾರಗಳು ಅನುಸರಿಸುತ್ತಿರುವ ಶಿಕ್ಷಣ ಮತ್ತು ಉದ್ಯೋಗದ ನೀತಿಯಿಂದಾಗಿ ಅವಕಾಶಗಳು ಸಂಕುಚಿತಗೊಳ್ಳುತ್ತಿವೆ. ಈ ಬಗ್ಗೆ ಭಾರತದ ಎಲ್ಲ ಯುವಜನರೂ ಗಮನಹರಿಸಬೇಕಾದ ಅಗತ್ಯವಿದೆ.

## ಹಣವೇ ಅರ್ಹತೆಯೆಂಬ ಶ್ರೀಮಂತರ ಮೀಸಲಾತಿ

ಕಳೆದೆರಡು ದಶಕಗಳಲ್ಲಿ ನಾಯಿಕೊಡೆಗಳ ರೀತಿಯಲ್ಲಿ ಖಾಸಗಿ ಮತ್ತು ಸ್ವಯಂ-ಹಣಕಾಸಿನ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಇವರ ಹಿತವನ್ನು ರಕ್ಷಿಸಲು 'ಪೇಮೆಂಟ್' ಮತ್ತು 'ಉಚಿತ' ಸೀಟುಗಳೆಂಬ ನಯವಂಚಕತನದ ನೀತಿಗಳು ಜಾರಿಗೆ ಬಂದಿವೆ. ಹಣವುಳ್ಳವರು ಮಾರುಕಟ್ಟೆಯಲ್ಲಿ ವಸ್ತುಗಳನ್ನು ಕೊಳ್ಳುವ ರೀತಿಯಲ್ಲಿ ಸೀಟುಗಳನ್ನು ಕೊಳ್ಳುತ್ತಾರೆ. ಇಲ್ಲಿ ಯಾವ ಪ್ರತಿಭೆಯಿದೆ? ಮೀಸಲಾತಿಯನ್ನು ವಿರೋಧಿಸುವ ಶಕ್ತಿಗಳು ಹಣವೇ ಅರ್ಹತೆಯಾಗಿರುವ ಈ ಶ್ರೀಮಂತರ ಮೀಸಲಾತಿಯನ್ನು ಪ್ರಶ್ನಿಸುತ್ತಾರೆಯೇ?

ಬಹುತೇಕ ಪೂರ್ತಿಯಾಗಿ ಶ್ರೀಮಂತರಿಗೆ ಮತ್ತು ಮೇಲ್ಜಾತಿಗಳಿಗೆ ಮಾತ್ರ ಸಾಧ್ಯ ಎನ್ನುವಂತಹ ಐ.ಐ.ಟಿ., ಐ.ಐ.ಎಂ. ಪ್ರವೇಶಗಳನ್ನು ಹಿಂದುಳಿದ ವರ್ಗಗಳಿಗೂ ತೆರೆಯುವ ಪ್ರಯತ್ನ ಮಂಡಲ್ ವರದಿಯ ಶಿಫಾರಸ್ಸುಗಳಲ್ಲಿದೆ. ಓ.ಬಿ.ಸಿ. ಮೀಸಲಾತಿ ಜಾರಿಯಾದರೆ ಸಾಮಾನ್ಯ ವರ್ಗದವರಿಗೆ ಸೀಟುಗಳು ಕಡಿಮೆಯಾಗುತ್ತವೆ ಎನ್ನುವ ಆತಂಕ ವ್ಯಕ್ತಪಡಿಸಿ ಸಾಕಷ್ಟು ಪ್ರತಿರೋಧ ವ್ಯಕ್ತವಾಗಿದೆ. ಸೀಟುಗಳ ಸಂಖ್ಯೆಯನ್ನು ಜಾಸ್ತಿ ಮಾಡಿದರೆ ಸಮಸ್ಯೆ ಇತ್ಯರ್ಥವಾಗುತ್ತದೆ. ಆದರೆ ಈ ಸಂಸ್ಥೆಗಳ ಆಡಳಿತ ಮಂಡಳಿಗಳು ಈ ಬಗ್ಗೆ ಶಿಫಾರಸ್ಸು ಮಾಡುವ ಬದಲು ವಿದೇಶಗಳಲ್ಲಿ ಕೇಂದ್ರಗಳನ್ನು ತೆರೆಯಲು ಆಸಕ್ತವಾಗಿವೆ.

ನಮ್ಮ ದೇಶದ ಬಹುಸಂಖ್ಯಾತ ವೃತ್ತಿಪರ ಕಾಲೇಜುಗಳನ್ನು ಇವತ್ತಿಗೆ ನಿಯಂತ್ರಣ ಮಾಡುತ್ತಿರುವವರು ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್, ಬಿಜೆಪಿ ಮತ್ತು ಪ್ರಾದೇಶಿಕ ಪಕ್ಷಗಳಾದ ಜೆಡಿ.ಎಸ್., ಡಿಎಂ.ಕೆ, ಎಸ್.ಪಿ., ಟಿಡಿಪಿ., ಶಿವಸೇನಾ, ಎಐಎಡಿಎಂಕೆ, ಎನ್‌ಸಿಪಿ ಮುಂತಾದ ಬಂಡವಾಳಶಾಹಿ ಪಕ್ಷಗಳ ಮುಖಂಡರು ಮತ್ತು (ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವ) ಕಾರ್ಪೋರೇಟ್ ಕಂಪನಿಗಳು ಇವರಿಗೆ ಲಾಭವೇ ಮುಖ್ಯ. ಹೀಗಾಗಿ ಬಹುತೇಕ ಮೀಸಲಾತಿ ವಿರೋಧಿಗಳಾಗಿದ್ದಾರೆ.

ಈ ಉದಾಹರಣೆಯನ್ನು ಗಮನಿಸಿ (Myths and Facts about OBC Reservation, CPI(M) Delhi) :- ೨೦೦೫-೦೬ರಲ್ಲಿ ದೇಶದ ಒಟ್ಟಾರೆ ಖಾಸಗಿ ಅನುದಾನ ರಹಿತ ವೃತ್ತಿಪರ ಕಾಲೇಜುಗಳಲ್ಲಿ (ಮೆಡಿಕಲ್ ಹೊರತುಪಡಿಸಿ) ಇದ್ದ ಇಂಟೇಕ್ ಸೀಟುಗಳ ಸಂಖ್ಯೆ ೫,೧೪,೩೫೬. ಎಸ್.ಸಿ./ಎಸ್.ಟಿ. /ಓಬಿಸಿಗಳಿಗೆ ಮೀಸಲಾತಿ ನೀಡಿದ್ದರೆ ಶೇ. ೫೦ರಷ್ಟು ಸೀಟುಗಳು ಈ ವರ್ಗಗಳಿಗೆ ಸಿಗುತ್ತಿತ್ತು. ಶಾಸನಾತ್ಮಕ ನೆರವಿನಿಂದ ಇವರಿಗೆ ಶುಲ್ಕಗಳೂ ಸುಮಾರು ಶೇ. ೫೦ರಷ್ಟು ಕಡಿತವಾಗುತ್ತಿತ್ತು. ಸಾಮಾನ್ಯ ವರ್ಗದ ವಿದ್ಯಾರ್ಥಿಗಳಿಗೆ ವಾರ್ಷಿಕ ರೂ. ೬೦,೦೦೦ ಸರಾಸರಿ ಶುಲ್ಕ ಎಂದು ಪರಿಗಣಿಸಿದರೆ ಒಟ್ಟು ಸೀಟುಗಳಿಂದ ವಾರ್ಷಿಕ ರೂ. ೧೫೪೨ ಕೋಟಿ ವಹಿವಾಟು ನಡೆಯುತ್ತಿತ್ತು. ಶೇ. ೫೦ ಮೀಸಲಾತಿ ನೀಡಿದ್ದರೆ ರೂ. ೭೭೧ ಕೋಟಿ ನಷ್ಟ ಈ ಕಾಲೇಜುಗಳಿಗೆ ಆಗುತ್ತಿತ್ತು. ಈ ನಷ್ಟದ ಪ್ರಶ್ನೆಯೇ ಇವರನ್ನು ಕಾಡುತ್ತಿರುವುದು.

ಶಿಕ್ಷಣದ ಈ ವ್ಯಾಪಾರಿಗಳ ಜೊತೆಯಲ್ಲಿ ಕಾರ್ಪೋರೇಟ್ ಮಾಧ್ಯಮಗಳಲ್ಲಿರುವ ಈ ಮೇಲ್ಜಾತಿ ಮತ್ತು ಮೇಲ್ವರ್ಗದ ಜನರು ಸಹ ಇದಕ್ಕೆ ಪೂರಕ ವಾತಾವರಣ ನಿರ್ಮಿಸಲು ಶ್ರಮಿಸುತ್ತಿದ್ದಾರೆ.

### ಮೀಸಲಾತಿ ಜಾತಿ ಆಧಾರದಲ್ಲೋ ಆರ್ಥಿಕ ಆಧಾರದಲ್ಲೋ?

ಪ.ಜಾ. ಮತ್ತು ಪ.ಪಂ.ಗಳು ಆರ್ಥಿಕ-ಸಾಮಾಜಿಕ ಎರಡೂ ರೀತಿಯ ಅಸಮಾನತೆ ಮತ್ತು ದೌರ್ಜನ್ಯಗಳಿಗೆ ಈಡಾಗಿದ್ದಾರೆ ಎಂಬ ಕಾರಣಕ್ಕೆ ಮೀಸಲಾತಿ ಪದ್ಧತಿ ಇರುವಷ್ಟು ಅವಧಿಯ ಸಾಕಷ್ಟು ಕಾಲದವರೆಗೆ ಜಾತಿ ಆಧಾರದಲ್ಲೇ ಮೀಸಲಾತಿ ಒದಗಿಸಬೇಕಾಗುತ್ತದೆ.

ಮೇಲ್ಜಾತಿಗಳ ಬಡವರು ಎದುರಿಸುವಂತಹ ಸಮಸ್ಯೆಗಳ ಜೊತೆಗೆ ಪ.ಜಾ./ಪ.ಪಂ. ಬಡವರು ಜಾತಿ ತಾರತಮ್ಯಗಳ ಅಮಾನವೀಯ ಸಮಸ್ಯೆಯನ್ನು ಎದುರಿಸುವ ಕಾರಣಕ್ಕೆ ಜಾತಿ ಆಧಾರಿತ ಮೀಸಲಾತಿ ಇದೆಯೆಂಬುದನ್ನು ಒಪ್ಪಲಾಗಿದೆ.

ಹಿಂದುಳಿದ ಜಾತಿಗಳಿಗೆ ಮೀಸಲಾತಿ ಪ್ರಶ್ನೆಯ ವಿಚಾರದಲ್ಲಿ ಕಾಕಾ ಸಾಹೇಬ್ ಕಾಲೇಲ್ಕರ್ ಸಮಿತಿಯ ಸಂದರ್ಭದಿಂದಲೂ ಜಾತಿ ಮತ್ತು ವರ್ಗ ಸಾಕಷ್ಟು ಚರ್ಚೆಗಳಾಗಿವೆ. ಸಂವಿಧಾನದ ಕಲಂ ೩೪೦ ಮತ್ತು ರಾಜ್ಯಾಂಗ ನಿರ್ದೇಶಕ ತತ್ವಗಳಲ್ಲಿ "ಹಿಂದುಳಿದ ವರ್ಗ"ಗಳೆಂದು ಕರೆಯಲಾಗಿದೆಯೇ ಹೊರತು "ಹಿಂದುಳಿದ ಜಾತಿ"ಗಳೆಂದು ಗುರುತಿಸಿಲ್ಲ ಎಂಬ ಬಗ್ಗೆ ಕಾಲೇಲ್ಕರ್‌ರವರು ತಮ್ಮ ವರದಿ ಮಂಡನಾ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ. ಕಾಲೇಲ್ಕರ್‌ರವರು ಸಾಮಾಜಿಕ-ಆರ್ಥಿಕ ಸಹಾಯ ಬಯಸುವ ಸಮುದಾಯಗಳನ್ನು 'ಜಾತಿ'ಯ ಬದಲಿಗೆ 'ವರ್ಗ'ವಾಗಿಯೇ ಗುರುತಿಸಬೇಕೆಂದು ಅಭಿಪ್ರಾಯ ಪಟ್ಟಿದ್ದರು. ಆದರೆ ಸಮಿತಿಯ ಬಹುಸಂಖ್ಯಾತರು ಇದಕ್ಕೆ ವಿರೋಧವಾಗಿದ್ದರು.

ಕಾಲೇಲ್ಕರ್ ಅಥವಾ ಮಂಡಲ್ ಆಯೋಗ, ಎರಡರ Terms of referenceಗಳಲ್ಲೂ ಬಹುತೇಕ ಹಿಂದುಳಿದ 'ವರ್ಗ'ಗಳೆಂದೇ ಇವೆ. ಆದರೆ ಪ್ರಾಯೋಗಿಕ ಆಚರಣೆಯಲ್ಲಿ ಇವೆರೆಡರ ನಡುವೆ ವ್ಯತ್ಯಾಸ ಕ್ಷೀಣಿಸುತ್ತಾ ಬಂದಿದೆ ಮತ್ತು ವರ್ಗಗಳ ಬದಲಿಗೆ ಜಾತಿಗಳ ಆಧಾರದಲ್ಲೇ ಗುರುತಿಸಲ್ಪಟ್ಟಿದೆ. ಮಂಡಲ್ ವರದಿಯ ಸಂದರ್ಭದಲ್ಲಿ ಇಂತಹ ಪ್ರಶ್ನೆ ಚರ್ಚೆಗೆ ಬಂದಾಗ ವರ್ಗಗಳನ್ನು ಜಾತಿಗಳನ್ನಾಗಿಯೇ ಗುರುತಿಸುವ ಕೆಲಸವನ್ನು ಪ್ರಜ್ಞಾಪೂರ್ವಕವಾಗಿಯೇ ಮಾಡಲಾಗಿದೆ. ಇಲ್ಲಿ ಸಾಮಾಜಿಕ ಹಿಂದುಳಿದಿರುವಿಕೆ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆಯ ಸ್ಥಾನಮಾನಗಳ ಸಂಬಂಧಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಸಾಮಾಜಿಕ ಸ್ಥಾನಮಾನ "ಹೊರಿಸಿದ ಸ್ಥಾನಮಾನ", ಶೈಕ್ಷಣಿಕ ಸ್ಥಾನಮಾನ "ಗಳಿಸಿದ ಸ್ಥಾನಮಾನ" ಎಂಬ ಆಧಾರದಲ್ಲಿ ಚರ್ಚಿಸಿದ ಮಂಡಲ್ ವರದಿಯ ತಜ್ಞರ ಸಮಿತಿಯು ಸಾಮಾಜಿಕವಾಗಿ "ಹೊರಿಸಿದ ಸ್ಥಾನಮಾನ"ವನ್ನು ಅತಿಮುಖ್ಯವೆಂದು ಪರಿಗಣಿಸಿತು. ಈ ಹಿನ್ನೆಲೆಯಲ್ಲೇ ಜಾತಿಯನ್ನೇ ಮೀಸಲಾತಿ ಪರಿಗಣನೆಯ ಮಾನದಂಡವಾಗಿ ಬಳಸಿತು.

ಆರ್ಥಿಕ ಅಂಶವನ್ನು ಪರಿಗಣಿಸದೆ ಜಾತಿಯ ಅಂಶವನ್ನು ಮಾತ್ರ ಪರಿಗಣಿಸುತ್ತಿರುವುದರಿಂದ ಆಯಾ ಜಾತಿಗಳ ಶ್ರೀಮಂತರಿಗೇ ಮೀಸಲಾತಿಯ ಪ್ರಯೋಜನಗಳು ಕೇಂದ್ರೀಕೃತವಾಗುತ್ತಿವೆಯೆಂಬ ಪ್ರಶ್ನೆ ಸಾಕಷ್ಟು ಪ್ರಚಲಿತವಾಗಿದೆ. ಪ.ಜಾ. ಮತ್ತು ಪ.ಪಂ.ಗಳ ವಿಚಾರದಲ್ಲಿ ಇದನ್ನು ಒಪ್ಪಲು ಅಂಕಿ-ಅಂಶಗಳು ಸಹಕರಿಸುವುದಿಲ್ಲ. ಏಕೆಂದರೆ ಕೇಂದ್ರ ಸರ್ಕಾರದಲ್ಲಾಗಲೀ ಅಥವಾ ಯಾವುದೇ ರಾಜ್ಯ ಸರ್ಕಾರದಲ್ಲಾಗಲೀ ಎಸ್.ಸಿ./ಎಸ್.ಟಿ. ಹುದ್ದೆಗಳು ಪೂರ್ತಿ ಭರ್ತಿಯಾಗದಿರುವುದನ್ನು ಕಾಣುತ್ತೇವೆ. ಹೀಗಾಗಿಯೇ ಬ್ಯಾಕ್‌ಲಾಗ್ ಪ್ರಶ್ನೆಗಳು ನಿರಂತರವಾಗಿ ಚರ್ಚೆಯಾಗುತ್ತಿರುತ್ತವೆ. ಕರ್ನಾಟಕ ಸರ್ಕಾರದ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯಲ್ಲಿ ವಿವಿಧ ವರ್ಗಗಳ ಇಂಜಿನಿಯರ್‌ಗಳಲ್ಲಿ (೧೯೯೭) ಸಂವಿಧಾನ ಬದ್ಧವಾಗಿ ಶೇ. ೨೨.೫೦ರ ಪ್ರಕಾರ ಎಸ್.ಸಿ./ಎಸ್.ಟಿ.ಗಳಿಗೆ ೨೨೪೪ ಹುದ್ದೆಗಳು ಇರಬೇಕಿತ್ತು. ಆದರೆ ಇದ್ದದ್ದು

ಕೇವಲ ೮೦೦ ಹುದ್ದೆಗಳು. ಅಂದರೆ ಶೇ. ೭.೮೪ ಮಾತ್ರ. ಇಂತಹ ಕಾರಣಗಳಿಗಾಗಿಯೇ ಎಸ್.ಸಿ./ಎಸ್.ಟಿ. ಮೀಸಲಾತಿಯಲ್ಲಿ ಆರ್ಥಿಕ ಮಾನದಂಡವನ್ನು ಬಳಸಲು ಸದ್ಯಕ್ಕೆ ಸಾಧ್ಯ ವಿಲ್ಲ ಎಂಬುದನ್ನು ಗಮನಿಸಬೇಕು.

ಹಿಂದುಳಿದ ಜಾತಿಗಳ ವಿಚಾರದಲ್ಲಿ ಈ ಪರಿಸ್ಥಿತಿಗೆ ಸ್ವಲ್ಪ ಭಿನ್ನವಾದ ಸ್ಥಿತಿಯಿದೆ. ಇಲ್ಲಿ ಬ್ಯಾಕ್‌ಲಾಗ್ ಇಲ್ಲ. ಒಮ್ಮೆ ಮೀಸಲಾತಿಯ ಪ್ರಯೋಜನ ಪಡೆದವರನ್ನು (ಕೆನೆಪದರ) ಅದರ ವ್ಯಾಪ್ತಿಯಿಂದ ಹೊರಗಿಡುವ ಪ್ರಸ್ತಾಪಗಳು ಚರ್ಚೆಯಲ್ಲಿವೆ. ಹಿಂದುಳಿದ ಸಮುದಾಯ ಗಳ ಮೀಸಲಾತಿ ಸಂದರ್ಭದಲ್ಲಿ ಜಾತಿ ಮೂಲವಾಗಿ ಇದ್ದರೂ ಸಹ ಆರ್ಥಿಕ ಸ್ಥಾನಮಾನಗಳನ್ನು ಕೂಡಾ ಪರಿಗಣಿಸಬೇಕೆಂಬ ಸಲಹೆ '೧೯೫೦'ರ ದಶಕದಲ್ಲೇ ಕೇರಳ ಸರ್ಕಾರ ರಚಿಸಿದ್ದ ಇ.ಎಂ.ಎಸ್. ನಂಬೂದಿರಿಪಾದ್ ಅಧ್ಯಕ್ಷತೆಯ ಆಡಳಿತ ಸುಧಾರಣೆಗಳ ಸಮಿತಿ ಶಿಫಾರಸ್ಸು ಮಾಡಿತ್ತು. ಅಂದರೆ ನಿಗದಿಪಡಿಸಿದ ಸೀಲಿಂಗ್‌ಗಿಂತ ಹೆಚ್ಚಿನ ಕುಟುಂಬ ಆದಾಯವಿರುವ ಹಿಂದುಳಿದ ಜಾತಿಯ ಅಭ್ಯರ್ಥಿಗಳಿಗೆ ಮೀಸಲಾತಿ ಸೌಲಭ್ಯವನ್ನು ಅನ್ವಯಿಸಬಾರದೆಂಬ ನಿರ್ದಿಷ್ಟ ಸೂಚನೆ ಈ ಸಮಿತಿ ಮಾಡಿತ್ತು. ಆದರೆ ಸ್ಥಳೀಯ ರಾಜಕೀಯ ಕಾರಣಗಳಿಗಾಗಿ ಇದು ಆಗ ಜಾರಿಯಾಗಲಿಲ್ಲ. ಇದಾದ ಕೆಲ ವರ್ಷಗಳಲ್ಲಿ ಬಿಹಾರದಲ್ಲಿ ನಡೆದ ಮೀಸಲಾತಿ ಪರ-ವಿರೋಧ ಚಳುವಳಿಗಳ ಹಿನ್ನೆಲೆಯಲ್ಲಿ ಮುಖ್ಯಮಂತ್ರಿ ಕರ್ಪೂರಿ ಠಾಕೂರ್ ಒಂದು ಸೂತ್ರವನ್ನು ರೂಪಿಸಿದರು. ಇದು "ಕರ್ಪೂರಿ ಠಾಕೂರ್ ಸೂತ್ರ"ವೆಂದೇ ಹೆಸರಾಗಿದೆ. ಇವರು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳನ್ನು ಎರಡು ಹಿಂದುಳಿದ ಮತ್ತು ಅತ್ಯಂತ ಹಿಂದುಳಿದ- ಎಂಬ ಗುಂಪುಗಳಾಗಿ ವಿಂಗಡಿಸಿದರು. ಅತ್ಯಂತ ಹೆಚ್ಚು ಹಿಂದು ಳಿದವರು ಪೂರ್ತಿಯಾಗಿ ಜಾತಿ ಆಧಾರದಲ್ಲೇ ಮೀಸಲಾತಿ ಪಡೆಯುತ್ತಾರೆ. ಕಡಿಮೆ ಹಿಂದುಳಿದ ವರೂ ಕೂಡಾ ಜಾತಿ ಆಧಾರದಲ್ಲೇ ಮೀಸಲಾತಿ ಪಡೆಯುತ್ತಾರೆ. ಆದರೆ ಇದರಲ್ಲಿರುವ ಶ್ರೀಮಂತರಿಗೆ ಮೀಸಲಾತಿ ಇರುವುದಿಲ್ಲ. ಈ ಸೂತ್ರ ಬಿಹಾರದಲ್ಲಿ ಹಲವು ಕಾಲದಿಂದ ಜಾರಿಯಲ್ಲಿದೆ. ಇದರ ಒಂದು ಭಿನ್ನರೂಪವಾಗಿ ಕರ್ನಾಟಕದಲ್ಲಿ ಜಸ್ಟೀಸ್ ಒ. ಚಿನ್ನಪ್ಪರೆಡ್ಡಿ ಆಯೋಗ ಶಿಫಾರಸ್ಸು ಮಾಡಿತು.

ಇವುಗಳ ಅನುಭವದ ಆಧಾರದಲ್ಲಿ ವಿ.ಪಿ. ಸಿಂಗ್ ಸರ್ಕಾರ ಮಂಡಲ್ ವರದಿ ಜಾರಿ ಯಲ್ಲಿ ಜಾಣ್ಮೆಯನ್ನು ವಹಿಸಬೇಕಾಗಿತ್ತು. ಈಗಲಾದರೂ ಸಹ ಯು.ಪಿ.ಎ. ಸರ್ಕಾರ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹಿಂದುಳಿದ ಜಾತಿಗಳ ಮೀಸಲಾತಿಯಲ್ಲಿ ಆರ್ಥಿಕ ಕೆನೆಪದರವನ್ನು ಮೀಸಲಾತಿ ಸೌಲಭ್ಯದಿಂದ ಪ್ರತ್ಯೇಕಿಸುವ ಅಗತ್ಯವಿದೆ.

ಅಂದರೆ ಒಟ್ಟಾರೆ ಇಲ್ಲಿ ಗಮನಿಸಬೇಕಿರುವುದು ಮೀಸಲಾತಿಯನ್ನು ವಿರೋಧಿಸುವವರು ಬಳಸುವ ವಾದಗಳು ಬಹುತೇಕ ಹುರುಳಿಲ್ಲದ ವಾದಗಳಾಗಿವೆ. ಆದರೆ ಒಂದಂಶವನ್ನು ಮೀಸಲಾತಿಯ ಪರವಾಗಿರುವವರು. 'ಮುಂದುವರಿದ' ಜಾತಿ ಮತ್ತು ವರ್ಗಗಳ ಲಕ್ಷಾಂತರ ಯುವಕ-ಯುವತಿಯರ ವಿದ್ಯಾಭ್ಯಾಸ ಮತ್ತು ಉದ್ಯೋಗ ಬೇಡಿಕೆಯ ಸಹಜವಾದ ಆಕಾಂಕ್ಷೆಯನ್ನು

ಗಮನಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಮೇಲ್ಜಾತಿಗಳ ಆರ್ಥಿಕವಾಗಿ ಹಿಂದುಳಿದ ಜನರಿಗೆ ಪ್ರತ್ಯೇಕ ಮೀಸಲಾತಿಯ ವಾದವನ್ನು ಪರಿಶೀಲಿಸಬೇಕು.

**ಮೀಸಲಾತಿ ಎಲ್ಲಿಯವರೆಗೆ?**

ಡಾ. ಅಂಬೇಡ್ಕರ್ ಅವರು ಬರೆದ ಹಾಗೆ ಮೀಸಲಾತಿಯು ೧೦ ವರ್ಷಗಳಿಗೆ ತಾತ್ಕಾಲಿಕ ಕ್ರಮವಾಗಿ ರೂಪಿಸಲಾಗಿತ್ತು. ಹತ್ತು ವರ್ಷಗಳು ಏಕೆಂದರೆ, ಅಷ್ಟರಲ್ಲಿ ಪ.ಜಾ., ಪ.ಪಂ. ಮತ್ತು ಹಿಂದುಳಿದ ಜಾತಿಗಳು ತಮ್ಮ ಹಿಂದುಳಿದಿರುವಿಕೆಯನ್ನು ಹೋಗಲಾಡಿಸಿಕೊಳ್ಳುತ್ತವೆ. ಹೀಗಾಗಿ ಮೀಸಲಾತಿ ಅಗತ್ಯವಿರುವುದಿಲ್ಲ ಎಂದು. ಹತ್ತು ವರ್ಷಗಳಲ್ಲಿ ಬದಲಾವಣೆ ಗಮನಾರ್ಹವಾಗಿ ಆಗದಿದ್ದಾಗ ಮತ್ತೆ ಮತ್ತೆ ನವೀಕರಣ ಮಾಡುತ್ತಾ ಬರಲಾಗಿದೆ. ಹತ್ತು ವರ್ಷಗಳ ನಂತರ ಪರಿಷ್ಕರಿಸುವ ಬಗ್ಗೆ ಸಂವಿಧಾನ ರಚನಾ ಸಭೆಯಲ್ಲಿ ಯೋಜಿಸಲಾಗಿತ್ತು. ಆದರೆ ಮೀಸಲಾತಿಯನ್ನು ಪರಿಷ್ಕರಿಸುವ ವಾಸ್ತವ ಸೃಷ್ಟಿಯಾಗಲೇ ಇಲ್ಲ. ಹೀಗಾಗಿ ಪ್ರತಿ ಹತ್ತು ವರ್ಷಗಳಿಗೆ ನವೀಕರಣವಾಗುತ್ತಿದೆ. ಈ ಹಿನ್ನೆಲೆಯಲ್ಲೇ ಮಂಡಲ್ ವರದಿಯು ಈ ಮೂಲ ಪ್ರಶ್ನೆಗೆ ಉತ್ತರಿಸುವ ಕೆಲಸವನ್ನು ಮಾಡಿದೆ.

ಪ.ಜಾ./ಪ.ಪಂ./ಓ.ಬಿ.ಸಿ. ಜಾತಿಗಳಿಗೆ ಮೀಸಲಾತಿ ಅಗತ್ಯವಾಗಿದೆ, ಇಲ್ಲವಾದರೆ ಮುಂದುವರಿದ ಜಾತಿಗಳ ಮಟ್ಟಕ್ಕೆ ತಲುಪಲು ಕಷ್ಟವಾಗುತ್ತದೆ. ಆದರೆ ಮೀಸಲಾತಿ ಎಲ್ಲದಕ್ಕೂ ಸರ್ವರೋಗ ನಿವಾರಕವಲ್ಲ. ಇದರೊಂದಿಗೆ ಮಾಡಬೇಕಾದ ಹಲವು ಅಂಶಗಳಿವೆ. ಅದರಲ್ಲಿ ಬಹಳ ಮುಖ್ಯವಾಗಿ, ಭೂಸುಧಾರಣೆಗಳಾಗಬೇಕೆಂಬ ನಿರ್ದಿಷ್ಟ ಪ್ರಸ್ತಾಪವನ್ನು ಮಂಡಲ್ ವರದಿ ಮಾಡಿದೆ. ಹಲವಾರು ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಆರ್ಥಿಕ ಕ್ರಮಗಳನ್ನು ಅಳವಡಿಸಬೇಕು ಮತ್ತು ಮೀಸಲಾತಿಯನ್ನು ಅದರೊಂದಿಗೆ ಸಮನ್ವಯಗೊಳಿಸಬೇಕೆಂದು ವರದಿಯಲ್ಲಿ ಹೇಳಲಾಗಿದೆ.

ಜಾತಿ ವ್ಯವಸ್ಥೆಯು ಹಲವು ಶತಮಾನಗಳ ಅವಮಾನವನ್ನು ಬಹುಸಂಖ್ಯಾತರ ಮೇಲೆ ಹೊರಿಸಿದೆ ಮತ್ತು ಈಗಲೂ ಮುಂದುವರಿಸಿದೆ ಎನ್ನುವಾಗಲೇ, ಅದು ಕೇವಲ ಒಂದು ಸಾಮಾಜಿಕ ಸಂಸ್ಥೆಯಲ್ಲ. ಇದಕ್ಕೆ ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಆಯಾಮಗಳಿವೆ. ಬಹುಸಂಖ್ಯಾತ ಜನರ ಮೇಲಿನ ಸಾಮಾಜಿಕ ದೌರ್ಜನ್ಯವನ್ನು ಜಾತಿ ದಬ್ಬಾಳಿಕೆಯಲ್ಲಿ ಕಂಡರೆ, ಆರ್ಥಿಕ ದಬ್ಬಾಳಿಕೆಯನ್ನು ಪಾಳೇಗಾರಿ-ಜಮೀನ್ದಾರಿ ದಬ್ಬಾಳಿಕೆಯಲ್ಲಿ ಕಾಣಬಹುದು. ಹೀಗಾಗಿ ಸಾಮಾಜಿಕ ಹಿಂದುಳಿದಿರುವಿಕೆಯನ್ನು ಬಹುಮುಖಿಯ ಕ್ರಮಗಳ ಮೂಲಕ ಪರಿಹರಿಸಬೇಕಾಗಿದೆ.

ಸ್ವಾತಂತ್ರ್ಯ ನಂತರದ ಆಳುವ ಸರ್ಕಾರಗಳು ಸಾಮಾಜಿಕ ಹಿಂದುಳಿದಿರುವಿಕೆ ಸರಿಪಡಿಸಲು ಮೀಸಲಾತಿಯೇ ದಿವ್ಯೌಷಧ ಎನ್ನುವ ಹಾಗೆ ಬಿಂಬಿಸಿರುವುದನ್ನು ಹಲವು ಸಂದರ್ಭಗಳಲ್ಲಿ ಕಾಣುತ್ತೇವೆ. ಇಷ್ಟಕ್ಕೂ ಉದ್ಯೋಗಗಳಲ್ಲಿ ಮೀಸಲಾತಿ ಪ್ರಶ್ನೆ ಬಂದಾಗ ಸರ್ಕಾರಿ/ಸಾರ್ವಜನಿಕ ಕ್ಷೇತ್ರಗಳಿಗೆ ಮಾತ್ರ ಅನ್ವಯವಾಗುವಂತಹದ್ದು, ಭಾರತದ ಒಟ್ಟು ಉದ್ಯೋಗದಲ್ಲಿ ಸರ್ಕಾರಿ

-ಸಾರ್ವಜನಿಕ ಉದ್ಯೋಗದ ಪಾಲು ಕೇವಲ ಶೇ. ೧ ರಿಂದ ೨ ಮಾತ್ರ. ಇನ್ನುಳಿದ ಸುಮಾರು ಶೇ. ೯೮ರಷ್ಟು ಉದ್ಯೋಗ ಖಾಸಗಿ ರಂಗದಲ್ಲಿದೆ. ೧೯೯೧ರಿಂದ ಜಾರಿಯಲ್ಲಿರುವ ಎಲ್.ಪಿ.ಜಿ ನೀತಿಗಳಿಂದಾಗಿ ಸರ್ಕಾರಿ ಉದ್ಯೋಗಗಳು ಮತ್ತಷ್ಟು ಕಡಿತಗೊಂಡಿದೆ. ಹೀಗಾಗಿ ಹೆಚ್ಚೆಚ್ಚು ಸಂಕುಚಿತಗೊಳ್ಳುತ್ತಿರುವ ಸರ್ಕಾರಿ ಉದ್ಯೋಗ ರಂಗದಲ್ಲಿ ಹೆಚ್ಚೆಚ್ಚು ಉದ್ಯೋಗಾಕಾಂಕ್ಷಿಗಳನ್ನು ಪೈಪೋಟಿಗೆ ಇಳಿಸುವುದರೊಂದಿಗೆ ಜಾತಿ ಜಗಳಗಳನ್ನು ಮತ್ತು ಜಾತಿ-ವೈಷಮ್ಯವನ್ನು ಹೆಚ್ಚಿಸುವ ಪ್ರಕ್ರಿಯೆಯೂ ನಡೆದಿದೆ.

ಮೀಸಲಾತಿ ಪ್ರಕ್ರಿಯೆಯಿಂದ ಪ.ಜಾ./ಪ.ಪಂ.ದ ಎಲ್ಲರಿಗೂ ಪೂರ್ಣ ಪ್ರಮಾಣದಲ್ಲಿ ಉದ್ಯೋಗ ಸಿಗಲಿಲ್ಲ. ಏಕೆಂದರೆ ಅದಕ್ಕೆ ಸೀಮಿತತೆಯಿದೆ. ಬಹುಸಂಖ್ಯಾತ ಪ.ಜಾ./ ಪ.ಪಂ./ಒ.ಬಿ.ಸಿ. ಜಾತಿಗಳು ಇನ್ನೂ ಹಿಂದುಳಿದಿವೆಯೆಂದರೆ ಅವರ ಬದುಕಿನ ಮೂಲಗಳಲ್ಲಿ ತಾರತಮ್ಯವಿದೆ. ಅದರಲ್ಲಿ ಮುಖ್ಯವಾಗಿ ಭೂಮಿಯ ಪ್ರಶ್ನೆ ಪ್ರಧಾನವಾದುದು. ಅದಕ್ಕಾಗಿ ಇಡೀ ದೇಶದಲ್ಲಿ ಸಮಗ್ರವಾದ ಭೂಸುಧಾರಣೆಗಳನ್ನು ತರಬೇಕಾಗಿದೆ. ಕಾನೂನುಬದ್ಧ ಮೀಸಲಾತಿಯಿಂದ ಹೊರಗಿರುವವರ ಸಂಖ್ಯೆ ಸರಿಸುಮಾರು ಶೇ. ೯೦ರಷ್ಟಿದೆ. ಇವರು ಕೃಷಿ, ಕೈಗಾರಿಕೆ, ಸೇವೆ ಮೂರು ವಲಯಗಳಲ್ಲಿ ಹರಡಿಕೊಂಡಿದ್ದಾರೆ. ಇವೆಲ್ಲವೂ ಖಾಸಗಿ ರಂಗವೇ. ಕೃಷಿಯಲ್ಲಿ ಭೂಸುಧಾರಣೆ ಮುಖ್ಯವಾದರೆ, ಖಾಸಗಿ ಕೈಗಾರಿಕೆ ಮತ್ತು ಸೇವೆಗಳಲ್ಲಿ ಮೀಸಲಾತಿ ಯನ್ನು ಜಾರಿ ಮಾಡುವುದು ಪರಿಹಾರದ ಒಂದು ಪ್ರಮುಖ ಮಾರ್ಗವಾಗಿದೆ. ಎಸ್.ಸಿ./ ಎಸ್.ಟಿ. ಮತ್ತು ಹಿಂದುಳಿದ ಜಾತಿಗಳು ಜನರು ವಾಸಿಸುವ ಪ್ರದೇಶಗಳ ಅಭಿವೃದ್ಧಿ, ಅಸ್ಪೃಶ್ಯತೆ ನಿವಾರಣೆ, ದೌರ್ಜನ್ಯಗಳಿಂದ ರಕ್ಷಣೆ, ಆಹಾರದ ಭದ್ರತೆ, ಆರೋಗ್ಯದ ಲಭ್ಯತೆ, ಸಾಲ ಸೌಲಭ್ಯಗಳು, ಅಸಂಘಟಿತರಿಗೆ ಸಾಮಾಜಿಕ ಸುರಕ್ಷಾ ಕಾಯ್ದೆ ಮುಂತಾದ ಬಹುಮುಖಿಯ ಪರಿಹಾರದ ಮಾರ್ಗಗಳನ್ನು ಅವಲೋಕಿಸುವುದು ಅಗತ್ಯ.

ಒಂದು ರೊಟ್ಟಿಯನ್ನು ಮಾಡಿ ನೂರು ಜನರಿಗೆ ಹಂಚುವ, ಅದಕ್ಕಾಗಿ ನೂರು ಜನರಲ್ಲಿ ಪೈಪೋಟಿಯನ್ನು ಬೆಳೆಸುವ ಪರಿಸ್ಥಿತಿಯಲ್ಲಿ ಹಸಿವಿನ ನಿವಾರಣೆ ಅಸಾಧ್ಯ. ನೂರು ಜನರಿಗೆ ನೂರು ರೊಟ್ಟಿ ನೀಡುವ ಯೋಜನೆಯಲ್ಲಿ ಮಾತ್ರ ಎಲ್ಲರ ಹಸಿವಿನ ನಿವಾರಣೆ ಸಾಧ್ಯ. ಅದಕ್ಕಾಗಿ ಈ ದೇಶದ ವಿದ್ಯಾರ್ಥಿ-ಯುವಜನ ಯೋಚಿಸಬೇಕು.

ಅಲ್ಲಿಯವರೆಗೆ ಇರುವುದರಲ್ಲಿ ಸ್ವಲ್ಪ ಹೆಚ್ಚಾಗಿ ಹಸಿದವರಿಗೆ ಹಂಚಬೇಕು. ಆ ರೀತಿ ಹಂಚಿದಾಗ ಅವರು ಇತರರ ರೊಟ್ಟಿಯನ್ನು ತಿನ್ನುತ್ತಿದ್ದಾರೆ ಎಂದು ತಪ್ಪಾಗಿ ಭಾವಿಸುವ ಅಗತ್ಯವೇ ಇಲ್ಲ. ಅದು ಅವರದೇ ರೊಟ್ಟಿ.

...

# ೩

# ಮಹಿಳಾ ಮೀಸಲಾತಿ - ಕೆಲವು ಟಿಪ್ಪಣಿಗಳು

ಡಾ. ಬಸವರಾಜ ಸಬರದ

ಅಸಮಾನತೆಯ ವ್ಯವಸ್ಥೆಯಲ್ಲಿ ಮೀಸಲಾತಿಯನ್ನು ಕೊಡಮಾಡುವುದು ಸರಕಾರದ ಕರ್ತವ್ಯವಾದರೆ, ಅದನ್ನು ಪಡೆಯುವುದು ಶೋಷಿತ ಸಮುದಾಯದ ಹಕ್ಕು. ಇದು ಪ್ರಜಾ ಪ್ರಭುತ್ವ ವ್ಯವಸ್ಥೆಯ ಪ್ರಾಥಮಿಕ ತಿಳುವಳಿಕೆ. ಸರಕಾರಗಳ ಇಂತಹ ಕರ್ತವ್ಯ, ದಾನ ಕೊಟ್ಟಿದ್ದೇವೆಂಬ ಅಹಂಭಾವಕ್ಕೇರಿದಾಗ, ಮೀಸಲಾತಿ ಪಡೆಯುವವರಲ್ಲಿ ಕೀಳರಿಮೆಯನ್ನುಂಟು ಮಾಡುತ್ತದೆ. ಮಾನಸಿಕವಾಗಿ ಮೇಲು-ಕೀಳು ಹೋಗದ ಹೊರತು ಸಮಾನತೆಯ ಭಾವನೆ ಹುಟ್ಟುವುದಿಲ್ಲ. ಆದುದರಿಂದ ಮೀಸಲಾತಿ ಕೊಡುವವರು ಮತ್ತು ಮೀಸಲಾತಿ ಪಡೆಯುವವರ ಜತೆಗೆ ಅದನ್ನು ನೋಡುವವರಲ್ಲಿಯೂ ದೊಡ್ಡ ಮನಸ್ಸಿರಬೇಕು. ಆಗ ಮಾತ್ರ ಮೀಸಲಾತಿಯೆಂಬುದು ಪ್ರಜಾಪ್ರಭುತ್ವದ ಸಹಜ ಕ್ರಿಯೆಯಾಗುತ್ತದೆ.

ಅಸಮಾನತೆಗೆ ಅನೇಕ ಕಾರಣಗಳನ್ನು ಗುರುತಿಸಿದ ಸಮಾಜವಿಜ್ಞಾನಿಗಳು-ಚಿಂತಕರು ಭಾರತದ ಸಂವಿಧಾನದಲ್ಲಿ ಮೊದಲು ಜಾತಿಯಾಧಾರಿತ ಮೀಸಲಾತಿಯನ್ನು ಜಾರಿಗೆ ತಂದರು. ನಂತರ ಕೆಲವು ಕಡೆ, ಪ್ರದೇಶಾಧಾರಿತ ಮೀಸಲಾತಿಯೂ ಜಾರಿಗೆ ಬಂತು. ಇತ್ತೀಚಿನ ದಶಕಗಳಲ್ಲಿ ಚರ್ಚೆಯಾಗುತ್ತಿರುವ ವಿಷಯವೇ ಲಿಂಗಾಧಾರಿತ ಮೀಸಲಾತಿ. ಜಾತಿಯಾಧಾರಿತ ಮೀಸಲಾತಿ ಎಷ್ಟು ವೈಜ್ಞಾನಿಕವಾಗಿದೆಯೊ, ಲಿಂಗಾಧಾರಿತ ಮೀಸಲಾತಿಯೂ ಕೂಡ ಅಷ್ಟೇ ವೈಜ್ಞಾನಿಕವಾಗಿದೆ. ಈ ಸಮಾಜ ವ್ಯವಸ್ಥೆಯಲ್ಲಿ ಶತಶತಮಾನಗಳಿಂದ ದಲಿತರು ಮಹಿಳೆಯರು ಶೋಷಣೆಗೊಳಗಾಗುತ್ತಲೇ ಬಂದಿದ್ದಾರೆ. ಜಾತಿಯಾಧಾರಿತ ಮೀಸಲಾತಿಯ ಜತೆಗೇ ಲಿಂಗಾಧಾರಿತ ಮೀಸಲಾತಿ ಬರಬೇಕಾಗಿತ್ತು. ಆದರೆ ಸ್ವಾತಂತ್ರ್ಯ ದೊರೆತು ಆರು ದಶಕಗಳೇ ಕಳೆದರೂ ಮಹಿಳಾ ಮೀಸಲಾತಿ ಇನ್ನೂ ಚರ್ಚೆಯ ವಿಷಯವಾಗಿಯೇ ಉಳಿದಿರುವುದು ಲಿಂಗ ರಾಜಕೀಯದ ಅಹಂಕಾರವನ್ನು ತೋರಿಸುತ್ತದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮೀಸಲಾತಿಯೆಂಬುದು ಸಹಜ ಪ್ರಕ್ರಿಯೆಯಾಗಬೇಕಾದರೆ, ಅದನ್ನು ಕೊಡುವವರಲ್ಲಿ ಅಹಂಭಾವವಿರಬಾರದು ಮತ್ತು ರಾಜಕೀಯ ಹುನ್ನಾರಗಳಿರಬಾರದು.

ಅದನ್ನು ಪಡೆಯುವವರಲ್ಲಿ ಕೀಳರಿಮೆಯಿರಬಾರದು ಮತ್ತು ಅದನ್ನು ನೋಡುವವರಲ್ಲಿ ಅಸಹನೆ ಇರಬಾರದು. ಆದರೆ ಇಂದು ವಿವಿಧ ಮೀಸಲಾತಿ ಪ್ರಕಟಿಸುವ ಸರಕಾರಗಳು ತಮ್ಮ ರಾಜಕೀಯ ಸ್ವಾರ್ಥಕ್ಕಾಗಿ, ಮೀಸಲಾತಿಯನ್ನು ಒಂದು ದಾಳವನ್ನಾಗಿ ರೂಪಿಸುತ್ತವೆ ಆಗ ಅವಕಾಶ ವಂಚಿತರಿಗೆ ಮೀಸಲಾತಿ ಸಿಗದೇ ಹೋಗುತ್ತದೆ. ಆಗ ಸಹಜವಾಗಿಯೇ ಸಮುದಾಯ ಗಳಲ್ಲಿ ಅಸಹನೆ ಹುಟ್ಟಿಕೊಳ್ಳುತ್ತದೆ. ಇಂತಹ ಅಸಹನೆಗಳೇ ಮುಂದೆ ಕೋಮುವಾದಗಳಾಗಿ ಹಿಂಸೆಯ ರೂಪ ಪಡೆಯುತ್ತವೆ. ಆದುದರಿಂದ ಮೀಸಲಾತಿ ಪ್ರಶ್ನೆಯನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಕಟ್ಟಿಕೊಳ್ಳುವುದು ತುಂಬಾ ಅಗತ್ಯವಿದೆ.

ಈ ದೇಶದ ಅರ್ಧದಷ್ಟು ಜನಸಂಖ್ಯೆ ಹೊಂದಿರುವ ಮಹಿಳೆ, ಶತಮಾನಗಳಿಂದಲೂ ಶೋಷಣೆಗೊಳಗಾಗಿದ್ದಾಳೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಜನಸಂಖ್ಯೆಯನ್ನಾ ಧರಿಸಿದರೆ ಮಹಿಳೆಯರಿಗೆ ಐವತ್ತು ಪ್ರತಿಶತ ಮೀಸಲಾತಿ ನೀಡುವುದು ಸರಿಯೆನಿಸುತ್ತದೆ. ಆದರೆ ಅವರು ೧/೩ ಭಾಗದಷ್ಟು ಅಂದರೆ ೩೩% ಮೀಸಲಾತಿ ಕೇಳುತ್ತಿದ್ದಾರೆ. ಅವರ ಈ ಬೇಡಿಕೆಯನ್ನು ರಾಜಕೀಯ ಪಕ್ಷಗಳು ಸುಮ್ಮನೇ ಒಪ್ಪಿಕೊಂಡು ಬಿಡಬಹುದು. ಆದರೆ ಎಡಪಕ್ಷ ಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ರಾಜಕೀಯ ಪಕ್ಷಗಳು ಈ ವಿಷಯದಲ್ಲಿ ಮೀನ-ಮೇಷ ಎಣಿಸುತ್ತಲಿವೆ.

೧೯೯೨ರಲ್ಲಿ ಸಂವಿಧಾನ ಅನುಚ್ಛೇದ ೭೩, ೭೪ಕ್ಕೆ ತಿದ್ದುಪಡಿ ತಂದು ಸ್ಥಳೀಯ ಪಂಚಾಯತ ಸಂಸ್ಥೆಗಳಲ್ಲಿ ಮಹಿಳೆಯರಿಗಾಗಿ ೩೩% ಮೀಸಲಾತಿ ನೀಡಿರುವ ವಿಷಯ ಚಾರಿತ್ರಿಕವಾಗಿ ತುಂಬ ಮಹತ್ವದ್ದಾಗಿದೆ. ಈ ಮೀಸಲಾತಿಯಿಂದ ಅನೇಕ ಬದಲಾವಣೆಗಳಾಗಿವೆ.

ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ೩೩% ಮೀಸಲಾತಿ ನೀಡಿದ ರಾಜಕೀಯ ಪಕ್ಷಗಳು ಶಾಸನ ಸಭೆಗಳಲ್ಲಿ ಮಹಿಳೆಯರಿಗೆ ೩೩% ಮೀಸಲಾತಿ ಕೊಡಲು ಏಕೆ ಹಿಂಜರಿಯುತ್ತವೆಯೆಂಬು ದಕ್ಕೆ ಕೆಲವು ಕಾರಣಗಳಿವೆ. ೧೯೯೬ ಸೆಪ್ಟೆಂಬರ್ ೧೨ ರಂದು ಲೋಕಸಭೆಯಲ್ಲಿ ಮೊದಲ ಬಾರಿಗೆ ಮಹಿಳಾ ಮೀಸಲು ವಿಧೇಯಕವನ್ನು ಮಂಡಿಸಿದಾಗ ಆಡಳಿತರಂಗದ ಶರದ್‌ಯಾದವ ಬಣ ಈ ವಿಧೇಯಕವನ್ನು ವಿರೋಧಿಸಿ, ಇದರಲ್ಲಿ ಹಿಂದುಳಿದ ವರ್ಗಗಳ ಮಹಿಳೆಯರಿಗೆ ಒಳಮೀಸಲಾತಿ ಕಲ್ಪಿಸಬೇಕೆಂಬ ಷರತ್ತು ಹಾಕಿತು. ಮುಂದೆ ೧೯೯೭ ಆಗಸ್ಟ್ ೧೩ರಂದು ಈ ವಿಧೇಯಕವನ್ನು ಲೋಕಸಭೆಯಲ್ಲಿ ಮಂಡಿಸಿದಾಗ ಲಾಲುಪ್ರಸಾದ್ ಯಾದವ್ ಹಾಗೂ ಮುಲಾಯಂಸಿಂಗ್ ಯಾದವ್ ಬಣಗಳು ಕಡುವಿರೋಧಿಗಳಾಗಿ ವಿಧೇಯಕವನ್ನು ಖಂಡಿಸಿದರು. ಹೀಗಾಗಿ ವಿಧೇಯಕ ಮತ್ತೆ ಮೂಲೆಗೆ ಸೇರಿತು. ಮಹಿಳಾ ವಿಧೇಯಕದ ವಿರೋಧಕ್ಕೆ ಯಾದವ್‌ರನ್ನು ಮುಂದೆ ಮಾಡಿದ ಕೆಲವು ಸ್ವಾರ್ಥ ರಾಜಕೀಯ ನಾಯಕರು, ವಿಧೇಯಕ ಬಿದ್ದಾಗ ಒಳಗೊಳಗೇ ಖುಷಿಪಟ್ಟರು.

ಮಹಿಳಾ ವಿಧೇಯಕವನ್ನು ವಿರೋಧಿಸುವ ರಾಜಕೀಯ ಪಕ್ಷಗಳಿಗೆ ಈ ವಿಷಯಕ್ಕೆ ಸಂಬಂಧಿಸಿರುವ ಪ್ರಾಥಮಿಕ ತಿಳುವಳಿಕೆ ಕೂಡಾ ಇಲ್ಲವೆನಿಸುತ್ತದೆ. ಭಾರತದ ಸಂವಿಧಾನದಲ್ಲಿ ಈಗಾಗಲೇ ಜಾತಿಯಾಧಾರಿತ ಮೀಸಲಾತಿ ಹಾಗೂ ಪ್ರಾದೇಶಿಕ ಮೀಸಲಾತಿ ನೀಡಲಾಗಿದೆ.

ಮಹಿಳಾ ವಿಧೇಯಕವು ಲಿಂಗಾಧಾರಿತ ಮೀಸಲಾತಿಗೆ ಸಂಬಂಧಿಸಿದೆ. ಹೆಸರೇ ಸೂಚಿಸುವಂತೆ ಲಿಂಗಾಧಾರಿತ ಮೀಸಲಾತಿಯಲ್ಲಿ ಲಿಂಗ ಅಸಮಾನತೆ ಪ್ರಧಾನವಾಗುತ್ತದೆಯೇ ಹೊರತು, ಇಲ್ಲಿ ಜಾತಿಗಳ ಪ್ರಶ್ನೆ ಬರುವುದೇ ಇಲ್ಲ. ಒಂದು ಸಲ ಜಾತಿಯಾಧಾರಿತ ಮೀಸಲಾತಿ ನೀಡಿದ ನಂತರ, ಮತ್ತೆ ಮತ್ತೆ ಜಾತಿಯಾಧಾರಿತ ವಿಷಯ ಪ್ರಸ್ತಾಪಿಸುವುದು ಸಂವಿಧಾನ ಬಾಹಿರವಾಗುತ್ತದೆ. ಪ್ರಾದೇಶಿಕಾಧಾರಿತ ಮೀಸಲಾತಿಯೂ ಹೇಗೆ ಪ್ರದೇಶ ಮುಖ್ಯವಾಗುತ್ತದೆಯೊ, ಜಾತಿಯಾಧಾರಿತ ಮೀಸಲಾತಿಯಲ್ಲಿ ಹೇಗೆ ಜಾತಿ ಮುಖ್ಯವಾಗುತ್ತದೆಯೊ ಅದೇ ರೀತಿ ಮಹಿಳಾ ವಿಧೇಯಕದಲ್ಲಿ ಲಿಂಗಾಧಾರಿತ ವಿಷಯವೇ ಮುಖ್ಯವಾಗುತ್ತದೆ. ಈ ಪ್ರಾಥಮಿಕ ತಿಳುವಳಿಕೆಯನ್ನು ಉಳಿದ ರಾಜಕೀಯ ನಾಯಕರು ಯಾದವ್ ಬಣಕ್ಕೆ ತಿಳಿಸಬಹುದಾಗಿತ್ತು. ಆದರೆ ಅವರಿಗೂ ಕೂಡ ಮಹಿಳಾ ಮೀಸಲಾತಿ ಬೇಕಾಗಿಲ್ಲ. ಯಾದವ್ ಬಣ, ಹಿಂದುಳಿದ ವರ್ಗಗಳನ್ನು ವೋಟ್ ಬ್ಯಾಂಕ್ ಮಾಡಿಕೊಳ್ಳಲು ಇಂತಹ ಹೇಳಿಕೆಗಳನ್ನು ನೀಡಿದೆಯೇ ಹೊರತು, ಅವರಿಗೆ ಹಿಂದುಳಿದ ವರ ಬಗೆಗೂ ನಿಜವಾದ ಕಾಳಜಿಗಳಿಲ್ಲ.

ಮಹಿಳಾ ಮೀಸಲಾತಿ ಜಾರಿಗೆ ಬಂದರೆ ಮೇಲುವರ್ಗದ ಮಹಿಳೆಯರೇ ಅಧಿಕಾರ ಹಿಡಿಯುತ್ತಾರೆಂಬ ಅಸಹನೆ ಕೆಲವರಲ್ಲಿದೆ. ಬಾಬ್‌ಕಟ್ ಮಹಿಳೆಯರೇ (ಬಾಲ್ ಕಟಿ ಮಹಿಳಾಯೇ...) ಅಧಿಕಾರ ಹೊಂದುತ್ತಾರೆಂದು ಶರದ್‌ಯಾದವ್ ಹೇಳಿದ್ದಾರೆ. ಶರದ್ ಯಾದವ್‌ರಂತಹ ರಾಜಕೀಯ ನಾಯಕರೇ ಮಹಿಳೆಯರನ್ನು ಕುರಿತು ಹೀಗೆ ಮಾತನಾಡುವಾಗ, ಉಳಿದ ಪುಡಿ ರಾಜಕಾರಣಿಗಳು ಸುಮ್ಮನಿರುತ್ತಾರೆಯೇ? ಪುರುಷನ ಅಜ್ಞಾನ ಎಂತಹದೆಂಬುದನ್ನು ಈ ಎಲ್ಲ ಪ್ರಸಂಗಗಳು ಸ್ಪಷ್ಟಪಡಿಸುತ್ತವೆ. ಮಹಿಳಾ ಮೀಸಲಾತಿಯನ್ನು ಪ್ರೋತ್ಸಾಹಿಸುತ್ತೇವೆಂದು ವೇದಿಕೆಯಲ್ಲಿ ಭಾಷಣ ಮಾಡುವ ರಾಜಕೀಯ ನಾಯಕರು, ಪ್ರತಿ ಚುನಾವಣೆಯಲ್ಲಿ ಮಹಿಳಾ ವಿಧೇಯಕವನ್ನು ಪ್ರಣಾಳಿಕೆಯನ್ನಾಗಿ ಮಾಡಿಕೊಳ್ಳುವ ರಾಜಕೀಯ ಪಕ್ಷಗಳು ಗೋಸಂಬಿಗಳಾಗಿವೆ. ವೇದಿಕೆಯಲ್ಲಿ ಹೇಳುವದೊಂದು, ಒಳಗಡೆ ಮಾಡುವದೊಂದು. ಇಲ್ಲೆಲ್ಲಾ ಮನುಸಂತತಿಯೇ ಎದ್ದು ಕಾಣುತ್ತದೆ. "ಯತ್ರ ನಾರ್ಯಂತು ಪೂಜ್ಯತೇ, ರಮಂತೇ ತತ್ರ ದೇವತಾಃ" ಎಂದು ಹೇಳಿದ ಮನುವೇ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂದು ಹೇಳಿದ್ದಾನೆ. ಮನುವಿನ ಈ ದ್ವಿನೀತಿ ಇಂದಿನ ಬಹುತೇಕ ರಾಜಕೀಯ ನಾಯಕರಲ್ಲಿ ಯಥೇಚ್ಛವಾಗಿ ಮುಂದುವರಿದುಕೊಂಡು ಬಂದಿದೆ.

ಪಂಚಾಯತಿ ಹಂತದಲ್ಲಿ ಮಹಿಳೆಯರಿಗೆ ೩೩% ಮೀಸಲಾತಿ ನೀಡಿದಾಗ ಕಾಣಿಸದ ವಿರೋಧ, ವಿಧಾನಸಭೆ-ಲೋಕಸಭೆಗಳಲ್ಲಿ ಮೀಸಲಾತಿ ತರಬೇಕೆಂದು ವಿಧೇಯಕ ಮಂಡಿಸುವಾಗ ಏಕೆ ಕಾಣಿಸಿತು? ಇದು ಬಹುಮುಖ್ಯ ಪ್ರಶ್ನೆಯಾಗಿದೆ. ಅಂದರೆ ಎಲ್ಲ ಪುರುಷರೂ ಮಹಿಳಾ ವಿಧೇಯಕವನ್ನು ವಿರೋಧಿಸುತ್ತಿಲ್ಲ, ಈಗಾಗಲೇ ಅಧಿಕಾರದ ರುಚಿಯನ್ನು ದಶಕಗಳಿಂದ ಅನುಭವಿಸಿದವರು ಇದಕ್ಕೆ ಅಡ್ಡಗಾಲು ಹಾಕುತ್ತಿದ್ದಾರೆ. ಹಾಲಿ ಇರುವ ಶಾಸನ ಸಭೆಗಳ ಸದಸ್ಯರಲ್ಲಿ ೫೦%ಕ್ಕಿಂತ ಹೆಚ್ಚು ಜನ ಮೂರು - ನಾಲ್ಕು ದಶಕಗಳಿಂದ ತಾವೇ ಅಧಿಕಾರದಲ್ಲಿ ಮುಂದುವರಿದುಕೊಂಡು ಬಂದಿದ್ದಾರೆ. ೨೨% ಸ್ಥಾನಗಳು ಮಹಿಳೆಯರಿಗೆ ಮೀಸಲಾದರೆ,

ತಮ್ಮ ಸ್ಥಾನಗಳಿಗೆ ಹೊಡೆತ ಬೀಳುತ್ತದೆಂಬ ಭಯ ಅವರಲ್ಲಿದೆ. ಅಂತವರು ಈ ವಿಧೇಯಕವನ್ನು ವಿರೋಧಿಸುತ್ತಿದ್ದಾರೆ.

ಈ ಮಹಿಳಾ ಮೀಸಲಾತಿಯಿಂದ ಹೆಚ್ಚಿನ ಪ್ರಯೋಜನವಿಲ್ಲವೆಂದು ವಾದಿಸುವವರೂ ಇದ್ದಾರೆ. ಅವರ ಪ್ರಕಾರ ಮಹಿಳಾ ಮೀಸಲಾತಿ ಜಾರಿಗೆ ಬಂದರೆ, ಈಗಿರುವ ದೊಡ್ಡ ದೊಡ್ಡ ಕುಳಗಳು, ತಮ್ಮ ಹೆಂಡತಿಗಾಗಲಿ ಅಥವಾ ಸೊಸೆಗಾಗಲಿ ತಮ್ಮ ಸ್ಥಾನವನ್ನು ಬಿಟ್ಟುಕೊಟ್ಟು ಆರಿಸಿ ತಂದು, ಮತ್ತೆ ತೆರೆಮರೆಯಲ್ಲಿ ತಾವೇ ಅಧಿಕಾರ ಚಲಾಯಿಸುತ್ತಾರೆಂಬ ಸಂಗತಿಯನ್ನು ಕೆಲವರು ಮಂಡಿಸುತ್ತಾರೆ. ಇದು ನಿಜವೇ ಆದರೂ ಕೂಡ ಇದರಿಂದ ತೊಂದರೆಯೇನೂ ಆಗುವುದಿಲ್ಲ. ಬದಲಾಗಿ ಅನೇಕ ಬೆಳವಣಿಗೆಗಳುಂಟಾಗಲು ಸಾಧ್ಯವಿದೆ. ಪಂಚಾಯಿತಿ ವ್ಯವಸ್ಥೆಯಲ್ಲಿ ಮಹಿಳಾ ಮೀಸಲಾತಿ ಬಂದ ನಂತರವೇ ಮಹಿಳೆಯರು ಒಗ್ಗಟ್ಟಾಗಿ ಸೆರೆಯಂಗಡಿಗಳನ್ನು ಮುಚ್ಚಿಸಿದರು. ಮಹಿಳೆಯರು ಅಧ್ಯಕ್ಷರಿರುವ ಪಂಚಾಯತಿಗಳಲ್ಲಿ ಭ್ರಷ್ಟತೆ ಕಡಿಮೆಯಾಗಿದೆ. ಇಂತಹ ಅನೇಕ ಬದಲಾವಣೆಗಳನ್ನು ತರಲು ಮಹಿಳೆಯರಿಗೆ ಸಾಧ್ಯವಾಗುತ್ತದೆ.

ಈ ದೇಶ ವ್ಯವಸ್ಥೆಯಲ್ಲಿ ಅನೇಕ ವೈರುಧ್ಯಗಳಿವೆ. ಹೆಣ್ಣನ್ನು ದೇವತೆಯೆಂದು ಪೂಜಿಸಿದ ನಾಡಿನಲ್ಲಿಯೇ ಅವಳನ್ನು ರಾಕ್ಷಸಿಯೆಂದು ಹೀಯಾಳಿಸಲಾಗಿದೆ. ಹೆಣ್ಣನ್ನು ತಾಯಿಯೆಂದು ಗೌರವಿಸಿದ ಸಮಾಜದಲ್ಲಿಯೇ ಆಕೆಯನ್ನು ಭೋಗದ ವಸ್ತುವೆಂದು ತಿಳಿಯಲಾಗಿದೆ. 'ಪುರ' ಎನ್ನುವ ಧಾತುವಿನಿಂದ ಪುರುಷ ಪದ ಹುಟ್ಟಿಕೊಂಡಿದೆ. 'ಪುರ' ಎಂದರೆ ಶ್ರೇಷ್ಠ ಎಂದರ್ಥ. ಪುರುಷ ಹುಟ್ಟುತ್ತಲೇ ಈ ದೇಶದಲ್ಲಿ ಶ್ರೇಷ್ಠನಾಗಿ ಬಿಡುತ್ತಾನೆ. ಆದರೆ "ಸ್ತ್ರೀ" ಪದಕ್ಕೆ ಒಂದು ಸ್ವತಂತ್ರವಾದ ಧಾತು ಇಲ್ಲ. ಅದು "ಸೂತ್ರಿ" ಮೂಲಕ ಒಂದು ಪದವಾಗುತ್ತದೆ. ಸೂತ್ರಿಯೆಂದರೆ ಹೆರುವವಳೆಂದರ್ಥ. ಹೀಗೆ ಹೆರುವುದರ ಮೂಲಕ ಹೆಣ್ಣನ್ನು ಗುರುತಿಸುವ ಈ ವ್ಯವಸ್ಥೆ ಅಸಮಾನತೆಗೆ ಹಿಡಿದ ಕನ್ನಡಿಯಾಗಿದೆ. ಪುರಾಣ ಪರಂಪರೆಯಲ್ಲಿ ಹೆಣ್ಣನ್ನು ಭಯಂಕರವಾಗಿ ಚಿತ್ರಿಸಲಾಗಿದೆ. ಋಗ್ವೇದದಲ್ಲಿ ಹೆಣ್ಣನ್ನು ಕಿರುಬನ ಹೃದಯದವಳೆಂದು ಕರೆದರೆ, ಐತರೇಯ ಬ್ರಾಹ್ಮಣದಲ್ಲಿ ಹೆಣ್ಣನ್ನು ಹೃದಯ ಭೇದಿಸುವಳೆಂದು ತಿಳಿಸಲಾಗಿದೆ. "ಒಳ್ಳೆಯ ಹೆಂಗಸು ಕೆಟ್ಟ ಗಂಡಸಿಗಿಂತ ಕಡೆ" - ಎಂದು ತೈತ್ತಿರೀಯ ಸಂಹಿತೆ ಹೇಳಿದರೆ, "ಹೆಣ್ಣು ಅಸತ್ಯ"ವೆಂದು ಮೈತ್ರೇಯ ಸಂಹಿತೆ ಸಾರುತ್ತದೆ. ಹೀಗೆ ಹೆಣ್ಣನ್ನು ಸೂತ್ರಿಯೆಂದು, ಅಂಗನೆಯೆಂದು, ಅಮಂಗಲೆಯೆಂದು, ಅಪಶಕುನವೆಂದು, ಅದೃಶ್ಯಳೆಂದು ಕರೆದು ಅವಮಾನಿಸಲಾಗಿದೆ. ಹೆಣ್ಣು ಮಾಯೆಯೆಂದು, ಮೋಹವೆಂದು ಭಾವಿಸಿ ದೂರವಿಡಲಾಗಿದೆ. ಮುಟ್ಟು ಹೊಂದಿದವಳೆಂದು ತಿಳಿದು ಆಕೆಯನ್ನು ಅಸ್ಪೃಶ್ಯಳನ್ನಾಗಿರಿಸಲಾಗಿದೆ.

ಇಂತಹ ಅಸಮಾನತೆಯ ವ್ಯವಸ್ಥೆಯಲ್ಲಿಯೇ ಮಹಿಳೆ ಬೆಳೆದು ನಿಂತಿದ್ದಾಳೆ. ಫಿನಿಕ್ಸ್ ಪಕ್ಷಿಯ ಹಾಗೆ ಮೈಸುಟ್ಟುಕೊಂಡು ಬೆಳಕು ನೀಡಿದ್ದಾಳೆ. ನಿಜಕ್ಕೂ ಮಹಿಳೆ ಬೆಂಕಿಯಲ್ಲರಳಿದ ಹೂವಾಗಿದ್ದಾಳೆ. ಪ್ರಾಚೀನಕಾಲದಲ್ಲಿಯೇ ಇದಕ್ಕೆ ಪ್ರತಿರೋಧವನ್ನೊಡ್ಡಿ ಬೆಳೆದುನಿಂತ ಮಹಿಳೆಯರಿದ್ದಾರೆ. ಗಾರ್ಗಿ, ವಾಚ್ನವೀ, ಸುಲಭಾ, ಮೈತ್ರೇಯೀಯರಂತಹ ಮಹಿಳೆಯರನ್ನು ಇಲ್ಲಿ ಗಮನಿಸಬಹುದಾಗಿದೆ. ಮಧ್ಯಕಾಲೀನ ಸಂದರ್ಭದಲ್ಲಿ ಕರ್ನಾಟಕದ ವಚನ ಚಳುವಳಿಯಲ್ಲಿ

ಪ್ರಮುಖ ಪಾತ್ರವಹಿಸಿದ ವಚನಕಾರ್ತಿಯರು ಕ್ರಾಂತಿಕಾರಕವಾಗಿ ಬೆಳೆದು ನಿಂತಿದ್ದಾರೆ. ಅಸಂಖ್ಯಾತ ಮಹಿಳೆಯರು ಈ ಚಳುವಳಿಯನ್ನು ಮುನ್ನೆಡಿಸಿದ್ದಾರೆ. ದೊರೆತ ಅವಕಾಶವನ್ನು ಸದುಪಯೋಗ ಪಡಿಸಿಕೊಂಡ ಕೆಲವು ಮಹಿಳೆಯರು ರಾಣಿಯರಾಗಿ ರಾಜ್ಯಾಡಳಿತ ನಡೆಸಿದ್ದಾರೆ. ಕಿತ್ತೂರ ರಾಣಿಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ, ಬೆಳವಡಿ ಮಲ್ಲಮ್ಮ, ಕೆಳದಿ ಚೆನ್ನಮ್ಮ - ಹೀಗೆ ಅನೇಕ ರಾಣಿಯರ ಹೆಸರುಗಳು ಚರಿತ್ರೆಯಲ್ಲಿ ದಾಖಲಾಗಿವೆ. ಸ್ವಾತಂತ್ರ್ಯ ಚಳುವಳಿ ಯಲ್ಲಿ ಮಹಿಳೆ ಮಹತ್ವದ ಸ್ಥಾನವನ್ನು ನಿರ್ವಹಿಸಿದ್ದಾಳೆಂಬುದಕ್ಕೆ ಅನೇಕ ಉದಾಹರಣೆಗಳಿವೆ. ಆಧುನಿಕ ಸಂದರ್ಭದಲ್ಲಂತೂ ಮಹಿಳೆ, ಪುರುಷನನ್ನು ಮೀರಿ ಬೆಳೆದಿದ್ದಾಳೆ. ಅವಕಾಶ ದೊರೆತ ಎಲ್ಲ ಕ್ಷೇತ್ರಗಳಲ್ಲಿಯೂ ಆಕೆ ಜಯ ಸಾಧಿಸಿದ್ದಾಳೆ. ಇಂತಹ ಮಹಿಳೆಯರು ರಾಜಕೀಯ ಕ್ಷೇತ್ರ ಪ್ರವೇಶಿಸಿದರೆ ಖಂಡಿತಾ ಬದಲಾವಣೆ ಸಾಧ್ಯವಿದೆ.

ಶಿವ ಪುರಾಣಗಳಲ್ಲಿ ಬರುವ ಅರ್ಧನಾರೀಶ್ವರ ಪರಿಕಲ್ಪನೆ ಸಮಾನತೆಯ ಸಂಕೇತವಾಗಿದೆ. ಮನುಷ್ಯ ಅರ್ಧ ಹೆಣ್ಣು - ಅರ್ಧ ಗಂಡು ಎಂಬ ಈ ಪರಿಕಲ್ಪನೆ ವೈಜ್ಞಾನಿಕವಾದುದಾಗಿದೆ. ಅದೇ ರೀತಿ ಬಸವ ಸಂಸ್ಕೃತಿಯಲ್ಲಿ ಬರುವ "ಶರಣಸತಿ ಲಿಂಗಪತಿ" ಭಾವ ಅದ್ಭುತ ಅರ್ಥ ವನ್ನೊಳಗೊಂಡಿದೆ. ಶಿವ ಸಂಸ್ಕೃತಿಯಲ್ಲಿ ಅರ್ಧ ಗಂಡು - ಅರ್ಧ ಹೆಣ್ಣು ವಿಚಾರ ವ್ಯಕ್ತ ವಾಗಿದ್ದರೆ, ಬಸವ ಸಂಸ್ಕೃತಿಯಲ್ಲಿ ಪೂರ್ಣ ಹೆಣ್ಣಾಗುವ ಸಂಗತಿಯಿದೆ. ಶರಣನಾಗಬೇಕಾದರೆ ತಪಸ್ಸು ಮಾಡಬೇಕಾಗಿಲ್ಲ, ಸಂನ್ಯಾಸಿಯಾಗಬೇಕಾಗಿಲ್ಲ, ಆತ ಸತಿಯಾಗಬೇಕು. ಸತಿಯೆಂದರೆ ಹೆಂಡತಿ-ಸೇವೆ ಮಾಡುವವಳು-ದಾಸಿ ಎಂಬರ್ಥಗಳಿವೆ. ಇಂತಹ ಸತಿಯಾದಾಗಲೇ ಶರಣನಾಗಲು ಸಾಧ್ಯವೆಂಬ ಕ್ರಾಂತಿಕಾರಕ ವಿಚಾರವನ್ನು ಬಸವ ಸಂಸ್ಕೃತಿ ಬಿಂಬಿಸುತ್ತದೆ. ಹೆಣ್ಣೆಂದರೆ ಅವಳು ಕೇವಲ ಸತಿಯಲ್ಲ; ಅವಳು ತಾಯಿ-ಅಂತಃಕರಣದ ಸಂಕೇತವೆಂದು ಶರಣರು ಸ್ಪಷ್ಟಪಡಿಸಿದ್ದಾರೆ. ಹೆಣ್ಣು-ಹೊನ್ನು-ಮಣ್ಣು ಮಾಯೆಯಲ್ಲ; ಮನದ ಮುಂದಣ ಆಸೆಯೇ ಮಾಯೆಯೆಂದು ಸ್ಪಷ್ಟ ಪಡಿಸಿದ್ದಾರೆ.

ಹೀಗೆ ಪರಂಪರೆಯಲ್ಲಿ ಮಹಿಳೆಯನ್ನು ಕೀಳಾಗಿ ಕಂಡವರಿದ್ದಾರೆ, ಗೌರವದಿಂದ ನೋಡಿ ದವರಿದ್ದಾರೆ. ಆದರೆ ಇಂದಿನ ಆಧುನಿಕ ಮಹಿಳೆ ದೇವತೆಯಾಗಲು ಬಯಸುವುದಿಲ್ಲ, ರಾಕ್ಷಸಿ ಯೆನ್ನಿಸಿಕೊಳ್ಳಲು ಸಿದ್ಧಳಿಲ್ಲ. ಆಕೆ ಮನುಷ್ಯಳಾಗ ಬಯಸುತ್ತಾಳೆ. ಸಮಾನತೆಗಾಗಿ ಹೊತೊರೆ ಯುತ್ತಿದ್ದಾಳೆ. ಸ್ತ್ರೀವಾದಿ ಚಳುವಳಿ ಮಹಿಳೆಯರಲ್ಲಿ ಸ್ವಾಭಿಮಾನವನ್ನು ಹುಟ್ಟಿಸಿದೆ. ಸಮಾನೆಯ ಬದುಕನ್ನು ಕಲ್ಪಿಸಿಕೊಟ್ಟಿದೆ. ಹೀಗೆ ಮಹಿಳೆ ಅಭಿವೃದ್ಧಿ ಹೊಂದುತ್ತಿರುವ ಈ ಸಂದರ್ಭದಲ್ಲಿ ಮಹಿಳಾ ಮೀಸಲಾತಿ ಹಕ್ಕೊತ್ತಾಯವಾಗಿದೆ. ಇಂದಿಲ್ಲ ನಾಳೆ ಅದು ಜಾರಿಗೆ ಬರಲೇಬೇಕು.

ಯಾವುದೇ ಮೀಸಲಾತಿಗೆ ಸಾಧ್ಯತೆಗಳಿರುವಂತೆ, ಮಿತಿಗಳೂ ಇರುತ್ತವೆ. ಮೀಸಲಾತಿ ಕೊಡು ವುದರಿಂದಲೇ ಈ ದೇಶ ಅಭಿವೃದ್ಧಿಯಾಗುವುದಿಲ್ಲ. ಮೀಸಲಾತಿ ನೀಡಿದ ತಕ್ಷಣವೇ ಇಲ್ಲಿ ಯಾವುದೇ ರೀತಿಯ ಕ್ರಾಂತಿಯೂ ಆಗುವುದಿಲ್ಲ. ಆದರೆ ಅಭಿವೃದ್ಧಿಗೆ ಬೇಕಾಗುವ ಸಿದ್ಧತೆ ಇಲ್ಲಿಂದ ಪ್ರಾರಂಭವಾಗುತ್ತದೆ. ಜನಸಂಖ್ಯೆಗನುಗುಣವಾಗಿ ಅವಕಾಶಗಳು ದೊರೆತಾಗ ಕೀಳರಿಮೆ, ಅಸಹನೆ ಕಡಿಮೆಯಾಗುತ್ತವೆ. ಅವಕಾಶಗಳು ದೊರೆತಾಗ ಜವಾಬ್ದಾರಿಗಳೂ

ಹೆಚ್ಚುತ್ತವೆ. ಮುಕ್ತ ಅವಕಾಶಗಳನ್ನು ಕಲ್ಪಿಸಿದಾಗ ಮಹಿಳೆಯರು, ದಲಿತರು ವಿವಿಧ ಕ್ಷೇತ್ರಗಳಲ್ಲಿ ಬೆಳೆದು ನಿಲ್ಲಲು ಸಾಧ್ಯವಾಗುತ್ತದೆ. ಈ ದೇಶದಲ್ಲಿ ಅಧಿಕಸಂಖ್ಯೆಯಲ್ಲಿರುವ ಮಹಿಳೆಯರು-ದಲಿತರು-ದುಡಿವ ವರ್ಗದವರು ಅವಕಾಶಗಳನ್ನು ಪಡೆದಾಗ, ಸಮಾನ ಹಕ್ಕುಗಳನ್ನು ಹೊಂದಿದಾಗ ನಿಜಕ್ಕೂ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ. ಈ ಎಲ್ಲ ಕಾರಣಗಳಿಂದ ಮಹಿಳಾ ವಿಧೇಯಕವನ್ನು ಜಾರಿಗೆ ತರುವುದು ಎಲ್ಲರ ಕರ್ತವ್ಯವಾಗಿದೆ.

...

೪

# ಮಹಿಳಾ ಮೀಸಲಾತಿಯ ತೊಡಕು

ಡಾ. ಶಿವಾನಂದ ಎಸ್. ವಿರಕ್ತಮಠ

ಜನಪದ ಸಾಹಿತ್ಯ ಲೋಕದ ಪ್ರಸಿದ್ಧ ಕತೆಯೊಂದು ನೆನಪಿಗೆ ಬರುತ್ತದೆ. ಅದೇನೆಂದರೆ ಇಲಿಗಳು ದಿನನಿತ್ಯ ಎದುರಿಸುತ್ತಿರುವ ಬೆಕ್ಕಿನ ಕಾಟವನ್ನು ಪರಿಹರಿಸಿಕೊಳ್ಳಲು ಒಂದು ಉಪಾಯವನ್ನು ಮಾಡುತ್ತವೆಯಂತೆ. ಸದಾ ಧಾಳಿಕೋರನಾದ ಬೆಕ್ಕಿನ ಕೊರಳಲ್ಲಿ ಗಂಟೆ ಕಟ್ಟಿದರೆ, ಅದರ ಬರುವಿಕೆಯ ಸದ್ದನ್ನು ಗಂಟೆಯ ನಾದದಿಂದ ಗಮನಿಸಬಹುದು. ಆಗ ಮುಂದೊದಗುವ ಕಷ್ಟವನ್ನು ಉಪಾಯದಿಂದ ಪರಿಹರಿಸಿಕೊಳ್ಳುವುದನ್ನು ಇಲಿಗಳು ಹುಡುಕಿದವು. ಆದರೆ ಇದನ್ನು ಪರಿಹರಿಸಿಕೊಳ್ಳುವ ಬಗೆ ಹೇಗೆಂಬುದು ಅವುಗಳಿಗೆ ಕಗ್ಗಂಟಾಗಿ ಪರಿಣಮಿಸಿ ಬಿಡುತ್ತದೆ. ಯಾಕೆಂದರೆ ಇಲಿಗಳೇ ಹೋಗಿ ಬೆಕ್ಕಿಗೆ ಗಂಟೆ ಕಟ್ಟುವುದು ಸಾಧ್ಯವಿಲ್ಲದ ಮಾತು. ಹಾಗೆ ಬೆಕ್ಕಿಗೆ ಕೊರಳಲ್ಲಿ ಗಂಟೆ ಕಟ್ಟುವವರಾರು ಎಂಬುದು ಬಿಡಿಸಲಾಗದ ಪ್ರಶ್ನೆಯಾಗಿ ಹಾಗೆಯೇ ಉಳಿದುಬಿಡುತ್ತದೆ. ಈ ಕತೆಯನ್ನು ಹೋಲಿಕೆಯ ಕಾರಣಕ್ಕಾಗಿ ಪ್ರಸ್ತಾಪಿಸುತ್ತಾ ಪ್ರಸ್ತುತ ಮಹಿಳಾ ಮೀಸಲಾತಿಯ ತೊಡಕು ಕೂಡಾ ಹೀಗೆ ಮಹಿಳೆಯರ ಪಾಲಿಗೆ ಬಿಡಿಸಲಾಗದ ಕಗ್ಗಂಟಾಗಿ ಪರಿಣಮಿಸಿರುವುದರಿಂದ ಈ ಉಪಕತೆಯನ್ನು ಪ್ರಸ್ತಾಪಿಸಲಾಯಿತು ಅಷ್ಟೆ.

ಶೇಕಡ ೩೩% ರ ಮಹಿಳಾ ಮೀಸಲಾತಿ ಮಸೂದೆಯು ಕಳೆದ ಒಂದೂವರೆ ದಶಕದಿಂದ ಪ್ರಸ್ತಾಪಗೊಂಡರೂ ಇದುವರೆಗೆ ಯಾವ ಖಚಿತ ತೀರ್ಮಾನಗಳಿಗೂ ಬರಲಾಗದೆ ಇನ್ನಷ್ಟು ಜಟಿಲಗೊಳ್ಳುತ್ತಾ ಸಾಗುತ್ತಿದೆ. ೧೯೯೬ರ ಸೆಪ್ಟೆಂಬರ್ ೧೨ ರಂದು ಕೇಂದ್ರದಲ್ಲಿ ಅಸ್ತಿತ್ವದಲ್ಲಿ ಬಂದಿದ್ದ ಆಗಿನ ದೇವೇಗೌಡ ನೇತೃತ್ವದ ಯುನೈಟೆಡ್ ಫ್ರಂಟ್ ಸರ್ಕಾರವು ಮೊದಲ ಬಾರಿಗೆ ಈ ಮಹಿಳಾ ಮೀಸಲಾತಿ ಮಸೂದೆಯನ್ನು ಮಂಡಿಸಿತು. ಸದನದ ಸರ್ವಾನುಮತವು ದೊರಕದಿರುವುದರಿಂದ ಮಸೂದೆಯು ಅಂಗೀಕಾರಗೊಳ್ಳಲಿಲ್ಲ. ಆನಂತರ ಈ ಮಹಿಳಾ ಮೀಸಲಾತಿ ಚರ್ಚೆಯು ಹದಿನಾಲ್ಕು ವರ್ಷಗಳವರೆಗೆ ಅಂಚಿಗೆ ಸರಿಸಲ್ಪಟ್ಟು ೨೦೧೦ ರ ಮಾರ್ಚ್ ತಿಂಗಳಲ್ಲಿ ರಾಜ್ಯಸಭೆಯಲ್ಲಿ ಮಂಡಿತವಾಗಿ ಅನೇಕ ವಾಗ್ವಾದಗಳನ್ನು ಹುಟ್ಟಿಸಿ ಕೊನೆಗೆ ರಾಜ್ಯ ಸಭೆಯಲ್ಲಿ ಅಂಗೀಕಾರಗೊಂಡಿದೆ. ಒಳ ಮೀಸಲಾತಿಯ ದೊಡ್ಡ ವಾಗ್ವಾದವನ್ನು

ಇಲ್ಲಿ ಹುಟ್ಟು ಹಾಕಲಾಯಿತಾದರೂ ಈವರೆಗೆ ಯಾವುದೇ ರೀತಿಯ ಸಂವಿಧಾನ ತಿದ್ದುಪಡಿಗೆ ಪ್ರಸ್ತಾಪಗಳನ್ನು ಮಾತ್ರ ಮಾಡುತ್ತಿಲ್ಲ. ಮಹಿಳಾ ಪರವಾದ ಚಿಂತನೆಯನ್ನು ಮಂಡಿಸುತ್ತಿರುವ ಹೋರಾಟಗಾರರು, ಚಿಂತಕರು ತಕ್ಕಮಟ್ಟಿನ ಪ್ರತಿಭಟನೆಯನ್ನು ಮಾಡಿ ಮಹಿಳಾ ಮೀಸಲಾತಿಯ ಪ್ರಶ್ನೆಯನ್ನು ಲೋಕಸಭೆಯಲ್ಲಿ ಮಂಡಿಸಬೇಕೆಂಬ ಒತ್ತಾಯವನ್ನು ಮಾಡುತ್ತಿದ್ದಾರೆ. ಮೊದಲು ರಾಜ್ಯಸಭೆಯಲ್ಲಿ ಮಸೂದೆ ಮಂಡನೆಯಾಗುತ್ತಿದ್ದಾಗ ಪ್ರತಿರೋಧ ವ್ಯಕ್ತಪಡಿಸಿದ ಶರದ್ ಯಾದವ್, ಲಲ್ಲೂ ಪ್ರಸಾದ್ ಯಾದವ್ ಮತ್ತು ಮುಲಾಯಂಸಿಂಗ್ ಯಾದವ ತ್ರಯರ ವಾದ ವಿವಾದಗಳೇನೆ ಇರಲಿ ಈ ಬಿಲ್‌ನ್ನು ಮಂಡಿಸುವ ಆಳವಾದ ಒತ್ತಾಸೆಗಳನ್ನು ಮೂಲ ದಲ್ಲಿ ಬಿಟ್ಟುಕೊಟ್ಟು ಕೆಲ ಸದಸ್ಯರ ಮೇಲೆ ಗೂಬೆ ಕೂರಿಸುವುದು ಮಾತ್ರ ಎಗ್ಗಳವಾಗಿ ನಡೆದು ಕೊನೆಗೂ ಮೀಸಲಾತಿ ಬಿಲ್‌ನ್ನು ಮೂಲೆಗೆ ಸೇರಿಸಲಾಗಿದೆ.

**ಮೀಸಲಾತಿಯ ಚಾರಿತ್ರಿಕ ಸಮೀಕ್ಷೆ**

ಸಂವಿಧಾನದಲ್ಲಿ ಮಂಡಿಸಲಾದ ಮೀಸಲಾತಿಯ ಪರಿಕಲ್ಪನೆಯನ್ನೇ ಸರಿಯಾಗಿ ಗ್ರಹಿಸ ಲಾರದೇ ಅನೇಕ ಬಿಕ್ಕಟ್ಟುಗಳನ್ನು ಸೃಷ್ಟಿಸುವ ಕ್ರಿಯೆಯನ್ನು ಸಾಂಸ್ಕೃತಿಕ ವಲಯದಲ್ಲಿ ನಡೆಸಿ ಕೊಂಡು ಬರಲಾಗುತ್ತಿದೆ. ಸ್ವತಂತ್ರ ಭಾರತದಲ್ಲಿ ಸಾಮಾಜಿಕವಾದ ಜಾತಿ ಶ್ರೇಣೀಕರಣವನ್ನು ಮೀರಲು ಸಮಾನತೆಯ ಆಶಯದಲ್ಲಿ ಎಲ್ಲ ಜನಸಮುದಾಯವನ್ನು ಸಾಮಾಜಿಕ ನ್ಯಾಯದ ಕಕ್ಷೆಯಲ್ಲಿ ಒಂದೇ ಸ್ವರೂಪದಲ್ಲಿ ತರಲು ಈ ಮೀಸಲಾತಿಯನ್ನು ಮಂಡಿಸಲಾಯಿತಷ್ಟೆ. ಶತ ಶತಮಾನಗಳಿಂದ ಭೂಮಿ ಸಂಪತ್ತುಗಳಿಂದ ವಂಚಿತವಾದ ಜನ ಸಮುದಾಯಗಳು ಸಮಾಜ ದಲ್ಲಿ ಸಮಾನವಾದ ಅವಕಾಶಗಳನ್ನು ಪಡೆಯುವಲ್ಲಿ ವಿಫಲವಾಗಿರುವುದಕ್ಕೆ ಅಡ್ಡಿಯಾಗಿರುವ ಸಾಮಾಜಿಕ ಅಸಮಾನತೆಯನ್ನು ಮೀರಲು ಹತ್ತು ವರ್ಷಗಳ ಮೀಸಲಾತಿಯ ಅವಕಾಶವನ್ನು ಕಲ್ಪಿಸಲಾಯಿತು. ಆದರೆ ಪರಿವರ್ತನೆ ಸಾಧ್ಯವಾಗದೆ ಇಂದಿಗೂ ಮೀಸಲಾತಿಯನ್ನು ಮುಂದು ವರಿಸುವುದು ಭಾರತದ ಸಂದರ್ಭದಲ್ಲಿ ಅನಿವಾರ್ಯವಿದೆ. ಇದೇ ಪ್ರಶ್ನೆಯನ್ನು 'ಒಬಿಸಿ' ವರ್ಗಕ್ಕೂ ಅಂದರೆ ಇತರೆ ಹಿಂದುಳಿದ ಜಾತಿ ಸಮುದಾಯಗಳಿಗೂ ತಕ್ಕಮಟ್ಟಿನ ಮೀಸಲಾತಿಯ ಅಗತ್ಯತೆಯನ್ನು 'ಮಂಡಲ್' ವರದಿಯ ಹೆಸರಿನಲ್ಲಿ ಅನುಷ್ಠಾನಗೊಳಿಸುವುದರ ಮೂಲಕ ಸಾಧಿಸ ಲಾಯಿತು. ಹಾಗಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಜೊತೆಗೆ ಈಗ ಒ.ಬಿ.ಸಿ. ವರ್ಗ ಗಳಲ್ಲಿ ಮೀಸಲಾತಿಯು ಹಿಂದುಳಿದ ಜಾತಿ ಸಮುದಾಯಗಳಿಗೂ ಸಿಗುವಂತಾಗಿರುವುದು ಚಾರಿತ್ರಿಕ ಸತ್ಯಸಂಗತಿಯಾಗಿದೆ. ಆದರೆ ಪ್ರಶ್ನೆ ಇರುವುದು ಮೇಲಿನ ಎಲ್ಲಾ ಬಗೆಯ ಮೀಸಲಾತಿಯ ತರ್ಕವು ವಾಸ್ತವವಾಗಿ ಎಲ್ಲಾ ಪ್ರಜಾವರ್ಗಕ್ಕೂ ಅನ್ವಯವಾಗದೆ ಅಂದರೆ ಮಹಿಳಾ ಸಮುದಾಯವನ್ನು ಹೊರತುಪಡಿಸಿ ಇತರೆ ಅಸಹಾಯಕ ವರ್ಗಗಳಿಗೆ ಮಾತ್ರ ಅನ್ವಯ ಗೊಳ್ಳುತ್ತಿದೆ. ಹಾಗಾದಾಗ ಮಹಿಳಾ ಮೀಸಲಾತಿಯ ನ್ಯಾಯದ ಪ್ರಶ್ನೆಯನ್ನು ಬಗೆಹರಿಸುವುದು ಯಾಕೆ ಬೇಕಿಲ್ಲ. ಇದು ತೊಡಕಿನದಾಗ ಯಾಕೆ ಉಳಿಯಿತು.

ಸಂವಿಧಾನದಲ್ಲಿ ತರ್ಕಬದ್ಧವಾಗಿ ಅಸಹಾಯಕರಿಗೆ, ನಿರ್ಗತಿಕರಿಗೆ ಎಂದು ಮಂಡಿಸಲಾದ ಮೀಸಲಾತಿ ಸೂತ್ರವು ಮಹಿಳೆಯ ಹಕ್ಕು ಆಗಿ ಯಾಕೆ ಪರಿಗಣಿತವಾಗುತ್ತಿಲ್ಲ. ಹಾಗಾದರೆ

ಎಲ್ಲಾ ಮಹಿಳಾ ಸಮುದಾಯವನ್ನು ಸಬಲ ವರ್ಗವಾಗಿ ಪರಿಗಣಿಸಬೇಕೆ ಎನ್ನುವುದು ಪ್ರಜ್ಞಾವಂತರ ಪ್ರಶ್ನೆಯಾಗಿ ಉಳಿದಿದೆ. ಮಹಿಳೆಯರು ಸಾಮಾಜಿಕವಾಗಿ, ಆರ್ಥಿಕವಾಗಿ ಪುರುಷ ಕೇಂದ್ರಿತ ಸಂಸ್ಕೃತಿಯ ಅಧೀನದಲ್ಲಿ ಸಿಕ್ಕು ನರಳುತ್ತಿರುವ ಚಿತ್ರಣವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ವಿಶ್ವಸಂಸ್ಥೆಯು SEDAW ವರದಿಯ ಮೂಲಕ ಮಂಡಿಸಿತು. ಭಾರತ ಸರ್ಕಾರವು ಕೂಡ ೧೯೭೪ರಲ್ಲಿ 'To words Iquality' ವರದಿಯಲ್ಲಿ ಮಹಿಳಾ ಶೋಷಣೆಯ ಸಮಗ್ರ ಸ್ವರೂಪವನ್ನು ಅಧ್ಯಯನಕ್ಕೊಳಪಡಿಸಿ, ಇದರ ಪರಿಹಾರಕ್ಕಾಗಿ ಅಂದರೆ ಮಹಿಳೆಯರ ಸಬಲೀಕರಣಕ್ಕಾಗಿ ಏನೆಲ್ಲ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕೆಂಬುದರ ಬಗ್ಗೆ ವಿವಿಧ ಶಿಫಾರಸುಗಳನ್ನು ನೀಡಿತು. ಸ್ತ್ರೀವಾದಿ ಚಿಂತಕರ ಹೋರಾಟಗಳ ಕಾರಣವಾಗಿ ನ್ಯಾಯಾಂಗ ವ್ಯವಸ್ಥೆಯ ಮೂಲಕ ಮಹಿಳಾ ಶೋಷಣೆಯ ನಿರ್ಮೂಲನೆಗಾಗಿ, ವರದಕ್ಷಿಣೆ ನಿಷೇಧ, ಸತಿ ನಿಷೇಧ, ವಿಧವಾ ಪುನರ್ ವಿವಾಹ, ಮಹಿಳಾ ಆಸ್ತಿಹಕ್ಕು, ಕೌಟುಂಬಿಕ ಹಿಂಸೆ ನಿಷೇಧ, ಮಹಿಳಾ ದೌರ್ಜನ್ಯ ತಡೆಕಾಯ್ದೆ, ಮಹಿಳಾ ಸಾಗಾಣಿಕೆ ನಿಷೇಧ ಮುಂತಾದ ಅನೇಕ ಮಹಿಳಾ ಕಾನೂನುಗಳನ್ನು ರೂಪಿಸಲಾಯಿತು. ಇಷ್ಟೆಲ್ಲಾ ಪ್ರಕ್ರಿಯೆಗಳು ಮಹಿಳೆಯರ ಪರವಾಗಿ ಆದಾಗ್ಯೂ ಕೂಡ ಮಹಿಳಾ ಮೀಸಲಾತಿಯ ಪ್ರಶ್ನೆ ಬಂದಾಗ ಮಾತ್ರ ಸಮಸ್ಯೆ ಬಗೆಹರಿಯುವ ಹಾಗೆ ಕಾಣುತ್ತಿಲ್ಲ. ಹಾಗಾಗಿ ನಿಜವಾದ ತೊಡಕು ಎಲ್ಲಿದೆ ಎಂಬುದನ್ನು ಗ್ರಹಿಸುವುದು ಸವಾಲಾಗಿ ಪರಿಣಮಿಸಿದೆ.

## ಪಂಚಾಯತ್ ವ್ಯವಸ್ಥೆಯಲ್ಲಿ ಮೀಸಲಾತಿಯ ಪ್ರಶ್ನೆ

'ಸಮಾನತೆಯೆಡೆಗೆ' ವರದಿಯ ಪ್ರತಿಫಲವೆಂಬಂತೆ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಮೊದಲ ಬಾರಿಗೆ ಶೇಕಡ ೧/೩ರಷ್ಟು ಮಹಿಳಾ ಮೀಸಲಾತಿಯನ್ನು ತರುವಲ್ಲಿ ಯಾವ ತೊಡಕುಗಳೂ ಉಂಟಾಗಲಿಲ್ಲ. ೧೯೯೨ರಲ್ಲಿ ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಗಳನ್ನು ಮಾಡುವುದರ ಮೂಲಕ ಗ್ರಾಮಪಂಚಾಯತ್, ತಾಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಹಾಗೂ ನಗರಸಭೆಗಳ ವ್ಯವಸ್ಥೆಯಲ್ಲಿ ಮಹಿಳಾ ಮೀಸಲಾತಿಯನ್ನು ಯಾವ ಸಮಸ್ಯೆಗಳೂ ಇಲ್ಲದಂತೆ ಅನುಷ್ಠಾನಕ್ಕೆ ತರಲಾಯಿತು. ಕರ್ನಾಟಕ ಸರ್ಕಾರವು ೧೯೯೩ರಲ್ಲಿ ಸ್ಥಳೀಯ ಆಡಳಿತದಲ್ಲಿ ಮಹಿಳಾ ಮೀಸಲಾತಿಯನ್ನು ಕುರಿತಂತೆ ಪಂಚಾಯತ್ ರಾಜ್ ಅಧಿನಿಯಮವನ್ನು ಜಾರಿಗೊಳಿಸುವುದರ ಮೂಲಕ ಅನುಷ್ಠಾನಗೊಳಿಸಿತು.

ಕರ್ನಾಟಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಆರಂಭಿಸಿದಾಗ ಮೊದಲು ಶೇ. ೨೫ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿರಿಸಿತ್ತು. ೧೯೯೩ರಲ್ಲಿ ಸಂವಿಧಾನಕ್ಕೆ ೭೩ನೇ ತಿದ್ದುಪಡಿಯನ್ನು ತರುವುದರ ಮೂಲಕ ಈ ಹಿಂದಿನ ಮೀಸಲಾತಿಯ ಪ್ರಮಾಣವನ್ನು ಶೇಕಡ ೨೫% ರಿಂದ ಶೇಕಡಾ ೩೩.೩ಕ್ಕೆ ಏರಿಸಲಾಯಿತು.

ಮಂಡಲ ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯತಿಗಳೆಂಬ ಎರಡು ವಿಭಾಗದಲ್ಲಿ ವಿಭಾಗಿಸಿದ್ದ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ಬದಲಿಸಿ ಹೊಸ ವಿಕೇಂದ್ರೀಕರಣ ತತ್ವದ ಮೂಲಕ ಮೂರು ತೆರನಾಗಿ ವರ್ಗೀಕರಿಸಿ ಅನುಷ್ಠಾನಕ್ಕೆ ತರಲಾಯಿತು. ಗ್ರಾಮಪಂಚಾಯಿತಿ, ತಾಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿಗಳೆಂಬ ಮೂರು ಬಗೆಯ ಆಡಳಿತ

ವ್ಯವಸ್ಥೆಯು ಇಂದಿಗೂ ಮುಂದುವರಿದಿದೆ. ಕರ್ನಾಟಕ ಸರ್ಕಾರದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಲಭ್ಯವಾದ ಆಡಳಿತಾಧಿಕಾರವನ್ನು ಮಹಿಳೆಯರು ಅನುಭವಿಸುವಲ್ಲಿ ಅನೇಕ ವಿಫಲತೆಗಳು ಗೋಚರವಾಗಿರುವುದನ್ನು ಕೆಲವು ಅಧ್ಯಯನಗಳು ಈಗಾಗಲೇ ಗುರುತಿಸಿವೆ. ಮಹಿಳೆಯರು ಈ ಬಗೆಯ ಮೀಸಲಾತಿಯ ಸೌಲಭ್ಯದಿಂದ ಅಧಿಕಾರದ ಚುಕ್ಕಾಣಿಯನ್ನು ಹಿಡಿದಾಗ ನಿಜವಾಗಿ ಅದರ ಫಲಾನುಭವಿಯಾಗಿ ಅಧಿಕಾರ ಹೊಂದಿದವರಾಗಿ ಮಹಿಳೆಯರ ಗಂಡನೊ, ಸಹೋದರನೋ ಇಲ್ಲವೆ ಜಮೀನ್ದಾರೀ ಪಳೆಯುಳಿಕೆಯ ಪ್ರತಿನಿಧಿಯಾದ ಊರ ಪ್ರಮುಖನೇ ಆಗಿರುವುದು ವಿವಿಧ ಅಧ್ಯಯನ ವರದಿಗಳ ಮೂಲಕ ರುಜುವಾತಾಗಿದೆ. ಒಂದು ಅಂದಾಜಿನ ಪ್ರಕಾರ ಶೇಕಡಾ ಅರ್ಧದಷ್ಟು ಜನಸಂಖ್ಯೆ ಹೊಂದಿರುವ ಮಹಿಳೆಯರ ಅಧಿಕಾರವನ್ನು ಪುರುಷ ವರ್ಗವೇ ಚಲಾಯಿಸುತ್ತಾ ಬಂದಿರುವುದನ್ನು ಇತ್ತೀಚಿನ ಪಂಚಾಯತ್ ವ್ಯವಸ್ಥೆಯವರೆಗೂ ತಪ್ಪಿಸಲು ಸಾಧ್ಯವಾಗದೆ ಇರುವುದು ಮಹಿಳಾ ಅಧಿಕಾರಹೀನತೆಯನ್ನು ಎತ್ತಿ ತೋರಿಸುತ್ತದೆ. ಆದರೆ ಇತ್ತೀಚೆಗಿನ ಅಧ್ಯಯನಗಳ ಪ್ರಕಾರ ಒಂದು ಬಗೆಯ ಅಲ್ಪ ಪ್ರಮಾಣದ ಜಾಗೃತಿಯನ್ನು ಪಂಚಾಯತ್ ಆಡಳಿತ ವ್ಯವಸ್ಥೆಯಲ್ಲಿ ಮಹಿಳೆಯರು ಹೊಂದುತ್ತಿರುವುದನ್ನು ಕೂಡ ಗುರುತಿಸಲಾಗಿದೆ.

**ರಾಜಕೀಯ ಅಧಿಕಾರ ಸಂರಚನೆ ಮತ್ತು ಮಹಿಳೆಯರು**

ಭಾರತೀಯ ಪರಂಪರೆಯ ಇತಿಹಾಸದಲ್ಲಿ ಅಧಿಕಾರ ಸಂರಚನೆ ಮತ್ತು ಮಹಿಳೆಯರಿಗೆ ಇರುವ ಸಂಬಂಧವು ವಿರೋಧಿ ಗುಣವುಳ್ಳದ್ದಾಗಿದೆ. ಯಾಕೆಂದರೆ ಮಹಿಳೆಯರನ್ನು ಕುಟುಂಬ ಹಾಗೂ ಮನೆಯ ಹೊಸ್ತಿಲು ಭಾಗದಿಂದ ಒಳಗೆಯೇ ಎಂಬ ಮೌಖಿಕ ಒಪ್ಪಂದವನ್ನು ಚಾಚು ತಪ್ಪದೇ ಪಾಲಿಸಿಕೊಂಡು ಬರಲಾಗಿದೆ. ಸಂತಾನ ಪ್ರಕ್ರಿಯೆಯಲ್ಲಿ ಭಾಗವಹಿಸುವುದು ಹಾಗೂ ಅದರ ಪೋಷಣೆಯ ನಿರ್ವಹಣೆಯನ್ನು ಸಮರ್ಥವಾಗಿ ನಿರ್ವಹಿಸುವುದು ಮಹಿಳೆಯರ ಹೊಣೆಗಾರಿಕೆಯಾಗಿ ಮಂಡಿತವಾಗಿದೆ. ಈ ಜವಾಬ್ದಾರಿಯ ಜೊತೆಗೆ ಗೃಹಿಣಿತ್ವದ ಆದರ್ಶವನ್ನು ಪ್ರತಿಯೊಬ್ಬ ಮಹಿಳೆಯರು ಖಡ್ಡಾಯವಾಗಿ ಪಾಲಿಸಬೇಕು. ಮಹಿಳೆಯರಿಗೆ ಸೃಷ್ಟಿಸಲಾದ ಆದರ್ಶಗಳನ್ನು ಮುರಿಯಲು ಪುರುಷ ವರ್ಗವೇ ಕಾರಣವಾದರೂ ಅದರ ಹೊಣೆಯನ್ನು ಸ್ತ್ರೀಯರಿಗೆ ವರ್ಗಾಯಿಸಿ ಅವರ ಕರ್ಮ, ದುರ್ಗತಿ ಅವಳ ವಿಧಿ ಎಂದು ಬಿಂಬಿಸಲಾಗುತ್ತದೆ. ಒಂದು ವೇಳೆ ಇವುಗಳ ಉಲ್ಲಂಘನೆಯಾದರೆ ಪುರುಷ ಲೋಕದ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ. ಅಷ್ಟೇ ಅಲ್ಲ ಸಮಾಜ ವ್ಯವಸ್ಥೆಯ ಗುರುತರವಾದ ಆಪಾದನೆಗೆ ಒಳಗಾಗಬೇಕಾಗುತ್ತದೆ ಹಾಗೂ ಮಹಿಳೆಯರು ಈ ಸಾಂಪ್ರದಾಯಿಕ ನಿರ್ದೇಶನಾತ್ಮಕವಾದ ಮಹಿಳಾ ಪಾತ್ರವನ್ನು ಚಾಚೂ ತಪ್ಪದೇ ಎಚ್ಚರಿಕೆಯಿಂದ ನಿರ್ವಹಣೆ ಮಾಡುವುದನ್ನು ತಮ್ಮ ವಿಧಿಯನ್ನಾಗಿ ನಂಬಿ ಆಚರಿಸುತ್ತಾ ಬಂದಿದ್ದಾರೆ.

ಅಧಿಕಾರದ ಕಕ್ಷೆ ಏನಿದ್ದರೂ ಪುರುಷರಿಗೆ ಮಾತ್ರ ಸಂಬಂಧಿಸಿದ್ದೆಂದು ಸಮಾಜ ವ್ಯವಸ್ಥೆಯ ಎಲ್ಲಾ ಹಂತಗಳಲ್ಲೂ ಮನವರಿಕೆ ಮಾಡಿ ರೂಢಿಸಿಕೊಂಡು ಬರಲಾಗಿದೆ. ಖಾಸಗಿಯಾದ ಮನೆಯ ಆಂತರಿಕ ವಲಯದಲ್ಲೂ ಕೂಡ ಮನೆಯಲ್ಲಿನ ಯಾವುದೇ ನಿರ್ಧಾರಾತ್ಮಕ

ತೀರ್ಮಾನವು ಅಲ್ಲಿನ ಪುರುಷನದೇ ಆಗಿರುತ್ತದೆ. ಈ ಕುಟುಂಬದಲ್ಲಿ ಪುರುಷ ಮತ್ತು ಮಹಿಳೆಯರ ಉತ್ಪಾದನಾ ಚಟುವಟಿಕೆಯ ನಿರ್ವಹಣೆಯು ಪುರುಷನ ನಿರ್ದೇಶನದಂತೆಯೇ ನಡೆದುಕೊಂಡು ಬಂದಿದ್ದಾಗಿದ್ದು; ಶ್ರಮದ ಮೂಲಕ ಬರುವ ಸಂಪತ್ತಿನ ಕ್ರೋಢೀಕರಣ ಕೊನೆಗೆ ಉತ್ಪಾದಿತ ಸಂಪತ್ತಿನ ವಿಂಗಡಣೆ ಅಥವಾ ಹಂಚಿಕೆಯು ಕೂಡ ಪುರುಷನ ನಿರ್ದೇಶನವನ್ನೇ ಆಧರಿಸಿರುತ್ತದೆ. ಹಾಗಾಗಿ ಹಲವಾರು ಅರ್ಥಗಳಲ್ಲಿ ಕುಟುಂಬದ ಯಜಮಾನತ್ವವು ಪುರುಷ ನದೇ ಆಗಿದೆ. ಅಲೆಮಾರಿ ಜನಾಂಗ ವ್ಯವಸ್ಥೆಯ ಆದಿಮವಾದ ಜೀವನ ಪದ್ಧತಿಗಳಲ್ಲಿ ಮಾತ್ರ ಸ್ತ್ರೀಕೇಂದ್ರಿತ ಯಜಮಾನತ್ವ ಕೂಡ ಇತ್ತೆಂದು ಹೇಳಲಾಗುವ ಕೆಲ ಅಧ್ಯಯನ ಮಾದರಿಗಳು ಇವೆಯಾದರೂ ವರ್ತಮಾನದಲ್ಲಿ ಮಾತ್ರ ಪುರುಷ ಕೇಂದ್ರಿತ ಯಾಜಮಾನ್ಯವೇ ಅಸ್ತಿತ್ವದಲ್ಲಿರು ವುದನ್ನು ಯಾರೂ ನಿರಾಕರಿಸಲಾರರು. ಹಾಗಾಗಿ ಪುರುಷ ಕಕ್ಷೆಯ ಅಧಿಕಾರ ಕೇಂದ್ರದಿಂದ ಶತ ಶತಮಾನಗಳ ಕಾಲಘಟ್ಟದಿಂದಲೂ ವಂಚಿತಳಾಗಿ ಬಂದಿರುವ ಮಹಿಳೆಯರಿಗೆ ಮತ್ತೆ ಅಧಿಕಾರ ಸಂಬಂಧದಲ್ಲಿ ಅವರನ್ನು ಒಳಗೊಳಿಸುವುದು ಸಾಮಾಜಿಕವಾದ ನೆಲೆಯಿಂದ ಸವಾಲಾಗಿ ಪರಿಣಮಿಸಿದೆ.

ಅರಸೊತ್ತಿಗೆಗಳ ಕಾಲಘಟ್ಟದಲ್ಲಿ ಕೂಡ ರಾಜರಾಗಿದ್ದ ಗಂಡಂದಿರರ ಅಕಾಲಿಕ ಮರಣದ ಸಂದರ್ಭಗಳಲ್ಲಿ ಅಲ್ಲಿ ಕೆಲಸ್ತ್ರೀಯರು ಅಧಿಕಾರ ಚುಕ್ಕಾಣಿಯನ್ನು ಹಿಡಿಯಬೇಕಾದ ಅನಿವಾರ್ಯತೆಗಳಿಗೆ ಒಳಗಾಗಿರುವ ಹೇರಳ ಉದಾಹರಣೆಗಳು ನಮ್ಮ ಚರಿತ್ರೆಯಲ್ಲಿ ಇವೆ. ರಜಿಯಾ ಬೇಗಂ, ಝೂನ್ಸಿರಾಣಿ ಲಕ್ಷ್ಮಿಬಾಯಿ, ಕಿತ್ತೂರರಾಣಿ ಚನ್ನಮ್ಮ, ಬೆಳವಡಿ ಮಲ್ಲಮ್ಮ, ಕೆಳದಿ ಚನ್ನಮ್ಮ, ಉಳ್ಳಾಲದ ಅಬ್ಬಕ್ಕ ಮುಂತಾದ ರಾಣಿಯರು ನಿರ್ಣಾಯಕ ಸಂದರ್ಭಗಳಲ್ಲಿ ಅಧಿಕಾರವನ್ನು ಹೊಂದಿ ತಮ್ಮ ಧೀರತ್ವನ್ನು ಪ್ರಕಾಶನಗೊಳಿಸಿಯೂ ಸಾಮಾಜಿಕ ಆರೋಪ ಹಾಗೂ ನಿಂದನೆಗಳಿಗೆ ಒಳಗಾಗುವುದನ್ನು ತಪ್ಪಿಸಿಕೊಳ್ಳಲು ಆಗಲಿಲ್ಲ. ಯಾಕೆಂದರೆ ಸಾಮಾಜಿಕ ದೃಷ್ಟಿಕೋನವೇ ಮಹಿಳೆಯರ ಪರವಾಗಿ ಇಲ್ಲದಿರುವುದರಿಂದ ಚರಿತ್ರೆಯಲ್ಲಿ ಮಹಿಳೆಯರು ಅನವಶ್ಯಕ ಆರೋಪಗಳನ್ನು ಎದುರಿಸಬೇಕಾಯಿತು. ಇಂತಹ ಅನೇಕ ಉದಾಹರಣೆಯು ಮಹಿಳೆಯ ಪಾಲಿನ ರಾಜಕೀಯ ಅಧಿಕಾರ ಸಂಬಂಧವನ್ನು ನಿರಾಕರಿಸುವ ಚಾರಿತ್ರಿಕ ಉದಾಹರಣೆ ಗಳಾಗಿವೆಯಲ್ಲವೆ? ಇದೇ ಮಾದರಿಯು ಆಧುನಿಕ ಪ್ರಜಾಪ್ರಭುತ್ವದ ಸಂದರ್ಭದಲ್ಲಿಯೂ ಮುಂದುವರಿಯುತ್ತಿರುವುದನ್ನು ಪ್ರಸ್ತುತ ರಾಜಕೀಯ ಮಹಿಳಾ ಮೀಸಲಾತಿಯ ವಿರೋಧಿ ಅಭಿಪ್ರಾಯವಿರುವ ವಾದಗಳಿಂದ ಗ್ರಹಿಸಬಹುದಾಗಿದೆ.

ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಮಹಿಳೆಯ ರಾಜಕೀಯ ಅಧಿಕಾರವನ್ನು ಸಂವಿಧಾನದ ೭೩ ಮತ್ತು ೭೪ ತಿದ್ದುಪಡಿಗಳ ಮೂಲಕ ಕಾನೂನಿನ ಅನಿವಾರ್ಯತೆಗಾಗಿಯಾದರೂ ನೀಡಬೇಕಾಗಿ ಬಂದಿದ್ದರಿಂದ ಮೊದಲ ಬಾರಿಗೆ ರಾಜಕೀಯ ಅಧಿಕಾರವು ಮಹಿಳೆಯರಿಗೆ ಲಭ್ಯವಾಯಿತು. ಪ್ರಶ್ನೆ ಏನಾಯಿತೆಂದರೆ, ಈಗಾಗಲೇ ಮೇಲೆ ವಿವರಿಸಿದಂತೆ ಸಮಾಜ ವ್ಯವಸ್ಥೆಯಲ್ಲಿ ರೂಢಿಯಾದ 'ಪುರುಷ ಯಜಮಾನತ್ವ'ವು ಈ ಪ್ರಕ್ರಿಯೆಯಿಂದ ಅಲುಗಾಡಲು ಶುರುವಾಯಿತೆಂದು ತೋರುತ್ತದೆ. ಹಾಗಾಗಿ ಪಂಚಾಯತ್ ವ್ಯವಸ್ಥೆಯಲ್ಲಿ ಮಹಿಳಾ ಮೀಸಲಾತಿ

ಅನುಷ್ಠಾನಕ್ಕೆ ಬಂದ ಮೊದಮೊದಲಿನ ವರ್ಷಗಳಲ್ಲಿ ರಾಜಕೀಯ ಅಧಿಕಾರ ಹೊಂದಿದ ಮಹಿಳೆಯರ ಗಂಡಂದಿರರೊ ಅಥವಾ ಅವರ ಅಣ್ಣ ತಮ್ಮಂದಿರರೋ ಈ ಅಧಿಕಾರ ನಿರ್ವಹಣೆಯನ್ನು ನಾಚಿಕೆ ಇಲ್ಲದೆ ಮಾಡಿಕೊಂಡು ಬಂದಿರುವುದನ್ನು ಅನೇಕ ಅಧ್ಯಯನಗಳು ತಮ್ಮ ಫಲಿತಗಳಿಂದ ಈ ಸತ್ಯವನ್ನು ಹೊರಹಾಕಿವೆ. ಅಷ್ಟೇ ಅಲ್ಲ ಕೆಲವೆಡೆ ಗಂಡಸರೇ ಮಹಿಳೆಯರ ಪರವಾಗಿ ಸಭೆಗಳಲ್ಲಿ ಭಾಗವಹಿಸಿದ್ದು ಮತ್ತು ಇದನ್ನು ಮಹಿಳಾ ಹೋರಾಟಗಾರ್ತಿಯರು ವಿರೋಧಿಸಿ ಚಳುವಳಿ ನಡೆಸಿದ್ದು, ಗುಲಬರ್ಗಾ ಜಿಲ್ಲಾ ಪಂಚಾಯಿತಿಯಲ್ಲಿ ಇಂತಹ ಘಟನೆ ನಡೆದು ಅದರ ಸುದ್ದಿಗಳ ವಿವರವಾದ ವರದಿಗಳನ್ನು ನಾಡಿನ ಪತ್ರಿಕೆಗಳಲ್ಲಿ ಪ್ರಕಟವಾಗಿರುವುದು ವಾಸ್ತವತೆಗೆ ಹಿಡಿದ ಕನ್ನಡಿಯಾಗಿದೆ. ಮೇಲಿನ ಉದಾಹರಣೆಗಳಿಂದ ಪುರುಷಾಧಿಕಾರದ ಮನೋವಾಂಛೆಯನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ.

ಒಟ್ಟಾರೆ ಇಂತಹ ಪ್ರಕ್ರಿಯೆಗಳಲ್ಲಿ ಹೇಗೆ ಮಹಿಳಾ ಸಮುದಾಯವನ್ನು ಅಧಿಕಾರ ಕಕ್ಷೆಯಿಂದ ಹೊರಗಿಡಬೇಕು ಎಂಬುದರ ಪೂರ್ವಾಗ್ರಹವನ್ನು ಸಾಬೀತುಪಡಿಸುವ ಮಾದರಿಗಳಾಗಿ ಇವುಗಳನ್ನು ಗ್ರಹಿಸಬೇಕಾಗುತ್ತದೆ. ಮಹಿಳೆಯನ್ನು ಅಧಿಕಾರ ಕಕ್ಷೆಯಿಂದ ಹೊರಗಿಡಬೇಕೆಂಬ ಸಾಮಾಜಿಕ ದೃಷ್ಟಿಕೋನದ ಭಾಗವಾಗಿ ಇವು ನಡೆಯುತ್ತವೆ ಎಂಬುದನ್ನು ಅರ್ಥೈಸಿಕೊಂಡರೂ ಇಲ್ಲಿ ಸ್ವತಃ ಅಧಿಕಾರ ನಿರ್ವಹಿಸುತ್ತಿರುವ ಮಹಿಳೆಯರು ಕ್ರಮೇಣವಾದರೂ ಪುರುಷರ ಈ ಮಧ್ಯಪ್ರವೇಶಿಕೆಯನ್ನು ನಿಧಾನವಾಗಿ ಹಿಂದೆ ಸರಿಸಲಾಗುತ್ತದೆಂಬ ಬಗೆಗೆ ಆಶಾವಾದವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಯಾಕೆಂದರೆ ಪ್ರತಿನಿತ್ಯ ಆಡಳಿತದ ಹೊಣೆಯನ್ನು, ಅಧಿಕಾರವನ್ನು ಮಾಡುತ್ತಿರುವ ಮಹಿಳೆಯರು ಜಾಗೃತರಾಗಿ ತಮ್ಮ ಸಮುದಾಯಕ್ಕೆ ಅನ್ಯಾಯವಾದಾಗಲೂ ಪ್ರತಿಭಟಿಸದೆ ಇರಲಾರರು. ಹಾಗಾಗಿ ಈ ಮಹಿಳಾ ಅಧಿಕಾರದ ವಿಕೇಂದ್ರೀಕರಣವು ನಿರೀಕ್ಷಿತ ಪ್ರಮಾಣದಲ್ಲಿ ಇಲ್ಲದೆ ಹೋದರೂ ಅಗತ್ಯಕ್ಕನುಗುಣವಾಗಿ ಅಧಿಕಾರ ಗದ್ದುಗೆಯನ್ನು ಸಮರ್ಥವಾಗಿ ನಿರ್ವಹಿಸಲು ಸಾಧ್ಯವಾಗುತ್ತದೆ. ಈ ಕಾರಣಕ್ಕಾಗಿ ಮಹಿಳಾ ಸಮುದಾಯವು ಮುಂದೆ ಬಂದು ಪುರುಷರ ವಲಯದಲ್ಲಿದ್ದ ಅಧಿಕಾರ ಕೇಂದ್ರವನ್ನು ಹೊಂದುವ ಅನಿವಾರ್ಯತೆಯು ಸಂವಿಧಾನದ ಭಾಗವಾದಲ್ಲಿ ಅನೇಕ ಪುರುಷರು ಸಹಜವಾಗಿಯೇ ಈ ಅಧಿಕಾರ-ಪ್ರಭುತ್ವದ ಪ್ರಕ್ರಿಯೆಯಿಂದ ಹೊರಗುಳಿಯಬೇಕಾಗುತ್ತದೆ. ಇದುವೇ ಮಹಿಳಾ ರಾಜಕೀಯ ಮೀಸಲಾತಿಯ ಬಹುದೊಡ್ಡ ತೊಡಕಾಗಿ ಪರಿಣಮಿಸಿದೆ. ಈ ನೈಜ ಸಂಗತಿಯನ್ನು ವಿವರಿಸಿಕೊಳ್ಳದ ಹೊರತು ಮಹಿಳಾ ಮೀಸಲಾತಿ ಸಮಸ್ಯೆ ಬಗೆಹರಿಯುವುದಿಲ್ಲವೆಂದು ಕಾಣುತ್ತದೆ.

### ಮಹಿಳಾ ಮೀಸಲಾತಿ ಮಂಡನೆಯ ಪ್ರಯತ್ನಗಳು

ಜಾಗತಿಕ ಮಟ್ಟದಲ್ಲಿ ವಿಶ್ವಸಂಸ್ಥೆಯು 'ಸೀಡಾ' ಒಡಂಬಡಿಕೆಯನ್ನು ಅಂಗೀಕರಿಸಿದ ಮೇಲೆ ಭಾರತ ಸರ್ಕಾರವು ಕೂಡ "ಮಹಿಳೆಯರ ವಿರುದ್ಧವಾದ ಎಲ್ಲ ಬಗೆಯ ಅಸಮಾನತೆಗಳನ್ನು ನಿರ್ಮೂಲನ" ಮಾಡಲು ಈ ಒಡಂಬಡಿಕೆಯನ್ನು ಅಂಗೀಕರಿಸಿತು. ಇದರ ಫಲವಾಗಿ ಅನೇಕ ಮಹಿಳಾ ಪರವಾದ ವಿಶೇಷ ಕಾನೂನುಗಳನ್ನು, ಮಹಿಳಾ ಕಲ್ಯಾಣಕಾರಿ ಕಾರ್ಯಕ್ರಮಗಳನ್ನು ಹಾಗೂ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಶೇ. ೫೦ರವರೆಗೆ ಮಹಿಳಾ ಮೀಸಲಾತಿಯನ್ನು

ನೀಡಲು ಸಾಧ್ಯವಾಯಿತು. ಭಾರತದಲ್ಲಿ ಮಹಿಳೆಯರ ಬಗೆಗಿನ ಅಸಮಾನತೆಯ ಸ್ವರೂಪವನ್ನು ಕುರಿತ ಅಧ್ಯಯನದ ಫಲಿತವನ್ನು '೧೯೭೪ ರ ಸಮಾನತೆಯೆಡೆಗೆ' ವರದಿಯಲ್ಲಿ ಸಲ್ಲಿಕೆಯಾದದ್ದು ಕೂಡ ಮಹಿಳಾ ಸಬಲೀಕರಣದಲ್ಲಿ ಮಹತ್ತರವಾದ ಬೆಳವಣಿಗೆಯಾಗಿ ಪರಿಣಮಿಸಿದ್ದನ್ನು ಹಿಂದೆ ಪ್ರಸ್ತಾಪಿಸಲಾಗಿದೆಯಷ್ಟೆ. ಇದೆಲ್ಲವೂ ಮಹಿಳಾ ಸಬಲೀಕರಣದ ಒಂದು ಸ್ಥೂಲವಾದ ಚಾರಿತ್ರಿಕ ನೋಟವಾಗಿರುವುದರಿಂದ ಇಲ್ಲಿ ಪುನರ್ ಉಲ್ಲೇಖಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಮಹತ್ವದ ಚಾರಿತ್ರಿಕ ಸಮೀಕ್ಷೆ ಏನೆಂದರೆ, ಮಹಿಳಾ ರಾಜಕೀಯ ಮೀಸಲಾತಿಯ ಪ್ರಶ್ನೆಯು ಯಾವಾಗ ಮತ್ತು ಯಾವ ಯಾವ ಇಕ್ಕಟ್ಟು ಪ್ರತಿರೋಧಗಳೊಂದಿಗೆ ಚಾರಿತ್ರಿಕವಾಗಿ ಸಾಗಿ ಬಂದಿದೆ ಎಂಬುದರ ಹಿನ್ನೋಟವನ್ನು ಇಲ್ಲಿ ಒದಗಿಸುವುದಾಗಿದೆ.

ಕೇಂದ್ರದಲ್ಲಿ ಯುನೈಟೆಡ್ ಫ್ರಂಟ್ ಸಂಯುಕ್ತ ರಂಗದ ನಾಯಕರಾಗಿ ಆಯ್ಕೆಯಾದ ಕರ್ನಾಟಕದ ದೇವೇಗೌಡ ನೇತೃತ್ವದ ಕೇಂದ್ರ ಸರ್ಕಾರವು ೧೯೯೬ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಸರ್ಕಾರವು ಸಂವಿಧಾನದ ೮೧ನೇ ತಿದ್ದುಪಡಿ ಮಸೂದೆಯಾಗಿ ಲೋಕಸಭೆ ಹಾಗೂ ಶಾಸನ ಸಭೆಗಳಲ್ಲಿ ಶೇಕಡಾ ೩೩ ರ ಮಹಿಳಾ ಮೀಸಲಾತಿ ವಿಧೇಯಕವನ್ನು ಮೊಟ್ಟಮೊದಲ ಬಾರಿಗೆ ಸೆಪ್ಟೆಂಬರ್ ೧೨ ರಂದು ಮಂಡಿಸಿತು. ಇದಕ್ಕೆ ಹಿಂದುಳಿದ ವರ್ಗಗಳ ಒಳಮೀಸಲಾತಿ ಪ್ರಶ್ನೆಯನ್ನು ಮುಂದಿಟ್ಟು ಶರದ್ ಯಾದವ ಅವರು ಪ್ರತಿರೋಧವನ್ನು ಮಾಡಿದರು. ಈ ಪ್ರತಿರೋಧವನ್ನು ನಿವಾರಿಸಲು ಎಡಪಂಥೀಯ ಪ್ರಮುಖರಾದ ಗೀತಾ ಮುಖರ್ಜಿಯವರ ನೇತೃತ್ವದ ಜಂಟಿ ಸಮಿತಿಯೊಂದನ್ನು ನೇಮಿಸಿ, ಇದನ್ನು ಪರಿಶೀಲನೆಗಾಗಿ ಒಪ್ಪಿಸಲಾಯಿತು. ಮೂರು ತಿಂಗಳಲ್ಲಿಯೇ ಸಮಿತಿಯು ಮಸೂದೆಯನ್ನು ಚರ್ಚಿಸಿ ಸರ್ಕಾರಕ್ಕೆ ಶಿಫಾರಸು ಮಾಡಿ ಒಪ್ಪಿಸಿದ ಮೇಲೆ ಮತ್ತೆ ಡಿಸೆಂಬರ್ ೧೨ರಂದು ವಿಧೇಯಕವನ್ನು ಮರುಮಂಡಿಸಲಾಯಿತಾದರೂ ಪುರುಷನಿಷ್ಠ ಹಿತಾಸಕ್ತಿಯ ಸಂಸದರ ಪ್ರತಿಭಟನೆಯಿಂದಾಗಿ ಮಸೂದೆಗೆ ಗೆಲುವು ಉಂಟಾಗಲಿಲ್ಲ. ಇನ್ನೊಮ್ಮೆ ಐ.ಕೆ. ಗುಜ್ರಾಲ್ ಅವರು ಪ್ರಧಾನಿಯಾಗಿದ್ದಾಗ ಮರುಮಂಡನೆಗೆ ಪ್ರಯತ್ನಿಸಲಾಯಿತಾದರೂ ಇಲ್ಲೂ ಕೂಡ ಯಶಸ್ಸನ್ನು ಕಾಣಲಾಗಲಿಲ್ಲ. ಮುಂದೆ ಅಟಲ್‌ಬಿಹಾರಿ ವಾಜಪೇಯಿ ಅವರ ನೇತೃತ್ವದ ಸರ್ಕಾರವು ರಚನೆಯಾದಾಗ ಶೇಕಡಾ ೩೩ರ ಮಹಿಳಾ ಮೀಸಲಾತಿಯ ಮಸೂದೆಯನ್ನು ಮತ್ತೆ ಮಂಡಿಸಲಾಯಿತಾದರೂ ಇಲ್ಲಿ ಪ್ರಬಲ ಪ್ರತಿಭಟನೆಯನ್ನು ಲಾಲೂ ಪ್ರಸಾದ ಯಾದವ್ ಮತ್ತು ಮುಲಾಯಂಸಿಂಗ ಯಾದವ್‌ರವರು ಮಾಡಿದರು. ಅಷ್ಟೇ ಅಲ್ಲ ರಾಂ. ವಿಲಾಸ ಪಾಸ್ವಾನವರು ಕೂಡ ದಲಿತ ಹಾಗೂ ಹಿಂದುಳಿದ ವರ್ಗಗಳ ಒಳಮೀಸಲಾತಿಯ ಪ್ರಶ್ನೆಯನ್ನು ಎತ್ತಿ ತಮ್ಮ ಪ್ರತಿರೋಧವನ್ನು ಮಂಡಿಸಿದರು. ಎಡರಂಗ ಕೂಡ ಕ್ರಿಯಾತ್ಮಕವಾಗಿ ಪ್ರತಿಕ್ರಿಯಿಸಲಿಲ್ಲ. ಹಾಗಾಗಿ ಮತ್ತೆ ಮಸೂದೆಯು ಮೂಲೆ ಸೇರಿತು. ಕೊನೆಗೆ ಇತ್ತೀಚೆಗೆ ಕಾಟಾಚಾರವೆಂಬಂತೆ ೨೦೧೧ರ ಮಾರ್ಚ್‌ನಲ್ಲಿ ರಾಜ್ಯ ಸಭೆಯಲ್ಲಿ ಮಂಡನೆಯಾದ ಮಹಿಳಾ ಮೀಸಲಾತಿಯು ಅಂತು-ಇಂತೂ ಅಂಗೀಕಾರಗೊಂಡಿದೆ. ಇದು ಏನಿದ್ದರೂ ರಾಜ್ಯಸಭೆಯ ಒಪ್ಪಿಗೆಯಷ್ಟೆ. ಮುಖ್ಯವಾದ ತೀರ್ಮಾನವಾಗಬೇಕಾಗಿದ್ದುದು ಲೋಕಸಭೆಯಲ್ಲಿ. ತದನಂತರ ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಮೂಲಕ ಕಾಯ್ದೆಯನ್ನಾಗಿ ರೂಪಿಸಿ ಅದನ್ನು ಅನುಷ್ಠಾನ

ಗೊಳಿಸಬೇಕು. ಇದು ಎಲ್ಲಿಯವರೆಗೆ ಹೋಗುವುದೋ. ಸಧ್ಯಕ್ಕಂತೂ ರಾಜಕೀಯ ವಲಯದಲ್ಲಿ ಅಂತಹ ಆಶಾವಾದಗಳು ಕಂಡು ಬರುತ್ತಿಲ್ಲವಾದ್ದರಿಂದ ಮಹಿಳಾ ಮೀಸಲಾತಿಯ ತೊಡಕು ಇನ್ನೂ ಕಗ್ಗಂಟಾಗೇ ಉಳಿಯುವ ಸಂದೇಹಗಳು ಗೋಚರಿಸುತ್ತಿವೆ.

### ವರ್ತಮಾನದ ರಾಜಕೀಯ ಬಿಕ್ಕಟ್ಟು

ಮಹಿಳಾ ಮೀಸಲಾತಿಯ ಬಹುಮುಖ್ಯ ತೊಡಕು ಇರುವುದು ಸಾಮಾಜಿಕ ವ್ಯವಸ್ಥೆಯಲ್ಲಿ. ನಾವು ಅದನ್ನು ಗ್ರಹಿಸಲಾರದೇ ರಾಜಕೀಯ ವಲಯದೊಳಗೆ ಮಹಿಳಾ ಮೀಸಲಾತಿಯ ಹಕ್ಕನ್ನು ಕೇಳುತ್ತಿದ್ದೇವೆ. ಸ್ವಾತಂತ್ರ್ಯ ಬಂದು ಆರು ದಶಕಗಳನ್ನು ಕಳೆದಿರುವ ಭಾರತೀಯ ಪ್ರಜಾಸತ್ತಾತ್ಮಕ ರಾಜಕೀಯ ವ್ಯವಸ್ಥೆಯ ಆಧಾರ ಸ್ತಂಭವು ಇಲ್ಲಿನ ಸಮಾಜ ವ್ಯವಸ್ಥೆಯೇ ಆಗಿದೆ. ಭಾರತದ ರಾಷ್ಟ್ರೀಯತೆಯ ಚಹರೆಯಲ್ಲಿ ಒಂದೇ ಸಂಸ್ಕೃತಿ, ಧರ್ಮ, ಭಾಷೆ, ಜಾತಿ, ವರ್ಗ, ಜನಾಂಗಗಳ ಏಕರೂಪಿ ಸ್ವರೂಪವಾಗದಿರುವುದೇ ದೊಡ್ಡ ತೊಡಕಾಗಿ ಪರಿಣಮಿಸಿದೆ. ವಿಭಿನ್ನ ರಾಜ್ಯಗಳ ಬಹುರೂಪಿ ಭಾಷೆ, ಜನಾಂಗ, ವರ್ಗಗಳ ವೈವಿಧ್ಯತೆಯು ಏಕರೂಪಾತ್ಮಕವಾದ ಸಂಗತಿಯಾಗದಿರುವುದು ಮತ್ತೊಂದು ತೊಡಕಾಗಿದೆ. ಲಿಂಗ-ಜಾತಿ-ವರ್ಗ ಭಾಷೆಗಳೊಳಗೆ ಒಡೆದುಕೊಂಡಿರುವ ಸಮಾಜ ವ್ಯವಸ್ಥೆಯು ಅನೇಕ ಬಗೆಯ ಅಸಮಾನತೆಗಳ ಗೂಡಾಗಿದೆ. ಸಾಂಪ್ರದಾಯಿಕವಾದ ಜಮೀನ್ದಾರಿ ವ್ಯವಸ್ಥೆಯು ಒಂದು ಕಡೆ, ಆಧುನಿಕ ಸ್ವಮೂಲದ ಬಂಡವಾಳಶಾಹಿ ವ್ಯವಸ್ಥೆಯು ಇನ್ನೊಂದು ಕಡೆ ಇವು ತಮತಮಗೆ ಬೇಕಾದಂತೆ ದೊಡ್ಡ ದೊಡ್ಡ ತಡೆಗೋಡೆಗಳನ್ನು ನಿರ್ಮಿಸಿಕೊಂಡು ಬಿಟ್ಟಿವೆ. ಜನಸಾಮಾನ್ಯರು ಅವುಗಳನ್ನು ದಾಟಿಕೊಂಡು ಹೋಗಿ ಸಮಾನತೆಯನ್ನು ಸಾಧಿಸುವುದು ಸವಾಲಾಗಿ ಪರಿಣಮಿಸಿದೆ. ಸಂವಿಧಾನ ದತ್ತವಾದ ಅಸಮಾನತೆಯ ನಿರ್ಮೂಲನೆ ಕಗ್ಗಂಟಾಗಿ ಇರುವಾಗ ಮೂಲೆಗೊತ್ತಲ್ಪಟ್ಟ ಮಹಿಳೆಯ ರಾಜಕೀಯ ಅಧಿಕಾರವನ್ನು ವ್ಯಂಗ್ಯ ಮಾಡುತ್ತಾ ಅಪಹಾಸ್ಯಕ್ಕೆ ಗುರಿಪಡಿಸಲಾಗುತ್ತಿದೆ.

ದಲಿತ ವರ್ಗದ ಮೀಸಲಾತಿ ಪ್ರಶ್ನೆಯನ್ನೇ ಒಂದು ದಶಕದಲ್ಲಿ ಸಾಧಿಸಲಾಗದೇ ಐದಾರು ದಶಕಗಳವರೆಗೆ ತೆಗೆದುಕೊಂಡು ಹೋಗುತ್ತಾ, ಮೊದಲಿನ ಅಸ್ಪೃಶ್ಯತಾ ಅಸಮಾನತೆಯನ್ನು ಕಾಯ್ದುಕೊಂಡು ಬರಲಾಗುತ್ತಿದೆ. ಸಾಲದೆಂಬಂತೆ, ಹಿಂದುಳಿದ ವರ್ಗಗಳ ಮೀಸಲಾತಿ, ಅಲ್ಪಸಂಖ್ಯಾತರ ಮೀಸಲಾತಿಗಳು ಕೂಡ ತಮ್ಮ ತಮ್ಮ ತರ್ಕಬದ್ಧವಾದ ಹಕ್ಕೊತ್ತಾಯಗಳೊಟ್ಟಿಗೆ ಮಂಡನೆಗೊಳ್ಳುತ್ತಿವೆ. ಈ ಬಗೆಯ ಹೋರಾಟ, ಚಳುವಳಿಗಳು ಕೂಡ ತಮ್ಮದೇ ಆದ ಚರಿತ್ರೆಯನ್ನು ಸಾರಿ ಹೇಳುತ್ತಲಿವೆ. ಹೀಗಿರುವಾಗ ಲಿಂಗ ಅಸಮಾನತೆಯ ಪ್ರಶ್ನೆಯನ್ನು ಈ ಒಟ್ಟು ಸಾಮಾಜಿಕ, ರಾಜಕೀಯ ವಿದ್ಯಮಾನಗಳೊಟ್ಟಿಗೆ ಇಟ್ಟು ನೋಡಿದಾಗ ಕುತೂಹಲಕರವಾದ ಮತ್ತು ಖಚಿತವಾದ ಕೆಲ ಸತ್ಯಗಳು ಗೋಚರವಾಗುತ್ತವೆ.

ಅಂತಾರಾಷ್ಟ್ರೀಯ ಮಟ್ಟದ ಭ್ರಷ್ಟಾಚಾರದೊಂದಿಗೆ ಕೈಜೋಡಿಸಿಕೊಂಡು ಬೆಳೆಯುತ್ತಿರುವ ಆಧುನಿಕ ಬಂಡವಾಳಶಾಹಿ ವ್ಯವಸ್ಥೆಯು ಭಾರತದಂತಹ ಮೂರನೆಯ ಜಗತ್ತಿನ ರಾಷ್ಟ್ರಗಳನ್ನು ನುಂಗಿ ಹಾಕುವ ಹುನ್ನಾರದಲ್ಲಿ ಧಾಪುಗಾಲು ಹಾಕುತ್ತಿದೆ. ರೈತರು, ಕೃಷಿ ಕೂಲಿಗಳು, ಅಸಂಘಟಿತ ದಿನಗೂಲಿಗಳು, ಕಾರ್ಮಿಕರು, ಕೆಳಜಾತಿ ಕೀಳು ಕೂಲಿಗಳ ಒಳಗಿನ ಶೇಕಡ ಅರ್ಧದಷ್ಟು

ಜನಸಂಖ್ಯೆಯನ್ನು ಹೊಂದಿರುವ ಮಹಿಳಾ ಸಮುದಾಯವು ಕೂಡ ಒಂದೊತ್ತಿನ ಊಟ, ಹರಕುಬಟ್ಟೆ, ಅನಕ್ಷರತೆ, ಅಜ್ಞಾನ, ಅಸಹಾಯಕತೆ, ಹಿಂಜರಿಕೆಗಳಲ್ಲಿ ನಲುಗಿ ಹೋಗಿರುವ ವಾಸ್ತವವು ವರ್ತಮಾನದಲ್ಲಿ ಢಾಳವಾಗಿ ಕಾಣಸುತ್ತಿದೆ. ಇಲ್ಲಿ ಆಳದಲ್ಲಿ ಇರುವ ಅಸಮಾನತೆಯು ತನ್ನದೇ ಪ್ರಜೆಗಳಿಂದಲೇ ಅಸಹಾಯಕ ಪ್ರಜೆಗಳ ಮೇಲೆ ಆಚರಣೆಗೊಳ್ಳುತ್ತಿದೆ. ಸಂವಿಧಾನದಲ್ಲಿ ಘೋಷವಾಕ್ಯವಾಗಿ ಹೇಳಲಾಗುವ ಪ್ರಜಾಪ್ರಭುತ್ವವೆಂದರೆ ಪ್ರಜೆಗಳು, ಪ್ರಜೆಗಳಿಂದ, ಪ್ರಜೆಗಳಿಗೋಸ್ಕರ ಎಂಬ ಸಾಲು ಅಣಕು ವ್ಯಂಗ್ಯವಾಗಿ ಸಾಮಾಜಿಕ ಕಠೋರ ವಾಸ್ತವವನ್ನು ತೆರೆದಿಡುತ್ತದೆ.

ಈ ಬರ್ಬರವಾದ ಕರಾಳ ವಾಸ್ತವದ ಸಾಮಾಜಿಕ ಹಂದರದ ಒಳಗೆ ಮಹಿಳಾ ರಾಜಕೀಯ ಮೀಸಲಾತಿಯ ತೊಡಕನ್ನು ನಿವಾರಿಸಿಕೊಳ್ಳುವುದು ಜಟಿಲವಾಗಿ ಪರಿಣಮಿಸಿದೆ. ಹಾಗಾಗಿಯೇ ಮಹಿಳಾ ಮೀಸಲಾತಿಯ ಪ್ರಶ್ನೆ ಬಂದಾಗ ಜಾರಿಕೊಳ್ಳುವ ಉತ್ತರವನ್ನಾಡುವ, ಬಿಲ್‌ನ್ನು ಹರಿದು ಹಾಕುವ, ಬಾಬ್‌ಕಟ್ ಮಹಿಳೆ ಎಂದು ವ್ಯಂಗ್ಯ ಮಾಡುವ, ಒಳಮೀಸಲಾತಿ-ಹಿಂದುಳಿದ ವರ್ಗಗಳ ಮೀಸಲಾತಿಗಳ ನೆಪಗಳನ್ನು ಸೃಷ್ಟಿಸುವ ಜಾಣ ರಾಜಕಾರಣವನ್ನು ಮಾಡಲಾಗುತ್ತಿದೆ. ವರ್ತಮಾನದ ರಾಜಕಾರಣದಲ್ಲಿ ಹೆಜ್ಜೆ ಹೆಜ್ಜೆಗೆ ಓಟ್ ಬ್ಯಾಂಕ್ ಮಾಡಿಕೊಳ್ಳಲು ಹವಣಿಸುತ್ತಿರುವ ವಿದ್ಯಮಾನವು ಹಣ ಹೆಂಡಗಳ ಜೊತೆಗೆ ಹೆಣ್ಣನ್ನು ಕೂಡ ವಸ್ತು ಪ್ರಪಂಚದಂತೆ ಬಳಸುತ್ತಿದೆ. ಜಾತಿ ರಾಜಕಾರಣವು ಪ್ರತಿಯೊಬ್ಬ ಸದಸ್ಯರಿಗೆ ಪಕ್ಷಗಳ ಟಿಕೆಟ್ ನೀಡುವಲ್ಲಿ ಮುಖ್ಯ ಮಾನದಂಡವಾಗುತ್ತಿದೆ. ಇದು ಪ್ರಸ್ತುತ ಸಂದರ್ಭದ ವಾಸ್ತವ ಚಿತ್ರಣವಾಗಿದೆ.

ಭಾರತ ಕಂಡ ಸಮರ್ಥ ಮಹಿಳಾ ರಾಜಕಾರಣಿ ಇಂದಿರಾಗಾಂಧಿಯ ಪ್ರತಿನಿಧಿತ್ವದ ಮಾದರಿ ಹಾಗೂ ಚರಿತ್ರೆಯಲ್ಲಿನ ಕಿತ್ತೂರು ರಾಣಿ ಚೆನ್ನಮ್ಮಳಂತಹ ಧೀರೋದಾತ್ತ ಮಾದರಿಗಳು ಮಹಿಳಾ ರಾಜಕಾರಣವನ್ನು ಸಮರ್ಥವಾಗಿ ಸಾರಿ ಹೇಳುತ್ತವೆ. ಹಾಗಾಗಿ ತೊಟ್ಟಿಲು ತೂಗುವ ಕೈ ದೇಶವನ್ನಾಳುವುದೇ ಎಂಬ ಸಾಂಪ್ರದಾಯಿಕ ವ್ಯಂಗ್ಯವನ್ನು ಹೇಳಲು ಸಾಧ್ಯವಿಲ್ಲವಾಗಿದೆ. ಸ್ಥಳೀಯ ಪಂಚಾಯತ್ ವ್ಯವಸ್ಥೆಯಲ್ಲಿನ ಆಡಳಿತಗಳ ಮಾದರಿಯು ಮಹಿಳಾ ರಾಜಕೀಯ ಪ್ರತಿನಿಧಿತ್ವವನ್ನು ಒಪ್ಪಿಕೊಂಡು ಮುನ್ನಡೆಯುತ್ತಿರುವಾಗ 'ಪ್ರತಿಭೆ', ಸಾಮರ್ಥ್ಯ, ಶಕ್ತಿತ್ವಗಳ ಕೊಂಕು ನುಡಿಗಳನ್ನು ಹೇಳಲಾಗುವುದಿಲ್ಲ. ಇತ್ತೀಚೆಗೆ ಶ್ರದ್ಧಾತ್ಮಕ ದುಡಿಮೆ, ಸಮಯನಿಷ್ಠೆ, ಪ್ರಾಮಾಣಿಕತೆ, ಕರ್ತವ್ಯ ಪಾಲನೆ, ಪ್ರಾವೀಣ್ಯತೆ ಹಾಗೂ ಕೌಶಲ್ಯಗಳಿಗೆ ಮಾದರಿಯಾಗಿ ಮಹಿಳೆಯರ ಆಯ್ಕೆಯನ್ನು ಒತ್ತಿ ಹೇಳಲಾಗುತ್ತಿದೆ. ಇತ್ತೀಚೆಗೆ ಕೆಲ ಕಂಪನಿಗಳಂತೂ ಮಹಿಳಾ ದುಡಿಮೆಗಾರರನ್ನೇ ಬಯಸುತ್ತಿವೆಯೆಂದು ಹೇಳಲಾಗುತ್ತಿದೆ. ಕೆಲವು ಅಧ್ಯಯನಗಳು ಮಹಿಳೆಯರ ಸಹಭಾಗಿತ್ವ ಹಾಗೂ ಪಾಲ್ಗೊಳ್ಳುವಿಕೆಯಿಂದಾಗಿ ಪ್ರತಿಫಲವು ಅಂದರೆ ಉತ್ಪಾದನೆಯು ಪುರುಷ ವರ್ಗಕ್ಕಿಂತ ಮೇಲ್ಮಟ್ಟದಲ್ಲಿರುವುದನ್ನು ದೃಢಪಡಿಸಿವೆ.

ಹಾಗಾಗಿ ಬಹುತೇಕ ಮಹಿಳೆಯ ವಿರುದ್ಧವಾಗಿ ಮಂಡಿಸಲಾಗುವ ಸಬೂಬುಗಳು ಯಾವುದೂ ಇಲ್ಲದಿರುವಾಗ ಮಹಿಳಾ ಮೀಸಲಾತಿಯ ಸಂದರ್ಭದಲ್ಲಿ ಮಹಿಳಾ ರಾಜಕಾರಣದ

ಪ್ರತಿನಿಧಿತ್ವವನ್ನು ಪ್ರಶ್ನಿಸುವ ಹಾಗಿಲ್ಲ. ಈ ನಿಟ್ಟಿನಲ್ಲಿ ಸಾಮಾಜಿಕವಾದ ಜಾಗೃತಿ ಉಂಟಾಗಿ ವಿಧಾನಸಭೆ ಮತ್ತು ಲೋಕಸಭೆಗಳಲ್ಲೂ ನ್ಯಾಯಯುತವಾದ ಮಹಿಳಾ ಮೀಸಲಾತಿ ಬಿಲ್ ಮಂಡಿತವಾಗಿ ಮಹಿಳಾ ಸಮುದಾಯವನ್ನು ತಲುಪಲಿ ಎಂದು ಆಶಿಸುವುದು ನಾಡಿನ ಪ್ರಜ್ಞಾವಂತರ ಕರ್ತವ್ಯವಾಗಿದೆ. ಅಷ್ಟೇ ಅಲ್ಲ ಇಂತಹ ಹೋರಾಟಗಳು ಮತ್ತು ಹಕ್ಕೊತ್ತಾಯಗಳನ್ನು ನಡೆಸುವಲ್ಲಿ ನಾಡಿನ ಚಿಂತಕರು - ಹೋರಾಟಗಾರರೆಲ್ಲರೂ ಪೂರಕವಾಗಿ ಪ್ರತಿಸ್ಪಂದಿಸಬೇಕಾದ ಒತ್ತಡವನ್ನು ರೂಪಿಸುವ ಮೂಲಕ 'ಮಹಿಳಾ ಮೀಸಲಾತಿ'ಗೆ ನ್ಯಾಯವನ್ನು ದೊರಕಿಸಿಕೊಡಬೇಕಾಗಿದೆ.

...

೫

# ಮಹಿಳಾ ಮೀಸಲಾತಿ - ಒಂದು ಪ್ರತಿಕ್ರಿಯೆ

## ಡಾ. ಸೂರ್ಯಕಾಂತ ಎಸ್. ಸುಜ್ಯಾತ್

ಭಾರತೀಯ ಪರಂಪರೆಯಲ್ಲಿ ಪ್ರಾಚೀನ ಕಾಲದಿಂದ ಇಂದಿನವರೆಗೂ ಹೆಣ್ಣನ್ನು ಮಾತೃದೇವೋಭವ, ಕ್ಷಮಯಾಧರಿತ್ರೀ, ಯತ್ರ ನಾರ್ಯಸ್ತು ಪೂಜ್ಯಂತೆ ತತ್ರ ದೇವತಾಃ, ಸರ್ವೇಜನಾ ಸುಖಿನೊ (ಈಗ ನ ಭವಂತು) ಭವಂತು ಎಂದೆಲ್ಲ ಕೊಂಡಾಡುವ, ಗುಣಗಾನ ಮಾಡುವ ಪರಿಪಾಠವಿರುವುದನ್ನು ನಾವು ಕಾಣುತ್ತೇವೆ. ಇಂತಹ ಅತ್ಯಂತ ಶ್ರೀಮಂತ ತತ್ತ್ವಗಳನ್ನು ಸಾರುತ್ತಲೇ ಮನುಷ್ಯ ಜೀವನದಲ್ಲಿಯೂ ಕಾಲಕ್ಕೆ ತಕ್ಕಂತೆ ಪರಿವರ್ತನೆ ಅನಿವಾರ್ಯ. ಆದರೆ ಸಾವಿರಾರು ವರ್ಷಗಳಿಂದ ಶೋಷಣೆಗೊಳಗಾದ ದಲಿತರಿಗೆ, ಹಿಂದುಳಿದವರಿಗೆ, ಆದಿವಾಸಿಗಳಿಗೆ, ಮಹಿಳೆಯರಿಗೆ ಮತ್ತು ಮಕ್ಕಳಿಗೆ ಅವರ ಹಕ್ಕುಗಳನ್ನು ನಿರಾಕರಿಸುತ್ತಾ ಅಜ್ಞಾನದ ಅಂಧಕಾರದಲ್ಲಿರಿಸಿದ ಕರಾಳ ಚರಿತ್ರೆ ಈ ದೇಶದ ಒಡಲಲ್ಲಿದೆ.

ಇಲ್ಲಿಯ ಪಟ್ಟಭದ್ರರಿಗೆ, ಪರಂಪರಾ ಪ್ರಿಯರಿಗೆ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವುದೆಂದರೆ ಪಂಚಪ್ರಾಣ, ಅದರಲ್ಲಿ ಬದಲಾವಣೆಯ ಗಾಳಿ ಸೋಕಿದರೂ ಸಾಕು, ಅಂದು ಸುಟ್ಟ ಬೆಕ್ಕಿನಂತಾಗುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಬದಲಾವಣೆಗಳಾದರೆ ಇಂತಹವರು ತಮ್ಮ ಸ್ಥಾನಮಾನಗಳಿಗೆ ಸಂಚಕಾರವೆಂದು ಪೂರ್ವಾಗ್ರಹಕ್ಕೂ ತಮ್ಮ ಪಾಲಿನ ಸುಖ ಸುಟ್ಟೇ ಹೋಗುತ್ತದೆ ಎಂಬಂತಹ ದಿಗಿಲಿಗೂ ಒಳಗಾಗುತ್ತಿದ್ದಾರೆ. ದೀನರು, ದಲಿತರು ಅದರಲ್ಲೂ ವಿಶೇಷವಾಗಿ ಮಹಿಳೆಯರು ಜಾಗೃತರಾಗಬಾರದು ಎಂದು ಅನಾದಿಕಾಲದಿಂದಲೂ ಅಧಿಕಾರಕ್ಕಾಗಿ ಹಪಹಪಿಸುವವರು, ಶ್ರಮವಹಿಸದೆ ಸುಖ ಬಯಸುವವರು, ಅಧಿಕಾರದಲ್ಲಿರುವ ರಾಜಕಾರಣಿಗಳು ಸತತ ಪ್ರಯತ್ನ ಶೀಲರಾದದ್ದು ಚರಿತ್ರೆಯಿಂದ ಸಾಬೀತಾಗುತ್ತದೆ. ಸ್ವಾತಂತ್ರ್ಯಾನಂತರ ಭಾರತೀಯ ಸಂವಿಧಾನ ಸರ್ವರಿಗೂ ಸಮಾನತೆ, ಸ್ವಾವಲಂಬನೆ, ಸ್ವಾತಂತ್ರ್ಯಗಳನ್ನು ಸಾರಿದೆಯಾದರೂ, ಪುರುಷ ಪ್ರಧಾನ ವ್ಯವಸ್ಥೆಯು ಅದನ್ನು ಕಾಗದದಲ್ಲಿಯೇ ಇರುವಂತೆ, ಕಾರ್ಯರೂಪಕ್ಕೆ ಬರದಂತೆ ನೋಡಿಕೊಳ್ಳುತ್ತಾ ಬರುತ್ತಿದೆ.

ಸ್ವಾತಂತ್ರ್ಯನಂತರ (೧೯೪೮ ಡಿಸೆಂಬರ್-೧೦) ವಿಶ್ವಸಂಸ್ಥೆ ಮಾನವ ಹಕ್ಕುಗಳ ಜಾಗತಿಕ ಘೋಷಣೆ "ಎಲ್ಲ ಮಾನವರು ಜನ್ಮತಃ ಸ್ವತಂತ್ರರು ಮತ್ತು ಸ್ಥಾನಮಾನಗಳಲ್ಲಿ ಸಮಾನ ಹಕ್ಕನ್ನು ಹೊಂದಿದ್ದಾರೆ" ಎಂದು ಸಾರುವ ಮೂಲಕ ಲಿಂಗಾಧಾರಿತ ತಾರತಮ್ಯವನ್ನು ವಿರೋಧಿಸಿದೆ. ಮಹಿಳೆಯರಿಗಾಗುವ ಅನ್ಯಾಯವನ್ನು ಖಂಡಿಸಿ ಸಮಾನ ಹಕ್ಕು, ಸಮಾನ ಸ್ವಾತಂತ್ರ್ಯ, ಸಮಾನ ಸ್ಥಾನಮಾನಗಳನ್ನು ಪ್ರತಿಪಾದಿಸಿದೆ. ೧೯೭೫ರ ವರ್ಷವನ್ನು ವಿಶ್ವಸಂಸ್ಥೆ ಅಂತಾರಾಷ್ಟ್ರೀಯ ಮಹಿಳಾ ವರ್ಷ ಎಂದು, ೧೯೮೫ರವರೆಗಿನ ದಶಕವನ್ನು ಮಹಿಳೆಯರ ಅಭಿವೃದ್ಧಿ ದಶಕ ಎಂದೂ ವಿಶ್ವಸಂಸ್ಥೆ ಘೋಷಿಸಿದೆ. ಮಹಿಳೆಯ ವಿರುದ್ಧದ ಎಲ್ಲ ರೀತಿಯ ಭೇದಭಾವ ನಿರ್ಮೂಲನಾ ಒಪ್ಪಂದವನ್ನು ವಿಶ್ವಸಂಸ್ಥೆಯ ಸಾಮಾನ್ಯ ಸಭೆಯು ೧೯೭೯ರ ಡಿಸೆಂಬರ್ ೧೮ ರಂದು ಅಂಗೀಕರಿಸಿದೆ. ೧೯೮೧ರ ಸೆಪ್ಟೆಂಬರ್ ೩ ರಂದು ಜಾರಿಗೆ ತರಲಾಗಿದೆ. ಈ ಒಪ್ಪಂದದ ಪ್ರಕಾರ ಎಲ್ಲ ರಾಜ್ಯ ಪಕ್ಷಗಳು ಪುರುಷ ಮತ್ತು ಮಹಿಳೆಯರ ಸಮಾನ ಹಕ್ಕುಗಳನ್ನು ಜಾರಿಗೊಳಿಸಬೇಕು. ಲಿಂಗ ಆಧಾರದ ಮೇಲೆ ತಾರತಮ್ಯ ಮಾಡಬಾರದು. ಪುರುಷ ಮತ್ತು ಮಹಿಳೆಯರಿಗೆ ಸಮಾನವಾಗಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ನಾಗರಿಕ ಹಾಗೂ ರಾಜಕೀಯ ಹಕ್ಕುಗಳನ್ನು ಜಾರಿಗೊಳಿಸಬೇಕು. ಲಿಂಗ ಆಧಾರದ ಮೇಲೆ ತಾರತಮ್ಯ ಮಾಡಬಾರದು. ಪುರುಷ ಮತ್ತು ಮಹಿಳೆಯರಿಗೆ ಸಮಾನವಾಗಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ನಾಗರಿಕ ಹಾಗೂ ರಾಜಕೀಯ ಹಕ್ಕುಗಳನ್ನು ನೀಡಬೇಕು ಎಂದು ಸ್ಪಷ್ಟವಾಗಿ ಸಾರಲಾಗಿದೆ. ಇಷ್ಟಾಗಿಯೂ ಈ ದೇಶದ ಪುರುಷ ವ್ಯವಸ್ಥೆ ಸ್ತ್ರೀ ಸಮೂಹವನ್ನು ಕಡೆಗಣಿಸುತ್ತಲೇ ಬರುತ್ತಿದೆ. ಆಗಸ್ಟ್ ಬೆಬೆಲ್ ಹೇಳುವಂತೆ 'ಜಗತ್ತಿನಲ್ಲಿ ಮೊಟ್ಟ ಮೊದಲ ಶೋಷಿತ ಮಹಿಳೆ'. ಇಂದಿಗೂ ಇದು ಅಂಗೈ ಹುಣ್ಣಿನಷ್ಟೇ ಸತ್ಯ.

### ಹಿಂದೂ ಕೋಡ್ ಬಿಲ್

ಡಾ. ಅಂಬೇಡ್ಕರ್ ೧೯೪೮ರ ಅಕ್ಟೋಬರ್‌ನಲ್ಲಿ ಮಹಿಳೆಯರ ಒಟ್ಟು ಬದುಕಿನ ಅಭಿವೃದ್ಧಿಗಾಗಿ ಪರಿವರ್ತನಾ ಸೂತ್ರವಾದ ಹಿಂದೂ ಕೋಡ್ ಬಿಲ್ ಕರಡು ತಯಾರಿಸಿ ಕೇಂದ್ರ ಸಂಸತ್ತಿನಲ್ಲಿ ಸಲ್ಲಿಸಿದರು. ಈ ಕುರಿತು ಹಲವಾರು ವರ್ಷಗಳ ಕಾಲ ಚರ್ಚೆ ನಡೆಯಿತು. ೧೯೫೧ರಲ್ಲಿ ಈ ಬಿಲ್ ಪರಿಶೀಲನೆ ನಡೆಯಿತು. ಯಥಾಸ್ಥಿತಿ ವಾದಿಗಳ ಕೈ ಮೇಲಾಗಿ ಮಸೂದೆ ತಿರಸ್ಕೃತವಾಯಿತು. ಇದರಿಂದ ಬೇಸತ್ತ ಅಂಬೇಡ್ಕರರು ಸೆಪ್ಟೆಂಬರ್ ೨೭, ೧೯೫೧ರಂದು ಸಂಪುಟ ಸಚಿವ ಪದವಿಗೆ ರಾಜೀನಾಮೆ ಸಲ್ಲಿಸಿ ಹೊರಬಂದರು.

ಸ್ವಾತಂತ್ರ್ಯಾನಂತರದಲ್ಲಂತೂ ಮಹಿಳೆಯರು ವಿವಿಧ ರಂಗಗಳಲ್ಲಿ ವಿಶಿಷ್ಟ ಸಾಧನೆ ಮಾಡುವ ಮೂಲಕ ತಮ್ಮ ಯೋಗ್ಯತೆಯನ್ನು ಸಾಬೀತುಪಡಿಸಿದ್ದಾರೆ. ಆದರೂ ಮಹಿಳೆಯ ಕುರಿತಿರುವ ಸಮಾಜದ ದೃಷ್ಟಿಕೋನ ಬದಲಾಗಿಲ್ಲ. ಮತ ಹಾಕುವ ಹಕ್ಕಿಗಾಗಿಯೇ ಜಗತ್ತಿನಾದ್ಯಂತ ಮಹಿಳೆ ಸತತ ಹೋರಾಡಬೇಕಾಯಿತು. ಕ್ರಿ.ಶ. ೧೮೪೮ರ ಸುಮಾರಿನಲ್ಲಿ ನ್ಯೂಯಾರ್ಕ್‌ನಲ್ಲಿ ಮಹಿಳೆಯರು ಮತದಾನದ ಹಕ್ಕಿಗಾಗಿ ಚಳವಳಿ ನಡೆಸಿದರು. ೧೯೨೦ರ ಸಮಯದಲ್ಲಿ ಕೇವಲ ೧೫ ರಾಷ್ಟ್ರಗಳಲ್ಲಿ ಮಾತ್ರ ಮಹಿಳೆಯರಿಗೆ ಮತದಾನದ ಹಕ್ಕು ದೊರೆಯಿತು. 'ನ್ಯೂಜಿಲೆಂಡ್ ರಾಷ್ಟ್ರ

೧೮೯೩ರಲ್ಲಿ ಪ್ರಥಮ ಬಾರಿಗೆ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿತು. ೧೯೨೮ರಲ್ಲಿ ಬ್ರಿಟನ್, ೧೯೩೨ರಲ್ಲಿ ಥೈಲ್ಯಾಂಡ್, ೧೯೩೫ರಲ್ಲಿ ಫಿಲಿಪೀನ್ಸ್, ದ್ವಿತೀಯ ಮಹಾಯುದ್ಧದ ನಂತರ ಫ್ರಾನ್ಸ್, ಗ್ರೀಸ್, ಇಟಲಿ, ೧೯೪೬ರಲ್ಲಿ ಜಪಾನ್, ವಿಯೆಟ್ನಾಂ, ೧೯೪೭ರಲ್ಲಿ ತೈವಾನ್, ೧೯೪೮ರಲ್ಲಿ ಮ್ಯಾನ್ಮಾರ್, ೧೯೪೯ರಲ್ಲಿ ಚೀನ, ೧೯೫೦ರಲ್ಲಿ ಭಾರತ, ೧೯೫೪ ರಲ್ಲಿ ಕಾಂಬೋಡಿಯಾ, ೧೯೫೫ರಲ್ಲಿ ಇಂಡೋನೇಷಿಯ, ೧೯೫೭ರಲ್ಲಿ ಮಲೇಷಿಯ, ೧೯೬೨ರಲ್ಲಿ ಹಾಂಗ್‌ಕಾಂಗ್, ೧೯೭೨ರಲ್ಲಿ ಬಾಂಗ್ಲಾದೇಶ, ೧೯೭೬ರಲ್ಲಿ ಪೋರ್ಚುಗಲ್ ದೇಶ ಗಳು ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿದವು.[೧] ಮತದಾನದ ಹಕ್ಕು ಬೇಕಾದರೆಯೇ ಮಹಿಳೆಯರು ಇಷ್ಟೊಂದು ಹೋರಾಟ ಮಾಡಬೇಕಾಯಿತು.

೧೯೭೭ರಲ್ಲಿ ಭಾರತ ಸರ್ಕಾರ ಮಹಿಳೆಯರ ಆತ್ಮಗೌರವವನ್ನು ಕಾಪಾಡಲು ಒಂದು ಸಮಿತಿ ಯನ್ನು ನೇಮಿಸಿ, ಅದರ ಅಧ್ಯಯನದ ವರದಿಯನ್ನು ಪರಿಶೀಲಿಸಿ, ೧೯೯೨ರಲ್ಲಿ ರಾಷ್ಟ್ರೀಯ ಮಹಿಳಾ ಆಯೋಗವೆಂಬುದನ್ನು ರಚಿಸಿತು. ಪ್ರತಿಯೊಂದು ರಾಜಕೀಯ ಪಕ್ಷವೂ ನಿರ್ದಿಷ್ಟ ಪ್ರಮಾಣದಲ್ಲಿ ಸ್ಥಾನಮಾನಗಳನ್ನು ಮಹಿಳಾ ಅಭ್ಯರ್ಥಿಗಳಿಗೆ ಮೀಸಲಿರಿಸಬೇಕೆಂದು ೧೩ನೆಯ ಲೋಕಸಭೆಯವರೆಗೂ ಮಹಿಳಾ ಪ್ರಾತಿನಿಧ್ಯ ಹೀಗಿದೆ. ೪೯೯ ಲೋಕಸಭಾ ಸ್ಥಾನಗಳಲ್ಲಿ ೧೯೫೨ ರಲ್ಲಿ ಮಹಿಳೆಯರ ಸಂಖ್ಯೆ ೨೨(ಶೇ.೪.೪೦), ೧೯೬೭ರಲ್ಲಿ ೫೨೩ ಸ್ಥಾನಗಳಲ್ಲಿ ೩೧(ಶೇ. ೫.೯೨), ೧೯೮೦ರಲ್ಲಿ ೫೪೪ ಸ್ಥಾನಗಳಲ್ಲಿ ೨೮(ಶೇ. ೫.೧೪), ೧೯೮೫ರಲ್ಲಿ ೫೪೪ ಸ್ಥಾನ ಗಳಲ್ಲಿ ೪೪(ಶೇ. ೮), ೧೯೯೦ರಲ್ಲಿ ೫೪೩ ಸ್ಥಾನಗಳಲ್ಲಿ ೪೧(ಶೇ. ೭.೫೫), ೧೯೯೯ರಲ್ಲಿ ೫೪೩ ಸ್ಥಾನಗಲ್ಲಿ ೪೦(ಶೇ. ೭.೩೬) ಸ್ಥಾನಗಳಷ್ಟು ಮಹಿಳೆಯರು ಆಯ್ಕೆಯಾಗಿದ್ದಾರೆ.

ಇಂದಿಗೂ ರಾಷ್ಟ್ರ ಮತ್ತು ರಾಜ್ಯಮಟ್ಟದ ರಾಜಕೀಯದಲ್ಲಿ ಮಹಿಳಾ ಮೀಸಲಾತಿಗಾಗಿ ಚರ್ಚೆ-ವಾದ-ವಿವಾದಗಳು ನಡೆಯುತ್ತಲೇ ಇವೆ. ೧೯೯೩ರಲ್ಲಿಯ ಸಂವಿಧಾನದ ೭೩ ಹಾಗೂ ೭೪ನೆಯ ತಿದ್ದುಪಡಿ ಒಂದು ವಿಶಿಷ್ಟ ಮೈಲಿಗಲ್ಲು. ಅದು ಪಂಚಾಯತ್‌ರಾಜ್ ಕಾಯ್ದೆ. ಆ ಮೂಲಕ ಪಂಚಾಯತಿ ಸಂಸ್ಥೆಗಳಲ್ಲಿ ಶೇ. ೩೩%ರಷ್ಟು ಮಹಿಳೆಯರಿಗೆ ಮೀಸಲಾತಿ ಕ್ರಮಕೈಗೊಂಡದ್ದು ಹಿಂದೆಂದೂ ಕಾಣದಂತಹ ಹೊಸ ಇತಿಹಾಸ. ಆರಂಭವಾದ ದಿನಗಳಲ್ಲಿ ಮಹಿಳೆ ಸ್ಪರ್ಧಿಸಲು ಹಿಂಜರಿಕೆ, ನಂತರ ೧೯೮೭ರಲ್ಲಿ ಶೇ. ೨೫ರಷ್ಟು ಸ್ಥಾನ ಮಹಿಳಾ ಮೀಸಲು ಘೋಷಣೆ. ಕರ್ನಾಟಕದಲ್ಲಿ ಆಗ ೧೪ ಸಾವಿರ ಮಹಿಳೆಯರು ಆರಿಸಿ ಬಂದರು. ೨೦೦೦ದ ಫೆಬ್ರವರಿ ೨೩-೨೪ರಂದು ಕರ್ನಾಟಕದಲ್ಲಿ ನಡೆದ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳ ಮೀಸಲಾತಿಯನ್ನೂ ರಾಜ್ಯ ಚುನಾವಣಾ ಆಯೋಗ ಪ್ರಕಟಿಸಿತು. ಮಹಿಳೆಯರಿಗೆ ಶೇ. ೩೭.೮೮ರಷ್ಟು ಸ್ಥಾನಗಳನ್ನು ನಿಗದಿಪಡಿಸಿತು.

ಈ ಎಲ್ಲವುಗಳ ಹಿನ್ನೆಲೆಯಲ್ಲಿ ಪ್ರತಿಶತ ೩೩ರಷ್ಟು ಮಹಿಳಾ ಮೀಸಲಾತಿಯನ್ನು ಲೋಕಸಭೆ ಹಾಗೂ ರಾಜ್ಯಸಭೆಗಳಲ್ಲಿ ನೀಡಬೇಕೆಂದು ಹೋರಾಟಗಳು ನಡೆದವು. ದೇವೇಗೌಡ (ಯುನೈಟೆಡ್ ಫ್ರಂಟ್) ಸರ್ಕಾರ ಮಸೂದೆಯನ್ನು ಸಂಸತ್ತಿನ ಜಂಟಿ ಸದನದ ಮುಂದೆ ತಂದರು. ೧೯೯೬ರ ಡಿಸೆಂಬರ್ ೯ ರಂದು ೧೧ನೇ ಲೋಕಸಭೆಯ ಜಂಟಿ ಅಧಿವೇಶನ ತನ್ನ ವರದಿಯನ್ನು ಮಂಡಿ ಸಿತು. ೧೯೯೮ರ ಜೂನ್ ೨೬ರಂದು ೧೨ನೆಯ ಲೋಕಸಭೆ ಅಧಿವೇಶನದಲ್ಲಿ ವಾಜಪೇಯಿ

ಸರ್ಕಾರದ (ನ್ಯಾಷನಲ್ ಡೆಮಾಕ್ರಟಿಕ್ ಅಲಾಯನ್ಸ್) ಅವಧಿಯಲ್ಲಿ ಅದನ್ನು ಮರುಮಂಡನೆ ಮಾಡಲಾಯಿತು. ಮುಂದೆ ೧೩ನೇ ಲೋಕಸಭೆಯೂ ಮತ್ತೊಮ್ಮೆ ಮಂಡಿಸಲಾಯಿತು. ಮತ್ತೆ ೨೦೦೨, ೨೦೦೩ರಲ್ಲಿಯೂ ಎರಡು ಬಾರಿ ಸಂಸತ್ತಿನೆದುರು ಈ ಮಹಿಳಾ ಮೀಸಲಾತಿ ವರದಿಯನ್ನು ಇಡಲಾಯಿತು.

ಲೋಕಸಭೆಯಲ್ಲಿ ಬಹುಮತ ಇದ್ದಾಗಲೂ ಕೂಡ ಎನ್.ಡಿ.ಎ. ಸರ್ಕಾರ ಈ ಮಹಿಳಾ ಮೀಸಲಾತಿ ಬಿಲ್‌ಪಾಸ್ ಮಾಡಲು ಸಾಧ್ಯವಾಗಲಿಲ್ಲ. ೨೦೦೪ರಲ್ಲಿ ಯು.ಪಿ.ಎ. (ಮನ ಮೋಹನ್ ಸಿಂಗ್) ಸರ್ಕಾರ ಶೇ. ೩೩ರ ಮಹಿಳಾ ಮೀಸಲಾತಿ ಮಸೂದೆಯನ್ನು ಅಂಗೀಕರಿಸುವ ಇಚ್ಛಾಶಕ್ತಿ ತೋರಿಸಿದರೂ ಅದನ್ನು ಲೋಕಸಭೆಯಲ್ಲಿ ಮಂಡಿಸುವಲ್ಲಿ ವಿಫಲವಾಯಿತು.

### ಪರ-ವಿರೋಧಗಳು

ಮಹಿಳಾ ಮೀಸಲಾತಿ ಪರವಾದಿಗಳ ಅಭಿಪ್ರಾಯದಂತೆ ಈ ಮೀಸಲಾತಿ ಮಸೂದೆ ಜಾರಿಯಾದರೆ ಲಿಂಗ ತಾರತಮ್ಯ ಕಡಿಮೆಯಾಗುತ್ತದೆ. ಮಹಿಳೆಯರ ಮೇಲಿನ ದೌರ್ಜನ್ಯ ಕಡಿಮೆಯಾಗುತ್ತದೆ. ಅವರಿಗೆ ಅವರ ಹಕ್ಕು ದೊರಕುತ್ತದೆ, ಸಮಾನತೆ ಬರುತ್ತದೆ ಎಂಬುದು. ಇತ್ತ ವಿರೋಧಿಸುವ ರಾಜಕೀಯ ಪಕ್ಷದವರು ತಮ್ಮ ಅವಕಾಶ ತಪ್ಪುತ್ತದೆ ಎಂದೂ ಸಾಮಾಜಿಕ, ಆರ್ಥಿಕವಾಗಿ ಹಿಂದುಳಿದ ವರ್ಗಗಳ ರಾಜಕೀಯ ಮುಖಂಡರು ಇದು ಬರೀ ಕಡೆಗಣಿಸಲ್ಪಟ್ಟ ಮಹಿಳೆಯು ಮಾತ್ರ ಸೀಟು ಪಡೆಯಲು ಕಾರಣವಾಗುತ್ತದೆ ಎಂದು ವಾದಿಸುತ್ತಾರೆ.

ಈ ಮಹಿಳಾ ಮೀಸಲಾತಿ ಮಸೂದೆಯನ್ನು ವಿರೋಧಿಸುವ ಪ್ರಮುಖ ರಾಜಕೀಯ ಪಕ್ಷಗಳು ರಾಷ್ಟ್ರೀಯ ಜನತಾದಳ (ಲಾಲುಪ್ರಸಾದ್ ಯಾದವ) ಹಾಗೂ ಸಮಾಜವಾದಿ ಪಕ್ಷ (ಮುಲಾಯಂಸಿಂಗ್ ಯಾದವ). ಮುಲಾಯಂಸಿಂಗ್ ಯಾದವ ಅವರು 'ಮಹಿಳಾ ಮೀಸಲಾತಿ ಪಾರ್ಲಿಮೆಂಟ್‌ನ ನಡವಳಿಕೆಯನ್ನು ಕೆಡಿಸುತ್ತದೆ. ಬಡವರ ಮತ್ತು ಕೃಷಿಕ ಜನಸಮುದಾಯಗಳನ್ನು ಇದು ಪ್ರತಿನಿಧಿಸುತ್ತದೆ. ಈಗಾಗಲೇ ಪಂಚಾಯತ್‌ಗಳಲ್ಲಿ ಸ್ಥಳೀಯ ಕಾರ್ಯಕಾರಿ ಸದಸ್ಯರು ಮಹಿಳೆಯರಾದ್ದರಿಂದ ಅವರ್‍ಯಾರೂ ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅಯೋಗ್ಯರು ಎಂದು ಸಾಬೀತಾಗಿದೆ, ಅವರಿಗೆ ೧೦%ರಷ್ಟು ಚುನಾವಣೆಗೆ ಟಿಕೆಟ್ ನೀಡಬೇಕು' ಎಂದು ಅಭಿಪ್ರಾಯ ಪಡುತ್ತಾರೆ. ಲಾಲೂಪ್ರಸಾದ ಯಾದವ ಅವರು ಮಹಿಳಾ ಮೀಸಲಾತಿ ಶೇ. ೧೦ ರಿಂದ ೧೫ ಪ್ರತಿಶತ ಇರಬೇಕೆಂಬುದರ ಪರ ನಿಲುವು ಉಳ್ಳವರು, "ನನ್ನ ಪಕ್ಷ ಮಹಿಳಾ ಮೀಸಲಾತಿಯನ್ನು ವಿರೋಧಿಸುವುದಿಲ್ಲ. ಅದರಲ್ಲಿ ದಲಿತ, ಹಿಂದುಳಿದ ವರ್ಗ, ಮುಸ್ಲಿಂ ಮತ್ತು ಅಲ್ಪಸಂಖ್ಯಾತರನ್ನು ಕಡೆಗಣಿಸಬಾರದು" ಎಂದು ಅವರ ವಾದ.

### ಒಟ್ಟಾರೆ

ಈ ಮೇಲಿನ ಇಬ್ಬರು ಮುಖಂಡರ ಹಾಗೂ ಇನ್ನೂ ಕೆಲವರ ವಾದವೆಂದರೆ ಪರಿಶಿಷ್ಟ ಜಾತಿಯವರಿಗೆ ಶೇ. ೫, ಪರಿಶಿಷ್ಟ ಪಂಗಡಕ್ಕೆ ಶೇ. ೧, ಹಿಂದುಳಿದ ವರ್ಗಕ್ಕೆ ಶೇ. ೬, ಅಲ್ಪಸಂಖ್ಯಾತರಿಗೆ ಶೇ. ೬, ಇತರೆ ಹಿಂದುಳಿದ ವರ್ಗ (ಓ.ಬಿ.ಸಿ.)ಗಳಿಗೆ ಶೇ. ೨, ಉಳಿದ

ಶೇ. ೧೩% ಎಲ್ಲ ಸಾಮಾನ್ಯ ವರ್ಗ. ಹೀಗೆ ನಿರ್ದಿಷ್ಟ ಪ್ರಮಾಣದಲ್ಲಿ ಮೀಸಲಾತಿ ನೀಡಬೇಕು ಎಂಬುದು.

ಸಾವಿರಾರು ವರ್ಷಗಳಿಂದ ಮಹಿಳೆ ಅನುಭವಿಸಿದ ಆತಂಕ, ತಲ್ಲಣ, ತಳಮಳಗಳು ಒಂದೆಡೆಯಾದರೆ, ದಲಿತ-ಅಸ್ಪೃಶ್ಯ ಮಹಿಳೆಯ ಅನುಭವ ಅದಕ್ಕಿಂತ ಕಠೋರವಾದದ್ದು. ಕಬ್ಬಿಣದ ಆಭರಣ ತೊಡಬೇಕಾಗಿದ್ದ, ಹೆಣದ ಮೇಲಿನ ಬಟ್ಟೆಯನ್ನೇ ಧರಿಸಬೇಕಾಗಿದ್ದ, ಒಡೆದ ಮಣ್ಣಿನ ಮಡಕೆಯೇ ಊಟಕ್ಕೆ ಬಳಸಬೇಕಾಗಿದ್ದ, ಕತ್ತೆ, ನಾಯಿ, ಹಂದಿಗಳೇ ಆಸ್ತಿಯಾಗಿ ಇಟ್ಟುಕೊಳ್ಳಬೇಕಾಗಿದ್ದ ಪರಿಸ್ಥಿತಿ ಪರಿಸರವನ್ನು ಅನುಭವಿಸಿದವರು ದಲಿತರು, ದಲಿತ ಮಹಿಳೆಯರು. ಹೀಗಾಗಿ ಈ ಮಹಿಳಾ ಮೀಸಲಾತಿ ಹೋರಾಟದಲ್ಲಿ ದಲಿತ ಮಹಿಳೆಯ ಪಾಲು ತಪ್ಪಿ ಹೋಗಬಾರದು. ಅವಳ ಪಾಲಿನ ಮೀಸಲಾತಿಗೆ ಧಕ್ಕೆಯೇನಿಲ್ಲ ಎನ್ನುವುದಾದರೆ ಈ ಶೇ. ೩೩ರ ಮಹಿಳಾ ಮೀಸಲಾತಿಗೆ ತಮ್ಮದೇನೂ ಅಭ್ಯಂತರವಿಲ್ಲ ಎಂಬುದು ಕೇವಲ ತಾರ್ಕಿಕರವಾದ.

ಒಟ್ಟಾರೆ ಮಹಿಳೆಯರಿಗೆ ಶೇ. ೩೩ರಷ್ಟು ಮೀಸಲಾತಿಯನ್ನು ಲೋಕಸಭೆಯಲ್ಲಿ ನೀಡುವುದರಿಂದ ವೈಯಕ್ತಿವಾಗಿ ಮಹಿಳೆಯ ಮೇಲಾಗುವ ಅನೇಕ ಅನ್ಯಾಯಗಳನ್ನು ತಪ್ಪಿಸಬಹುದು. ಅಷ್ಟೇ ಅಲ್ಲ ಒಟ್ಟು ವ್ಯವಸ್ಥೆಯಲ್ಲಿ ಹೊಸತನವನ್ನು ತರಲು ಸಾಧ್ಯವಿದೆ. ಸರ್ಕಾರ ಈ ಕಾರ್ಯ ಬೇಗ ಕೈಗೆತ್ತಿಕೊಂಡರೆ ಒಳ್ಳೆಯದು.

...

೬

# ಮಹಿಳಾ ಮೀಸಲಾತಿ - ಒಂದು ಚಾರಿತ್ರಿಕ ಅವಲೋಕನ

ಡಾ. ರಾಮ್ ಕಲಾಲ್

ಕಳೆದ ಒಂದೂವರೆ ದಶಕದಿಂದಲೂ ನೆನೆಗುದಿಗೆ ಬಿದ್ದಿರುವ ಮಹಿಳಾ ಮೀಸಲಾತಿಯ ಉದ್ದೇಶ ರಾಜ್ಯ ವಿಧಾನಸಭೆ ಮತ್ತು ಲೋಕಸಭೆಯಲ್ಲಿ ಮಹಿಳೆಯರಿಗಾಗಿ ಶೇ. ೩೩%ರ ಅವಕಾಶ ಒದಗಿಸಿಕೊಡುವುದಾಗಿದೆ. ಈ ಮೀಸಲಾತಿ ಮಸೂದೆ ಮತ್ತೆ ವ್ಯಾಪಕವಾಗಿ ಇಂದು ಚರ್ಚೆಯಾಗುತ್ತಿದೆ. ಕೇಂದ್ರದಲ್ಲಿ ಅಧಿಕಾರ ನಡೆಸುತ್ತಿರುವ ಕಾಂಗ್ರೆಸ್ ಪಕ್ಷ ಮಹಿಳಾ ಮೀಸಲಾತಿಯನ್ನು ರಾಜ್ಯಸಭೆಯಲ್ಲಿ ಮಂಡಿಸುವ ಮೂಲಕ ತಾನು ಮಹಿಳಾ ಪರ ಕಾಳಜಿಯನ್ನು ಹೊಂದಿದ್ದೇನೆ ಎಂದು ತೋರ್ಪಡಿಸಿತು. ತದನಂತರದಲ್ಲಿ ಮೀಸಲಾತಿಯ ಕಡು ವಿರೋಧಿಗಳಾದ ಲಾಲು, ಮುಲಾಯಂಸಿಂಗ್ ಮತ್ತು ಶರದ್‌ಯಾದವ್ ಹಾಗೂ ಇತರ ಬಿಎಸ್‌ಪಿ ಪಕ್ಷದ ಸಂಸದರು ಮಸೂದೆಯ ಮಂಡನೆಯ ಸಮಯದಲ್ಲಿ ಅನಾಗರಿಕರಂತೆ ವರ್ತಿಸಿ ಮತ್ತೆ ಈ ಮಸೂದೆ ನೆನೆಗುದಿಗೆ ಬೀಳುವಂತೆ ಮಾಡಿದರು. ಮಹಿಳಾ ಮೀಸಲಾತಿ ಜಾರಿಯಾದರೆ ಕೇವಲ ಶ್ರೀಮಂತ ಮಹಿಳೆಯರ ಪಾಲಾಗುತ್ತದೆ ಎಂಬ ಪೊಳ್ಳು ನೆಪವನ್ನು ಮುಂದೊಡ್ಡಿ ಒಳಮೀಸಲಾತಿ ನೀಡುವಂತೆ ಗುಲ್ಲೆಬ್ಬಿಸಿದರು. ಇಷ್ಟೇ ಅಲ್ಲದೆ ರಾಜ್ಯಸಭಾಧ್ಯಕ್ಷರತ್ತ ಹೋಗಿ ಮಸೂದೆಯ ಪೇಪರ್‌ಗಳನ್ನು ಅವರತ್ತ ಎಸೆದಿದ್ದಲ್ಲದೆ ಅವರ ಮೇಲೆ ಹಲ್ಲೆ ಮಾಡಲೂ ಹಿಂಜರಿಯದಿದ್ದುದು ಘೋರ ಅಪರಾಧವೇ ಸರಿ. ಇವರಿಗೆ ಮಹಿಳೆಯರ ಪರ ಕಾಳಜಿ ಎಷ್ಟರಮಟ್ಟಿಗೆ ಇದೆ ಎಂಬುದು. ಪ್ರತಿ ಸಾರಿಯೂ ಒಂದಲ್ಲ ಒಂದು ಕಾರಣದಿಂದ ಇದನ್ನು ವಿರೋಧಿಸುತ್ತಿದ್ದ ಇತರ ಪಕ್ಷಗಳು ಸಮಾನ ವೇದಿಕೆಯೆಡೆಗೆ ಬಂದು ಮಹಿಳಾ ಪರ ನಿಂತವು. ಆದರೆ ಕೆಲವು ಡೊಂಗಿ ಪಕ್ಷಗಳ ಒತ್ತಡದಿಂದ ಇದು ಮತ್ತೆ ಮುಂದೂಡುವ ಎಲ್ಲ ಲಕ್ಷಣಗಳು ಕಾಣಿಸುತ್ತಿವೆ. ಏಕೆಂದರೆ ಸ್ವತಃ ಆಡಳಿತ ಪಕ್ಷದ ಕೆಲವು ಸಂಸದರು ಸಂಸತ್ತಿನಿಂದ ಹೊರಬರುವಾಗಿ ಈ ವಿರೋಧಿಗಳೊಂದಿಗೆ ಕೈ ಕೈ ಹಾಕಿಕೊಂಡು ಬಂದ ಸನ್ನಿವೇಶ ಗಮನಿಸಿದರೆ ಆಡಳಿತ ಪಕ್ಷದೊಳಗೂ ಕೂಡ ಇದರ ವಿರುದ್ಧ ಅಪಸ್ವರ ಇದೆ ಎಂಬುದು ತಿಳಿಯುತ್ತದೆ.

ಈ ಯಾದವತ್ರಯರು ಸೃಷ್ಟಿಸಿದ ರಾದ್ಧಾಂತದಿಂದ ಮಹಿಳಾ ಮೀಸಲಾತಿ ಗೊಂದಲಕ್ಕೆ ಈಡಾಗಿದೆ. ಅಷ್ಟಕ್ಕೂ ಇವರ ಬಹುಮುಖ್ಯ ಬೇಡಿಕೆಯಾದರೂ ಏನು? ಮುಸ್ಲಿಂ ಮಹಿಳೆಗೆ ಹಾಗೂ ಇತರ ಪರಿಶಿಷ್ಟ ಹಿಂದುಳಿದ ವರ್ಗಗಳಿಗೂ ಒಳ ಮೀಸಲಾತಿ ನೀಡಬೇಕು ಇಲ್ಲ ವಾದರೆ ಇದು ಕೇವಲ ಸ್ಥಿತಿವಂತರ ಪಾಲಾಗುವುದು ಎಂಬ ಆರೋಪ. ಇದು ಸತ್ಯವೂ ಇರ ಬಹುದು. ಆದರೆ ಮೊದಲು ಮೀಸಲಾತಿಯಾದರೂ ದೊರೆಯುವಂತಾದರೆ ಮುಂದಿನ ದಿನಮಾನ ಗಳಲ್ಲಿ ಇದು ಅಸಾಧ್ಯವಾದದ್ದೇನಲ್ಲ ಎಂದು ಕಾನೂನು ಸಚಿವರೆ ಹೇಳಿದ್ದಾರಲ್ಲ. ಒಂದು ಗಮನಿಸ ಬೇಕಾದ ವಿಷಯ ಏನೆಂದರೆ ಇಷ್ಟೆಲ್ಲ ಗುಲ್ಲೆಬ್ಬಿಸುತ್ತಿರುವ ಈ ಪಕ್ಷಗಳಲ್ಲಿ ಮಹಿಳೆಯರಿಗೆ ಎಷ್ಟರ ಮಟ್ಟಿಗೆ ಅವಕಾಶ ಸಿಕ್ಕಿದೆ ಎಂಬುದನ್ನು ಅವಲೋಕಿಸಿದರೆ ಈ ಪಕ್ಷಗಳಲ್ಲಿನ ವಾಸ್ತವ ಡಾಂಬಿಕ ನಾಟಕ ಬಯಲಿಗೆ ಬರುತ್ತದೆ. ಏಕೆಂದರೆ ಮಾನ್ಯ ಮುಲಾಯಂಸಿಂಗ್‌ರು ತಾರಾ ವರ್ಚಸ್ಸಿನ ಜಯ ಬಚ್ಚನ್ ಹಾಗೂ ಜಯಪ್ರದ ಹೋದಲೆಲ್ಲ ಮಹಿಳೆಯರ ಪ್ರತಿನಿಧಿಗಳನ್ನಾಗಿ ಇವರನ್ನು ಮಾತ್ರ ಬಿಂಬಿಸಿದ್ದನ್ನು ಬಿಟ್ಟರೆ ಉಳಿದಂತೆ ಮಹಿಳೆ ಪರವಾಗಿ ಯಾವ ಸಂಸದೆಯರನ್ನು ಹೊಂದಿಲ್ಲ. ಅಲ್ಲದೆ ಸಂಸದ್‌ಗೆ ಪ್ರವೇಶಿಸಿದ ಇತರ ಮಹಿಳೆಯರಲ್ಲಿ ಇವರ ಸೊಸೆ ಮತ್ತು ಸೋದರ ಸಂಬಂಧಿಯೊಬ್ಬರು ಮಾತ್ರ ಪಕ್ಷದಲ್ಲಿದ್ದಾರೆ. ಹಾಗೆಯೇ ಲಾಲು ಪ್ರಸಾದ್‌ಯಾದವರದು ಕೂಡ ಇದೇ ಕಾರ್ಯತಂತ್ರವಿದೆ. ಅಧಿಕಾರ ಕೈತಪ್ಪುವ ಭಯದಿಂದ ನಾಲ್ಕನೆಯ ಇಯತ್ತೆಯವರೆ ಕಲಿತ ರಾಬಡಿದೇವಿಯವರೆ ಇವರ ಪಕ್ಷದೊಳಗಿನ ಏಕೈಕ ಮಹಿಳಾ ಪ್ರತಿನಿಧಿ. ಈ ನಾಯಕರು ಗಳಿಗೆ ನಿಜವಾದ ಒಳಮೀಸಲಾತಿಯ ಉದ್ದೇಶವಿದ್ದರೆ ಮುಸ್ಲಿಂ, ಪರಿಶಿಷ್ಟ, ಹಿಂದುಳಿದ ವರ್ಗ ಗಳ ಮಹಿಳೆಯರಿಗೆ ತಮ್ಮ ಪಕ್ಷದಲ್ಲಿ ಅವಕಾಶ ಕಲ್ಪಿಸಿದ್ದಾಗಲಿ ಅಥವಾ ಉನ್ನತ ಹುದ್ದೆಗಳನ್ನು ನೀಡಿದ್ದಾಗಲಿ ಇಲ್ಲ. ಇಲ್ಲಿಯೂ ಕೂಡ ಉನ್ನತ ವರ್ಗಗಳ ಮಹಿಳೆಯರಿಗೆ ಅಲ್ಪಸ್ವಲ್ಪ ಮಣೆ ಹಾಕಿದ್ದಾರೆ. ಹೀಗಿರುವಾಗ ಇವರು ಹಿಂದುಳಿದ ಮಹಿಳೆಯರ ಕುರಿತು ಮಾತಾಡುವ ನೈತಿಕತೆ ಯನ್ನು ಹೊಂದಿಲ್ಲ ಎಂಬುದು ವೇದ್ಯವಾಗುತ್ತದೆ.

## ಮಹಿಳಾ ಮೀಸಲಾತಿಯ ಚಾರಿತ್ರಿಕತೆ

ಮಹಿಳಾ ಮೀಸಲಾತಿಯ ಚಾರಿತ್ರಿಕತೆಗೆ ಒಂದೂವರೆ ದಶಕಗಳ ಇತಿಹಾಸವಿದೆ. ಅದಕ್ಕೂ ಮುಂಚೆ ಮಹಿಳೆಗಿದ್ದ ಅವಕಾಶಗಳು ಮತ್ತು ಸಹಭಾಗಿತ್ವದ ಕುರಿತು ನಡೆದ ವಿವಿಧ ಚರ್ಚೆ ಗಳ ಫಲವಾಗಿ ಈ ಚಿಂತನೆ ಮೊಳಕೆಯೊಡೆಯಿತು. ದ್ವಿತೀಯ ಮಹಾಯುದ್ಧದ ನಂತರ ಜಾಗತಿಕ ಶಾಂತಿ ಹಾಗೂ ಸುವ್ಯವಸ್ಥೆಗೆ ಮತ್ತು ಅಭಿವೃದ್ಧಿಗಾಗಿ ಸ್ಥಾಪಿಸಲ್ಪಟ್ಟ ವಿಶ್ವಸಂಸ್ಥೆ ತನ್ನ ಅಧೀನ ಸದಸ್ಯ ರಾಷ್ಟ್ರಗಳಲ್ಲಿನ ಮಹಿಳೆಯರ ಸಬಲೀಕರಣ ಕುರಿತಂತೆ ಹೊಂದಿರುವ ಅಂಶಗಳನ್ನು ಒಳಗೊಂಡ ವಿಸ್ತೃತವಾದ ವರದಿಯನ್ನು ತಯಾರಿಸಿ ಕಳುಹಿಸಲು ಕೋರಿತು. ಅಲ್ಲದೆ '೧೯೭೫ ಅಂತಾರಾಷ್ಟ್ರೀಯ ಮಹಿಳಾ ವರ್ಷ' ಎಂದು ಘೋಷಿಸಿತು. ಇದರೊಂದಿಗೆ ಮಹಿಳೆಯರ ಕುರಿತು ಅತೀವ ಕಾಳಜಿಯನ್ನು ಆಸಕ್ತಿಯನ್ನು ವಹಿಸತೊಡಗಿತು. ಭಾರತದಲ್ಲಿಯೂ ಕೂಡ ಇಂತಹ ಘನ ಉದ್ದೇಶಕ್ಕಾಗಿಯೇ ಫುಲರೇಣು ಗುಹಾರವರ ನೇತೃತ್ವದಲ್ಲಿ 'ಸಮಾನತೆ ಯಡೆಗೆ' ಎಂಬ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯೂ ನೀಡಿದ ವರದಿಯ

ಅನ್ವಯ ಭಾರತದಂತಹ ಮುಂದುವರೆಯುತ್ತಿರುವ ರಾಷ್ಟ್ರಗಳಲ್ಲಿಯೂ ಕೂಡ ಇಂದಿಗೂ ಮಹಿಳೆ ಪಿತೃಪ್ರಧಾನ ಸಂರಚನೆಗಳ ಅಡಿಯಲ್ಲಿ ನರಳುತ್ತಿರುವುದು ಈ ಸಮಿತಿಯು ಎತ್ತಿ ತೋರಿಸಿತು. ಭಾರತದಲ್ಲಿ ಮಹಿಳೆ ಆವರೆಗೂ ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ಅತ್ಯಂತ ಹಿಂದುಳಿದಿರುವುದನ್ನು ಮುಖ್ಯವಾಗಿ ಬಿಂಬಿಸಿತು. ಆವರೆಗೂ ಮಹಿಳೆಯ ವಿರುದ್ಧ ಇದ್ದಂತಹ ಲಿಂಗಪಕ್ಷಪಾತ ರಾಜಕಾರಣದ ತುಣುಕುಗಳು ಈ ಸಮಿತಿಯೂ ತುಂಬ ಸೂಕ್ಮವಾಗಿ ಅನಾವರಣಗೊಳಿಸಿತು.

ಮಹಿಳಾ ಸಮಾಜೋ ರಾಜಕೀಯ ವಿಷಯಗಳ ಬಗ್ಗೆ ಹಾಗೂ ಅಭಿವೃದ್ಧಿಯ ವಿಚಾರವಾಗಿ ಎತ್ತಿದ ಪ್ರಶ್ನೆಗಳ ಅನುಸಾರವಾಗಿಯೆ ಮಹಿಳಾ ಪ್ರಗತಿಯನ್ನು ಸಾಧಿಸಬಹುದೆಂಬ ಆಶಾಭಾವನೆಯಿಂದ ವಿಶ್ವಸಂಸ್ಥೆ ತನ್ನ ಸದಸ್ಯ ರಾಷ್ಟ್ರಗಳಲ್ಲಿನ ಮಹಿಳಾ ಸ್ಥಿತಿಗತಿಗಳ ಸುಧಾರಣೆಗೆ ಅತೀವ ಕಾಳಜಿಯನ್ನು ವಹಿಸತೊಡಗಿತು. ಅಲ್ಲದೆ ಮಹಿಳಾ ಉನ್ನತಿಗಾಗಿ, ಪ್ರಗತಿಗಾಗಿ ಯೋಜನೆಗಳನ್ನು ಮಹಿಳಾಭಿಮುಖವಾಗಿ ತಯಾರಿಸಲು ಸೂಚಿಸಿತು. ಇದರ ಅನ್ವಯವೇ ಭಾರತದಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಇಲಾಖೆಗಳು ಬಜೆಟ್‌ಗಳು ರೂಪಿಸಲಾದವು. ಆದರೆ ಮಹಿಳಾ ಸಮಸ್ಯೆಗೆ ಮೂಲಕಾರಣವಾಗಿರುವ ಪಿತೃಪ್ರಧಾನ ಸಮಾಜದ ರಚನೆ, ಅದರ ಲಿಂಗತಾರತಮ್ಯದ ಧೋರಣೆಯನ್ನು ಬಳಸಿಕೊಂಡದ್ದಾಗಲಿ ಅಥವಾ ತಾವು ರೂಪಿಸಿದ ಕಾರ್ಯಕ್ರಮಗಳ ಪ್ರಾಮಾಣಿಕ ಅನುಷ್ಠಾನಕ್ಕಾಗಲಿ ಬೇಕಾದ ಸಂಕಲ್ಪ ಶಕ್ತಿಯನ್ನಾಗಲಿ ಅದು ಪ್ರದರ್ಶಿಸಲೇ ಇಲ್ಲ. ಆದರೂ ಭಾರತದಲ್ಲಿ ಮಹಿಳಾ ಸಬಲೀಕರಣದ ಉದಾತ್ತ ಚಿಂತನೆಗೆ ತಲೆಬಾಗಿ ಭಾರತದಲ್ಲಿ ಮಹಿಳಾ ಪರ ಕಾರ್ಯಕ್ರಮಗಳು ಹೆಚ್ಚು ಪ್ರವರ್ಧಮಾನಕ್ಕೆ ಬರತೊಡಗಿದವು. ೧೯೭೫ರ ನಂತರ ಭಾರತದಲ್ಲಿ ಕಂಡಬಂದ ಸ್ತ್ರೀವಾದಿ ಚಿಂತನೆಗಳು, ಚಳವಳಿಗಳು ಹಾಗೂ ಮಹಿಳಾ ಸಂಘಟನೆಗಳ ಧ್ಯೇಯೋದ್ದೇಶಗಳನ್ನು ಪುನರ್ ನಿರ್ದೇಶಿಸಿದವು. ಇದರ ಪರಿಣಾಮವೆಂದರೆ ಅದುವರೆಗಿನ ಸುಧಾರಣಾವಾದಿ ಚಳವಳಿಯ ಮೇಲ್‌ಪದರದ ಸುಧಾರಣೆಯನ್ನು ತಿರಸ್ಕರಿಸಿ ಅಮೂಲಾಗ್ರವಾದ ಬದಲಾವಣೆಗೆ ಆಗ್ರಹಿಸಿತು. ಮಹಿಳಾ ಸಮಸ್ಯೆ ಇರುವುದು ವ್ಯಕ್ತಿಗತ ನೆಲೆಯಲ್ಲಿ ಅಲ್ಲ ಅದು ಸಮಾಜದ ಸಂರಚನೆಯ ನೆಲೆಯಲ್ಲಿ. ಆದ್ದರಿಂದ ಸಮಾಜದ ಮುಖ್ಯ ಸಂಸ್ಥೆಗಳಾದ ವಿವಾಹ, ಕುಟುಂಬ, ಸಮಾಜ, ಶಿಕ್ಷಣ, ಧರ್ಮ ಹಾಗೂ ರಾಜಕಾರಣಗಳಲ್ಲಿರುವಂತ ಲಿಂಗ ಪೂರ್ವಾಗ್ರಹದ ನೆಲೆಗಳು, ಧೋರಣೆಗಳು ಮೊದಲು ಬದಲಾಗಬೇಕು ಎಂಬ ಕೂಗು ಕೇಳಿ ಬಂದಿತು. ಇದು ಬದಲಾಗದ ಹೊರತು ಯಾವುದೇ ಕಾನೂನಿನ ರಚನೆಯೂ ಉಪಯುಕ್ತವಾಗಲಾರದು ಎಂಬ ಸತ್ಯವೂ ಇತ್ತು. ಹಾಗೆ ಬದಲಾವಣೆಯನ್ನು ಇನ್ನಾರೂ ಮಾಡುತ್ತಾರೆ ಎಂಬುದು ಸುಳ್ಳು. ಮಹಿಳೆ ತನ್ನ ಸಮಸ್ಯೆಗಳನ್ನು ತಾನೆ ಬಗೆಹರಿಸಿಕೊಳ್ಳಬೇಕು. ಅದಕ್ಕಾಗಿ ಆಕೆಗೆ ಸಬಲೀಕರಣದ ಅಧಿಕಾರ ಕೇಂದ್ರಗಳಲ್ಲಿ ಅವಕಾಶ ಹಾಗೂ ಸಾಮರ್ಥ್ಯ ಮಾತ್ರ ಸಮಾಜದಲ್ಲಿ ಅಮೂಲಾಗ್ರವಾದ ಬದಲಾವಣೆ ತರಬಲ್ಲದು. ಅದಕ್ಕಾಗಿ ಕುಟುಂಬದಿಂದ ಹಿಡಿದು ರಾಜಕೀಯದವರೆಗೂ ಎಲ್ಲೆಲ್ಲಿ ಅಧಿಕಾರ, ಅವಕಾಶ, ಪ್ರಾತಿನಿಧ್ಯ ದೊರೆಯಬೇಕು. ಅಂತಹ ನಿರ್ಧಾರಕ ಸ್ಥಾನಮಾನಗಳಲ್ಲಿನ ಪ್ರಾತಿನಿಧ್ಯವನ್ನು ಪಡೆಯುವಲ್ಲಿ, ಯಶಸ್ವಿಯಾಗಿ ನಿಭಾಯಿಸುವಲ್ಲಿ ಹಾಗೆ ಬೇಕಾಗುವಂತಹ 'ಧಾರಣಶಕ್ತಿ'ಯನ್ನು ಆಕೆಗೆ ಒದಗಿಸಿಕೊಡಬೇಕು. ಮಹಿಳಾ ಅಭಿವೃದ್ಧಿಯೇ ಕಾರ್ಯ

ಕ್ರಮಗಳ ಅಂತಿಮ ನೆಲೆಯಾಗಬೇಕು. ಆಗ ಮಾತ್ರ ಮಹಿಳಾ ಅಭಿವೃದ್ಧಿ ಸಾಧ್ಯ ಎಂಬ ವಿಚಾರಗಳು ಮುಂಚೂಣಿಗೆ ಬರತೊಡಗಿದವು. ಆವಾಗಲೇ ಮಹಿಳಾ ಮೀಸಲಾತಿಯ ಬೀಜ ಮೊಳಕೆಯೊಡೆಯಿತು.

**ಮಹಿಳಾ ಮೀಸಲಾತಿ ಅವಶ್ಯಕತೆ ಏಕೆ**

* ಜನಸಂಖ್ಯೆಯಲ್ಲಿ ಪುರುಷನಷ್ಟೆ ಸರಿಸಮನಾದ ಪಾಲು ಹೊಂದಿದ್ದರೂ ಕೂಡ ಎಲ್ಲಾ ರಂಗಗಳಲ್ಲಿಯೂ ಹಿಂದುಳಿದಿರುವುದು.
* ಮಹಿಳಾ ಹಕ್ಕು ಮತ್ತು ಅವಕಾಶಗಳಿಗೆ ಪ್ರಾತಿನಿಧ್ಯ ನೀಡಲು ಮೀಸಲಾತಿ ಬೇಕು.
* ಪುರುಷ ಪ್ರಧಾನತೆಯನ್ನು ಮರೆತು ರಾಜಕೀಯ ಸ್ವತಂತ್ರವನ್ನು ಪಡೆದು ಮಹಿಳೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ವಲಯದೊಳಗಿನ ಸಮಸ್ಯೆಗಳನ್ನು ಎದುರಿಸುವಲ್ಲಿ ಸಹಾಯಕವಾಗಲೆಂದು.
* ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದಲು.
* ಸಮಾನತೆಯನ್ನು ಸಾಧಿಸುವುದು ಮತ್ತು ನಿರ್ಧಾರ ಕೈಗೊಳ್ಳುವ ಹಕ್ಕನ್ನು ಪಡೆಯುವುದು.
* ಮಹಿಳೆಯರು ಆತ್ಮವಿಶ್ವಾಸ ಬೆಳೆಸಿಕೊಳ್ಳುವುದು, ಉತ್ಪಾದಕ ಸಾಮರ್ಥ್ಯ ಬೆಳೆಸಿಕೊಳ್ಳಲು ಸಹಕಾರಿಯಾಗಿದೆ. ಇದರ ಜೊತೆಗೆ ಈಗಿರುವ ಅಧಿಕಾರ ಸಂಬಂಧಗಳನ್ನು ಅಳಿಸುವುದು.
* ಮೀಸಲಾತಿಯ ಪರಿಕಲ್ಪನೆಯನ್ನು ಮಹಿಳೆಗೆ ಅನ್ವಯಿಸಿದಾಗ ಅವರು ಆಸಕ್ತರು ಎಂಬುದನ್ನು ತೋರಿಸುತ್ತದೆ. ಏಕೆಂದರೆ ಮಹಿಳೆಯರಲ್ಲಿ ಅಧಿಕಾರ ಶಕ್ತಿ ಮೂಲವಾದ ಸಂಪನ್ಮೂಲಗಳ ಲಭ್ಯತೆ, ಭಾವನಾತ್ಮಕ ಚಿಂತನೆ ಸ್ವಂತಿಕೆಯ ಮೇಲೆ ನಿಯಂತ್ರಣವಿರುವುದು ಇದ್ದರೂ ಕೆಲವೊಮ್ಮೆ ಸೀಮಿತವಾಗಿರುತ್ತವೆ.
* ಮೀಸಲಾತಿ ಕೇವಲ ಅಧಿಕಾರ, ಆಸ್ತಿ ಹೊಂದುವುದು ಅಷ್ಟೇ ಅಲ್ಲ. ಇದು ವಿಶಾಲಾರ್ಥವನ್ನು ಒಳಗೊಂಡಿದೆ. ಅಲ್ಲದೆ ವಿವಿಧ ಮೆಟ್ಟಿಲುಗಳನ್ನು ಪಡೆದಿದೆ. ಅವುಗಳೆಂದರೆ ಶೈಕ್ಷಣಿಕ, ರಾಜಕೀಯ, ಆರ್ಥಿಕ, ಜಾಗತಿಕ ಸಂಘಟನಾ ಮತ್ತು ರಾಜಕೀಯ ಪ್ರವೇಶ.

ಈ ಎಲ್ಲಾ ಹಕ್ಕುಗಳಿಗಾಗಿ ಮಹಿಳಾ ಮೀಸಲಾತಿ ಅವಶ್ಯಕತೆ ಇದ್ದೇ ಇದೆ. ಆ ಕಾರಣದಿಂದಲೇ ೧೯೮೫ರ ಬೀಜಿಂಗ್ ಸಮಾವೇಶ ಒಂದು ಭಾವನಾತ್ಮಕವಾದ ಮುನ್ನುಡಿಯನ್ನು ಬರೆಯಿತು. ಮಹಿಳೆಯ ನಿಜವಾದ ಉನ್ನತಿಯೂ ರಾಜಕೀಯದಿಂದಲೇ ಆಗಬೇಕೆಂಬ ನಿಲುವು ಇಲ್ಲಿ ವ್ಯಕ್ತವಾಯಿತು. ಭಾರತದಲ್ಲಿ ಅನುಷ್ಠಾನಕ್ಕೆ ತಂದ ಎಲ್ಲ ಯೋಜನೆಗಳು ಜನರಿಗೆ ತಲುಪದೆ ಅವು ವಿಫಲತೆ ಹೊಂದುತ್ತಿರುವುದು ಮಹಿಳಾ ಸಹಭಾಗಿತ್ವದ ಕಾರಣದಿಂದ ಎಂಬ ಅಂಶವು ಸ್ಪಷ್ಟವಾಗಿ ಗೋಚರಿಸಿತು. ಆದ್ದರಿಂದಲೇ ಮಹಿಳಾ ಸಬಲೀಕರಣ ಎಂಬುದು ಮಹಿಳಾ ರಾಜಕೀಯ ಸಬಲೀಕರಣ ಎಂಬ ನೆಲೆಗಟ್ಟಿನಲ್ಲಿ ವ್ಯಾಪಕವಾದ ವಿಸ್ತೃತ ಅರ್ಥದಲ್ಲಿ ನಿರ್ವಚಿಸಲ್ಪಟ್ಟಿತು. ಇದುವೆ ಅಂದಿನ ಮುಖ್ಯ ಕೇಂದ್ರ ವಿಷಯವಾಯಿತು. ಗ್ರಾಮೀಣ ವಲಯದೊಳಗಿನ ಪಂಚಾಯಿತಿಯಿಂದಿಡಿದು ವಿಧಾನಸಭೆ ಮತ್ತು ಲೋಕಸಭೆಯವರೆಗಿನ ಎಲ್ಲಾ ಅಧಿಕಾರ ಹಂತಗಳಲ್ಲಿಯೂ ಮಹಿಳಾ ಸಹಭಾಗಿತ್ವವಾಗುವುದರಿಂದ ಮಹಿಳೆ ತನ್ನ ಅಸ್ತಿತ್ವ, ಅನನ್ಯತೆ, ಹಿತಾಸಕ್ತಿಯನ್ನು ಕಾಪಾಡಲು ಇದು ಅತ್ಯಂತ ಅವಶ್ಯಕವೂ ಅನಿವಾರ್ಯವೂ ಆಗಿ ಘೋಷಣೆ

ಆಯಿತು. ಇಷ್ಟೆಲ್ಲ ಮಜಲುಗಳ ನಂತರ ಮಹಿಳೆಯರ ಕುರಿತ ನಿರ್ದಿಷ್ಟವಾದ ಕಾರ್ಯಸೂಚಿಗಳು ರಾಜಕೀಯ ವಲಯದಲ್ಲಿ ಗೋಚರಿಸಿದವು. ಮೀಸಲಾತಿಯೂ ಸಮಾಜಮುಖಿಯಾದ ಕಾರ್ಯ ಎಂದು ಮನಗಂಡ ರಾಜಕೀಯ ಪಕ್ಷಗಳು ತಮ್ಮ ಪಕ್ಷಗಳಲ್ಲಿ ಮಹಿಳೆಯರಿಗಾಗಿ ಮೀಸಲಾತಿ ಯನ್ನು ಸಹಭಾಗಿತ್ವವನ್ನು ಕುರಿತಂತೆ ಅಜೆಂಡಾಗಳನ್ನು ರೂಪಿಸತೊಡಗಿದವು. ೧೯೯೬ರ ಅವಧಿಯಲ್ಲಿನ ಶ್ರೀ ಹೆಚ್.ಡಿ. ದೇವೇಗೌಡ ಸರಕಾರ ಮಹಿಳಾ ಮೀಸಲಾತಿಗೆ ಅಡಿಪಾಯ ಹಾಕಿತು. ೧೯೯೬ ಸೆಪ್ಟೆಂಬರ್ ೧೨ ರಂದು ಸಂಸತ್ತಿನಲ್ಲಿ ಈ ಮಸೂದೆಯನ್ನು ಮಂಡಿಸ ಲಾಯಿತು. ಆಡಳಿತ ಪಕ್ಷದ ಪಾಲುದಾರರಾದ ಜನತಾದಳ ಶರದ್‌ಪವಾರ್ ಮೊದಲ ಬಾರಿಗೆ ಹಿಂದುಳಿದ, ದಲಿತ ಅಲ್ಪಸಂಖ್ಯಾತ ಮಹಿಳೆಯರಿಗೆ ಮೀಸಲಾತಿ ಎಂದು ಅಪಸ್ವರ ಎತ್ತಿದ್ದೆ ತಡ ಇತರರೂ ಕೂಡ ಅಪಸ್ವರ ಎತ್ತಿದರು. ನಂತರ ಇದನ್ನು ಮತ್ತೆ ಸಂಸದೀಯ ಸಮಿತಿಗೆ ಒಪ್ಪಿಸಲಾಯಿತು. ಗೀತಾ ಮುಖರ್ಜಿಯವರ ನೇತೃತ್ವದ ಸಮಿತಿಯೂ ಮತ್ತೆ ಇದನ್ನು ಪುನರ್ ಪರಿಶೀಲಿಸಿ ಒಳಮೀಸಲಾತಿಗೆ ಒಪ್ಪಿಗೆಯನ್ನು ಸೂಚಿಸಲಾರದ್ದೇ ಇದರ ನೆನೆಗುದಿಗೆ ಕಾರಣ ವಾಯಿತು. ೧೨ನೆಯ ಡಿಸೆಂಬರ್ ಮತ್ತೆ ಇದನ್ನು ಸದನದಲ್ಲಿ ಮಂಡಿಸಿದಾಗ ಪಿತೃಪ್ರಧಾನ ಚಿಂತನೆಗಳ ವಾರಸುದಾರರು ಮತ್ತು ಮನುವಾದಿಗಳಿಂದ ಮತ್ತೆ ಗದ್ದಲ ಆರಂಭವಾಗಿ ಮಸೂದೆ ನೆಲಕಚ್ಚಿತು.

೧೯೯೭ರ ಗುಜ್ರಾಲ್‌ರ ಅಧಿಕಾರಾವಧಿಯಲ್ಲಿಯೂ ಕೂಡ ಮೂರನೆಯ ಅವಧಿಗೆ ಈ ಮಸೂದೆಯನ್ನು ಮಂಡಿಸಲಾಗಿ ಅಲ್ಲಿಯೂ ಇದು ಸಫಲವಾಗಲಿಲ್ಲ. ಹಿಂದಿನ ವಾಜಪೇಯಿ ಸರಕಾರ ಕೂಡ ಎರಡು ಬಾರಿ ಇದನ್ನು ಮಂಡಿಸಿ ಸೋತಿದೆ. ದುರಂತ ಏನೆಂದರೆ ಮಹಿಳಾ ಸಂಸದರಾದ ಉಮಾಭಾರತಿ ಹಾಗೂ ಸಾಧ್ವಿರಿತುಂಬರರಂತಹ ಮಹಿಳಾ ನಾಯಕರೆ ಇದರ ಬಗ್ಗೆ ಅಪಸ್ವರ ಎತ್ತಿದ್ದು ನಿಜಕ್ಕೂ ಖೇದನೀಯ. ಹೀಗೆ ಒಂದಿಲ್ಲ ಒಂದು ಕಾರಣಗಳಿಂದ ಈ ಮಸೂದೆ ಕುಂಟುತ್ತಲೇ ಬಂದಿದೆ. ಮಹಿಳಾ ಸಮುದಾಯದ ಓಟುಗಳನ್ನು ಕಬಳಿಸುವ ನಮ್ಮ ನಾಯಕರುಗಳಿಗೆ ಅವಳ ಸಹಭಾಗಿತ್ವದಲ್ಲಿ ಏಕೆ ಅಪನಂಬಿಕೆ ಇದೆಯೋ ತಿಳಿಯದಾಗಿದೆ.

ಪಂಚಾಯಿತಿಯ ವಲಯದೊಳಗೆ ಶೇ. ೩೩% ಹಾಗೂ ಶೇ. ೫೦% ಯಾವುದೇ ಚಕಾರ ವೆತ್ತದ ನಮ್ಮ ಪುಡಾರಿಗಳಿಗೆ ಸಂಸತ್ತಿನೊಳಗೆ ಮೀಸಲಾತಿ ಎಂದೊಡನೆ ವಿರೋಧ ವ್ಯಕ್ತ ವಾಗುತ್ತಿದೆ. ಶಾಸನೀಯ ಸಭೆಗಳಿಗೆ ಮಾತ್ರವೇ ಏಕೆ ಹೀಗೆ ಎಂದರೆ ಅಧಿಕಾರ ಕೇಂದ್ರ ಅತ್ಯುನ್ನತ ಹಂತದ ಕೇಂದ್ರಗಳು ಇವುಗಳಾಗಿರುವುದರಿಂದ ಸಮಸ್ತ ರಾಜಕೀಯದ ಕೀ ಇರುವುದೆ ಇಲ್ಲಿ. ಆದ್ದರಿಂದ ಹಿಂದಿನಿಂದಲೂ ಏಕಸ್ವಾಮ್ಯ ಸಾಧಿಸಿಕೊಂಡು ಬಂದ ತನ್ನ ವಲಯದೊಳಗೆ ಮಹಿಳೆ ಎಲ್ಲಿ ತನಗೆ ಪ್ರಶ್ನಿಸುವಳೋ ತನ್ನನ್ನು ತುಳಿಯುವಳೋ ಎಂಬ ಭಯ ಪುರುಷನಿಗೆ ಇರಬಹುದು. ಸ್ವಾತಂತ್ರ್ಯನಂತರ ಅರವತ್ತು ವರ್ಷಗಳಾದರೂ ಕೂಡ ಸಂಸತ್ತಿನಲ್ಲಿ ಈ ಕಾರಣದಿಂದಲೇನೋ ಮಹಿಳೆಯರ ಪ್ರವೇಶಾವಕಾಶ ಶೇಕಡ ೧೦%ಕ್ಕಿಂತ ಹೆಚ್ಚಿಲ್ಲ.

ಮುಖ್ಯವಾಗಿ ಮಹಿಳೆಗೆ ರಾಜಕೀಯ ಮೀಸಲಾತಿ ಎಂದಾಕ್ಷಣ ಪರಂಪರಾಗತವಾಗಿ ಅದರ ವಾರಸುದಾರರಾಗಿಯೇ ಬಂದ ಪುರುಷ ವರ್ಗದಲ್ಲಿ ಗಲಿಬಿಲಿ, ಭಯ ಅಭದ್ರತೆಗಳು ಆವರಿಸಿವೆ. ಈವರೆಗೂ ರಾಜಕೀಯದ ಸರ್ವಾಧಿಕಾರಿಯಾಗಿಯೇ ಏಕಸ್ವಾಮ್ಯವಾಗಿ ಅದನ್ನು ಅನುಭವಿಸುತ್ತಿದ್ದ

ಅವನಿಗೆ ಪ್ರತಿಸ್ಪರ್ಧಿಯೊಬ್ಬಳ ಭಯ ಕಾಡುತ್ತಿದೆ. ಅಲ್ಲದೆ ಏಕಾಏಕಿ ೧೮೨ ಮಹಿಳೆಯರ ಬರುವಿಕೆಯೂ ಕೂಡ ಅವನಿಗೆ ನುಂಗಲಾರದ ತುತ್ತಾಗಿ ಪರಿಣಮಿಸಿದೆ. ವಾಸ್ತವವಾಗಿ ಈ ೩೩% ಅವೈಜ್ಞಾನಿಕ, ಏಕೆಂದರೆ ಜನಸಂಖ್ಯೆಯಲ್ಲಿ ಸರಿಸಮಾನವಾದ ಪಾಲು ಪಡೆದ ಮಹಿಳೆಗೆ ಇಷ್ಟು ಸಾಕಾಗದು. ಅದು ಹಾಗಿರಲಿ. ಏಕೆಂದರೆ ೩೩% ಇಲ್ಲದಿರುವಾಗ ೫೦% ಬಗ್ಗೆ ಮಾತಾಡುವುದು ದೂರದ ಮಾತು.

ಇಷ್ಟೆಲ್ಲ ರಾದ್ಧಾಂತಗಳಿಗೆ ಗುರಿಯಾಗುತ್ತಲೆ ಕುಂಟುತ್ತ ನಡೆಯುತ್ತಿರುವ ಈ ಮಸೂದೆಯನ್ನು ದೃಢವಾಗಿ ಮಂಡಿಸಲು ಒತ್ತಡ ತರುವ ಮಹಿಳಾ ರಾಜಕಾರಣಿಯರು ಭಾರತದಲ್ಲಿ ಇಲ್ಲವೇ ಎಂಬ ಸಂಶಯ ಮೂಡದಿರದು. ಭಾರತದ ಪ್ರತಿಯೊಂದು ರಾಜಕೀಯ ಪಕ್ಷಗಳಲ್ಲಿಯೂ ಅತ್ಯಂತ ವರ್ಚಸ್ವಿ ಪ್ರಬಲ ಮಹಿಳಾ ನಾಯಕಿಯರು ಇದ್ದಾರೆ. ಸದ್ಯ ಭಾರತದ ಸರ್ವೋನ್ನತ ಪದವಿಯಾದ ಅಧ್ಯಕ್ಷ ಪದವಿಯಲ್ಲಿರುವುದು ಒಬ್ಬ ಮಹಿಳೆ, ಲೋಕಸಭಾ ಅಧ್ಯಕ್ಷೆ ಒಬ್ಬ ಮಹಿಳೆ, ಒಂದು ದೇಶದ ಸರಕಾರವನ್ನೇ ಮುನ್ನೆಡೆಸುತ್ತಿರುವುದು ಒಬ್ಬ ಮಹಿಳೆ, ಐದರಿಂದ ಆರು ರಾಜ್ಯಗಳಲ್ಲಿ ಮುಖ್ಯಮಂತ್ರಿಗಳು ಮಹಿಳೆಯರೆ ಆದರೂ ಕೂಡ ಇದು ಸಾಧ್ಯವಾಗುತ್ತಿಲ್ಲ. ಕಾರಣ ಎಂದರೆ ಅವರು ಆಯಾ ಪಕ್ಷದೊಳಗಿನ ಪುರುಷ ವಕ್ತಾರರಾಗಿ ಕಾರ್ಯನಿರ್ವಹಿಸುತ್ತಿರುವುದು. ಲಿಂಗ ರಾಜಕಾರಣವನ್ನು ಕೇಂದ್ರೀಕರಿಸಿಕೊಂಡಿರುವ ಪಿತೃಪ್ರಧಾನ ವ್ಯವಸ್ಥೆ ಸ್ತ್ರೀಯರಿಗೆ ಕೇವಲ ನಾಯಕತ್ವ ಕೊಟ್ಟಿತೇ ವಿನಃ ವಾಸ್ತವವಾದ ಅಧಿಕಾರವನ್ನಂತೂ ಕೊಡಲೇ ಇಲ್ಲ. ಅವಳ ಅಧಿಕಾರದ ಹಿಂದಿನ ನಿಯಂತ್ರಿಕ ಶಕ್ತಿ ಪುರುಷನೇ ಆಗಿರುವುದು ಇದಕ್ಕೆಲ್ಲ ಕಾರಣವಾಗಿದೆ.

ಈಗಾಗಲೇ ಮಹಿಳಾ ಮೀಸಲಾತಿ ಹಲವಾರು ಗೊಂದಲಗಳ ನಡುವೆ ರಾಜ್ಯಸಭೆಯಲ್ಲಿ ಹೇಗೋ ಮಂಡನೆಯಾಗಿದೆ. ಆದರೆ ಯುಪಿಎ ಮೈತ್ರಿಕೂಟ ಕಾಂಗ್ರೆಸ್ ಸರಕಾರದ ಹಿರಿಯ ನಾಯಕರುಗಳೆ ಹೇಳುವಂತೆ ಈ ಮಸೂದೆಯನ್ನು ಮುಂದೂಡುವ ಲಕ್ಷಣಗಳು ಸ್ಪಷ್ಟವಾಗಿವೆ. ಇತ್ತೀಚಿನ ಚುನಾವಣೆಯಲ್ಲಿ ಅತ್ಯಂತ ದೊಡ್ಡ ಪಕ್ಷವಾಗಿ ಹೊರಹೊಮ್ಮಿದ ಕಾಂಗ್ರೆಸ್ ಪಕ್ಷಕ್ಕೆ ತಾಮುಂದು ನಾಮುಂದು ಎಂದು ಬೇರೆ ಬೇರೆ ಪ್ರಾದೇಶಿಕ ಪಕ್ಷಗಳು ಬೆಂಬಲಕ್ಕೆ ಬರುತ್ತಿದ್ದರೂ ಕಾಂಗ್ರೆಸ್ ಮಾತ್ರ ಈ ಕಡೆ ಗಮನಹರಿಸದಿರುವುದನ್ನು ನೋಡಿದರೆ ಇದಕ್ಕೂ ಕೂಡ ಬದ್ಧತೆ ಅಥವಾ ನೈತಿಕತೆ ಕಾಣುತ್ತಿಲ್ಲ. ಅಲ್ಲದೆ ಬಿಜೆಪಿ, ಸಿಪಿಎಮ್, ಡಿಎಮ್.ಕೆಯಂತಹ ದೊಡ್ಡ ಪಕ್ಷಗಳೆ ಇದರ ಹಿಂದಿದ್ದರೂ ಅದೇಕೆ ಹಿಂಜರಿಯುತ್ತಿದೆ ಎಂಬ ಸಂಶಯ ಬರದಿರದು. ಕಾರಣ ಎಂದರೆ ಮುಂಬರುವ ನಾಲ್ಕು ರಾಜ್ಯಗಳ ವಿಧಾನಸಭೆ ಚುನಾವಣೆಯಲ್ಲಿ ಎಲ್ಲಿ ವ್ಯತಿರಿಕ್ತ ಪರಿಣಾಮ ಉಂಟಾಗುವುದೋ ಎಂಬ ರಾಜಕೀಯ ದುರಾಲೋಚನೆ. ಅದೇಗೋ ಇರಲಿ ಹಿಂದಿನಿಂದಲೂ ಕುಂಟುತ್ತ ಬಂದಿರುವ ಈ ಮಸೂದೆಗೆ ಈಗಲಾದರೂ ನ್ಯಾಯಬದ್ಧವಾದ ರೀತಿಯಲ್ಲಿ ನ್ಯಾಯ ದೊರಕಿಸಿಕೊಡಲು ಆ ಮೂಲಕ ಚಾರಿತ್ರಿಕವಾಗಿ ಮಹಿಳೆಗೆ ಆದ ಅನ್ಯಾಯವನ್ನು ಸರಿಪಡಿಸಲು ಎಲ್ಲಾ ಪಕ್ಷಗಳು ಸಹಕರಿಸುತ್ತವೆಯೋ ಕಾದು ನೋಡಬೇಕಿದೆ.

• • •

೭

# ಸ್ಥಳೀಯ ಆಡಳಿತದಲ್ಲಿ ಶೇ. ೫೦ರ ಮೀಸಲಾತಿ : ಮತ್ತಷ್ಟು ಸಾಧನೆಯತ್ತ ಮಹಿಳೆ

ಡಾ. ಎಂ. ಭಾರತಿ

ಇಂದು ಮಹಿಳೆ ತನ್ನ ಸಾಮರ್ಥ್ಯವನ್ನು ಸಾಬೀತು ಮಾಡಿದ್ದಕ್ಕೆ ನಿದರ್ಶನ ಎಂಬಂತೆ ಸರ್ಕಾರ ಗ್ರಾಮ ಪಂಚಾಯಿತಿಗಳಲ್ಲಿ ಶೇ. ೫೦ರಷ್ಟು ಮಹಿಳಾ ಮೀಸಲಾತಿಯನ್ನು ನೀಡಲು ಬದ್ಧವಾಗಿದೆ. ಇದು ನಿಜವಾದ ಪ್ರಜಾಪ್ರಭುತ್ವದ ಸಾಧನೆ. ಆಡಳಿತ ಸಬಲೀಕರಣಕ್ಕೆ ಸ್ತ್ರೀಗೆ ಅತ್ಯವಶ್ಯಕವಾದ ಒಂದು ಅವಕಾಶ ಕಲ್ಪಿಸಿಕೊಟ್ಟಿರುವುದು ಸಂತೋಷಕರ ವಿಷಯ. ಇದರ ಜೊತೆಗೆ ಮಹಿಳೆಯರ ಅದರಲ್ಲೂ ಗ್ರಾಮೀಣ ಮಹಿಳೆಯರ ಜವಾಬ್ದಾರಿ ಹೆಚ್ಚಾಗಿದೆ.

ಇಂದಿನ ಸರ್ಕಾರದ ನಿಲುವುಗಳು, ಸರ್ಕಾರ ಬೇಜವಾಬ್ದಾರಿತನ, ಭ್ರಷ್ಟತೆ, ಇವೆಲ್ಲದಕ್ಕೂ ಪರ್ಯಾಯ ವ್ಯವಸ್ಥೆ ಎಂದರೆ ಶೇ. ೫೦ರಷ್ಟು ಮೀಸಲಾತಿ ಅನ್ನಿಸುತ್ತದೆ. ಈ ಮೀಸಲಾತಿ ಹಾಗೆ ಮೇಲ್ಮುಖವಾಗಿ ಎಲ್ಲಾ ಚುನಾವಣೆಗಳಲ್ಲೂ ಅನುಷ್ಠಾನಕ್ಕೆ ಬಂದರೆ. ಇಂದಿನ ಗೊಂದಲದ ಸಮಾಜ ನಿವಾರಣೆಯಾಗುತ್ತದೆ. ಈಗಾಗಲೇ ಗ್ರಾಮ ಪಂಚಾಯಿತಿಗಳಲ್ಲಿ ಉತ್ತಮ ಆಡಳಿತ ನಡೆಸಬಲ್ಲರೆಂಬುದನ್ನು ಮಹಿಳೆಯರು ನಿರೂಪಿಸಿದ್ದಾರೆ. ಇನ್ನು ಶೇ. ೫೦ರಷ್ಟು ಮೀಸಲಾತಿ ದೊರಕಿದ್ದರಿಂದ ಉತ್ತಮ ಆಡಳಿತಕ್ಕೆ ಮತ್ತೊಂದಷ್ಟು ಬಲ ಬಂದಂತಾಗದೆ. ಇದುವರೆಗೂ ಗ್ರಾಮ ಪಂಚಾಯಿತಿಗಳಲ್ಲಿನ ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರೆ ಹೆಚ್ಚಾಗಿದ್ದು ಹಲವಾರು ತೊಂದರೆಗಳನ್ನು ಅನುಭವಿಸುವಂತಾಗಿತ್ತು ಬಹುಶಃ ಈ ಮೀಸಲಾತಿಯಿಂದ ಗ್ರಾಮ ಪಂಚಾಯಿತಿ ಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಿಕೆ ಕಂಡುಬರುತ್ತದೆ ಮತ್ತು ವಿದ್ಯಾವಂತ ಯುವ ಜನತೆ ಪಾಲ್ಗೊಳ್ಳುವ ಸಾಧ್ಯತೆ ಹೆಚ್ಚಾಗಿದೆ.

ಗ್ರಾಮ ಪಂಚಾಯಿತಿಯಲ್ಲಿ ಮುಕ್ತ ಅವಕಾಶವಿದ್ದು ಸ್ಥಳೀಯ ಸಮಸ್ಯೆಗಳಿಗೆ ತಾವೇ ಪರಿಹಾರ ಕಂಡುಕೊಳ್ಳಬಹುದೆಂಬ ಆಶಯದಿಂದ ಮಹಿಳೆಯರು ಹೆಚ್ಚಾಗಿ ಪಾಲ್ಗೊಳ್ಳುತ್ತಾರೆ ವಿದ್ಯಾವಂತ ಮಹಿಳೆಯರೊಂದಿಗೆ ಅನಕ್ಷರಸ ಮಹಿಳೆಯರು ಸೇರಿ ಇಷ್ಟು ದಿನದ ಬಹುಪಾಲು ನಾಮಕಾವಸ್ಥೆ

ಸದಸ್ಯತ್ವದಿಂದ ಬಿಡುಗಡೆ ಹೊಂದಿ, ಸ್ವಾತಂತ್ರ್ಯ ನಿಲುವುಗಳನ್ನು ತೆಗೆದುಕೊಳ್ಳಲು ಶಕ್ತರಾಗುತ್ತಾರೆ. ವಿರೋಧಗಳ ನಡುವೆಯೂ ಅವಿದ್ಯಾವಂತ ಮಹಿಳಾ ಅಧ್ಯಕ್ಷರುಗಳು ತಮ್ಮ ಗ್ರಾಮ ಪಂಚಾಯಿತಿಗಳನ್ನು ಮಾದರಿ ಗ್ರಾಮ ಪಂಚಾಯಿತಿಗಳನ್ನಾಗಿ ಮಾಡಬಲ್ಲರು ಎಂಬುದಕ್ಕೆ ಅಲ್ಲಲ್ಲಿ ಕೆಲವೊಂದು ಉದಾಹರಣೆಗಳಿವೆ. ಒಟ್ಟು ಸದಸ್ಯರಲ್ಲಿ ಅರ್ಧದಷ್ಟು ಮಹಿಳಾ ಸದಸ್ಯರ ಬೆಂಬಲ ಸಿಕ್ಕಿದರೆ ಉತ್ತಮ ಆಡಳಿತ ಕೊಡುವಲ್ಲಿ ಎರಡು ಮಾತಿಲ್ಲ.

ಇನ್ನೂ ಮುಂದೆ ಗ್ರಾಮ ಪಂಚಾಯಿತಿಗಳಲ್ಲಿ ಪಾರದರ್ಶಕ ಆಡಳಿತ, ಗ್ರಾಮೀಣ ಜನರ ಮೂಲಭೂತ ಸೌಕರ್ಯ, ಸ್ತ್ರೀಯ ಸ್ಥಾನಮಾನದಲ್ಲಿ ಬದಲಾವಣೆ. ಇಂತಹವುಗಳೆಲ್ಲವನ್ನು ಕೂಡ ಮತ್ತಷ್ಟು ಆಶಾದಾಯಕವಾಗಿ ನಿರೀಕ್ಷಿಸಬಹುದಾಗಿದೆ. ಮಹಿಳೆಯರೂ ಪುರುಷರಿಗಿಂತ ಉತ್ತಮ ಆಡಳಿತ ಕೊಡಲು ಕಾರಣ, ಅವರಿಗೆ ಸಮಸ್ಯೆಗಳ ಅರಿವು ಸೂಕ್ಷ್ಮವಾಗಿರುತ್ತದೆ ಮತ್ತು ಸಮಸ್ಯೆಗಳಿಗೆ ಸ್ಪಂದಿಸುವ ಮನೋಭಾವ ಪುರುಷರಿಗಿಂತ ಹೆಚ್ಚಾಗಿರುತ್ತದೆ. ಪುರುಷನಷ್ಟು ಹೆಚ್ಚು ಭ್ರಷ್ಟತೆಯ ಮನೋಭಾವ ಹೊಂದಿರುವ ಸಾಧ್ಯತೆ ಕಡಿಮೆ, ಸಮಾಜ ತನ್ನನ್ನು ಗಮನಿಸುತ್ತದೆ ಎಂಬ ಆತಂಕ, ಭಯ ಅವಳಲ್ಲಿ ಇರುತ್ತದೆ. ಹಾಗಾಗಿ ತಪ್ಪು ಮಾಡಿದರೆ ಬೇಗೆ ಎಚ್ಚೆತ್ತುಕೊಳ್ಳುವ ಸ್ವಭಾವ ಅವಳಲ್ಲಿ ಇದೆ. ಸದಸ್ಯರಾದ ನಂತರ ಗ್ರಾಮೀಣ ಜನರ ನಿರೀಕ್ಷೆಗಳನ್ನು ಪೂರೈಸಬೇಕು. ನನ್ನ ಊರು ನನ್ನ ಜನ ಅನ್ನುವಂತ ಆತ್ಮಾಭಿಮಾನ ಸದಾ ಅವಳಲ್ಲಿ ತುಡಿಯುತ್ತಿರುತ್ತದೆ. ಹಾಗಾಗಿ ಗ್ರಾಮೀಣ ಸಮಾಜದ ಸ್ಥಿತಿ-ಗತಿಗಳು ಬದಲಾವಣೆಗೊಂಡು ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ವಿಧಾನಸಭೆ, ಲೋಕಸಭೆಗಳಿಗೆ ಮಾದರಿಯಂತಾಗುತ್ತದೆ. ಒಂದು ಉತ್ತಮ ಗ್ರಾಮೀಣ ಸಮಾಜದ ಕಲ್ಪನೆ ನನಸಾಗುತ್ತದೆ.

ಇಷ್ಟೆಲ್ಲದರ ನಡುವೆ ಶೇ. ೫೦ರಷ್ಟು ಮಹಿಳಾ ಮೀಸಲಾತಿ ದೊರಕದ್ದರಿಂದ ಅನುಕೂಲದ ಜೊತೆಗೆ ಅನಾನೂಕೂಲವು ಕಂಡುಬರುತ್ತದೆ ಹಾಗೂ ದುರುಪಯೋಗದ ಸಾಧ್ಯತೆಯನ್ನು ಕಾಣಬಹುದು. ಆದ್ದರಿಂದ ಸರ್ಕಾರ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಗ್ರಾಮ ಪಂಚಾಯಿತಿ ಚುನಾವಣೆಗಳಲ್ಲಿ ಭಾಗವಹಿಸುವ ಮಹಿಳೆಯರಿಗೆ ಕೆಲವೊಂದು ಮಾನದಂಡಗಳನ್ನು ವಿಧಿಸಿ ಅದರ ಮುಖಾಂತರ ತಮ್ಮ ಸದಸ್ಯತ್ವದ ಜವಾಬ್ದಾರಿಯ ಅರಿವು ಮೂಡಿಸುವಂತಾದರೆ ಶೇ. ೫೦ರಷ್ಟು ಮಹಿಳಾ ಮೀಸಲಾತಿಯ ಉದ್ದೇಶ ಸಫಲವಾಗುತ್ತದೆ. ಗ್ರಾಮ ಪಂಚಾಯಿತಿಗಳಲ್ಲಿ ಶೇ. ೩೨ರಷ್ಟು ನಾಮಕಾವಸ್ಥೆ ಸದಸ್ಯರಿರುವುದು ಕಂಡುಬರುತ್ತದೆ. ಈ ಸದಸ್ಯರು ಅವಿದ್ಯಾವಂತರಾಗಿದ್ದು ಇವರ ಬದಲಾಗಿ ಅವರ ಕುಟುಂಬದ ಇತರೆ ಪುರುಷ ಸಂಬಂಧಿಗಳು ಗ್ರಾಮ ಪಂಚಾಯಿತಿಗಳಲ್ಲಿ ಆಡಳಿತ ನಡೆಸುತ್ತಿದ್ದು, ತರಬೇತಿ ಕಾರ್ಯಕ್ರಮಗಳಿಗೂ ಕೂಡ ನಿಯಮ ಬಾಹಿರವಾಗಿ ಇವರುಗಳ ಭಾಗವಹಿಸುವಿಕೆ ಕಂಡುಬರುತ್ತದೆ. ಇಂತಹ ಎಷ್ಟೋ ಸತ್ಯಗಳು ಗ್ರಾಮ ಪಂಚಾಯಿತಿಗಳಲ್ಲಿ ಕಾಣುತ್ತಿದ್ದೇವೆ.

ಗ್ರಾಮ ಪಂಚಾಯಿತಿ ಚುನಾಯಿತ ಮಹಿಳೆಗೆ ಆಡಳಿತ ಜ್ಞಾನವಿದ್ದಲ್ಲಿ ಮತ್ತಷ್ಟು ದಕ್ಷತೆಯನ್ನು ನಿರೀಕ್ಷಿಸಬಹುದು. ಆ ಕಾರಣದಿಂದ ಚುನಾಯಿತ ಮಹಿಳಾ ಸದಸ್ಯರಿಗೆ ಪೂರಕವಾದ ತರಬೇತಿಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬಹುದು.

ಅತ್ಯಧಿಕ ಸಂಖ್ಯೆಯ ಚುನಾಯಿತ ಪ್ರತಿನಿಧಿಗಳಿರುವ ಪಂಚಾಯತ್‌ರಾಜ್ ವ್ಯವಸ್ಥೆಯ ವ್ಯಾಪ್ತಿ ತುಂಬ ವಿಶಾಲವಾದದ್ದು. ಹಾಗಾಗಿ ಇಲ್ಲಿ ಮಹಿಳೆಯರ ಪಾಲುದಾರಿಕೆಯು ಅಷ್ಟೇ ಮಹತ್ವ ಪೂರ್ಣವಾದದ್ದು. ಇಂತಹ ವಿಸ್ತೃತ ವ್ಯವಸ್ಥೆಯನ್ನು ಬಲಗೊಳಿಸುವಲ್ಲಿ ಜಾಗೃತಿ ಮತ್ತು ಎಲ್ಲ ಬಗೆಯ ಪರಿಸ್ಥಿತಿಯನ್ನು ಎದುರಿಸುವ ಸಾಮರ್ಥ್ಯ ಜನಪ್ರತಿನಿಧಿಗಳಿಗೆ ಹೆಚ್ಚಾಗಬೇಕು. ಇದು ಕೇವಲ ರಾಜ್ಯ ಸರ್ಕಾರಗಳ ಸೀಮಿತವಾದ ಮಾನವ ಸಂಪನ್ಮೂಲ ಮತ್ತು ಸೌಲಭ್ಯ ಮೂಲಗಳಿಂದ ಮಾತ್ರ ಸಾಧ್ಯವಾಗುವಂತಹದ್ದಲ್ಲ.

೧. ಪಂಚಾಯತ್‌ರಾಜ್ ವ್ಯವಸ್ಥೆಯ ರಚನೆ ಮತ್ತು ಕಾರ್ಯಶೈಲಿಗೆ ಸಂಬಂಧಿಸಿದಂತೆ ನೀತಿ ನಿಯಮಾವಳಿಗಳು ಅಗತ್ಯಕ್ಕೆ ಅನುಗುಣವಾಗಿ ಆಗಾಗ ಬದಲಾಗುತ್ತಲೇ ಇರುತ್ತವೆ. ಇವು ತಕ್ಷಣಕ್ಕೆ ಪಂಚಾಯತಿಯ ಚುನಾಯಿತ ಪ್ರತಿನಿಧಿಗಳಿಗೆ ವಿಶೇಷವಾಗಿ ಅನಕ್ಷರಸ್ಥರಿಗೆ ಮತ್ತು ಮಹಿಳೆಯರಿಗೆ ಅರಿವಾಗದೇ ತೊಂದರೆಯಾಗಬಹುದು. ಆದ್ದರಿಂದ ಇಂತಹ ಮುಖ್ಯವಾದ ವಿಚಾರಗಳು ಕಡಿಮೆ ಅವಧಿಯಲ್ಲಿ ಲಭ್ಯವಿರುವ ಸಂಪನ್ಮೂಲಗಳ ಜೊತೆಯಲ್ಲಿ ಎಲ್ಲಾ ಚುನಾಯಿತ ಸದಸ್ಯರಿಗೆ ತಲುಪಿಸುವಂತಹ ವ್ಯವಸ್ಥೆಯೊಂದು ರೂಪುಗೊಳ್ಳುವ ಅಗತ್ಯವಿದೆ. ಇದಕ್ಕಾಗಿ ಪ್ರತಿ ಜಿಲ್ಲೆ ಮತ್ತು ವಿಭಾಗಗಳಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳೊಂದಿಗೆ ಕಾರ್ಯ ನಿರ್ವಹಿಸಿ ಅನುಭವವಿರುವವರನ್ನು ಈ ಉದ್ದೇಶಕ್ಕೆ ಬಳಸಿಕೊಳ್ಳಬೇಕು. ಅಂತಹವರನ್ನು ಒಳಗೊಂಡಂತೆ ಸಂಚಾರಿ ತಂಡಗಳನ್ನು ರಚಿಸಬೇಕು. ಈ ತಂಡಗಳಿಗೆ ಸೂಕ್ತ ತರಬೇತಿ ಮಾರ್ಗದರ್ಶನ ಮತ್ತು ಪೂರಕ ಪರಿಕರಗಳನ್ನು ಒದಗಿಸಬೇಕು. ಇದು ಪಂಚಾಯತ್ ಸದಸ್ಯರಿಗೆ ನಿರಂತರ ಅರಿವು ಮೂಡಿಸುವ ತಂಡಗಳಾಗಿರಬೇಕು.

೨. ಚುನಾವಣೆ ಮುಗಿದ ಕೂಡಲೆ ಹೊಸದಾಗಿ ಆಯ್ಕೆಯಾದ ಪ್ರತಿನಿಧಿಗಳಿಗೆ ತರಬೇತಿ ನೀಡುವುದಕ್ಕೆ ಇಂತಹದೊಂದು ಕ್ರಮ ಪೂರಕವಾಗುತ್ತದೆ. ಪಂಚಾಯಿತಿ ಪ್ರತಿನಿಧಿಗಳು ಅದರಲ್ಲೂ ಮುಖ್ಯವಾಗಿ ತಮ್ಮ ಪಾತ್ರ ನಿರ್ವಹಣೆಯ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಇಲ್ಲದ, ತರಬೇತಿಯ ಯಾವ ಅನುಭವವೂ ಇಲ್ಲದ ಮಹಿಳಾ ಪ್ರತಿನಿಧಿಗಳಿಗೆ ಈ ತರಬೇತಿ ಕ್ರಮ ಹೆಚ್ಚು ಸಹಾಯಕವಾಗುತ್ತದೆ.

ಕೆಲವೊಂದು ಅಧ್ಯಯನದಿಂದ ದೃಢಪಟ್ಟಿರುವ ಸಂಗತಿ ಎಂದರೆ, ಬಹಳಷ್ಟು ಪಂಚಾಯಿತಿಯ ಮಹಿಳಾ ಸದಸ್ಯರಿಗೆ ಮಾಹಿತಿ ಪೂರ್ಣವಾದ ತರಬೇತಿ ಲಭ್ಯವಾಗಿಲ್ಲ. ಹಾಗಾಗಿಯೇ ಸಮರ್ಪಕ ಸಹಭಾಗಿತ್ವದ ಪಾತ್ರ ನಿರ್ವಹಣೆ ಸಾಧ್ಯವಾಗಿಲ್ಲ ಎಂಬುವುದಾಗಿದೆ.

೩. ಪಂಚಾಯತ್ ಸದಸ್ಯರುಗಳಿಗೆ ಹತ್ತಿರವಿರುವಂತೆ ತರಬೇತಿಯನ್ನು ಮತ್ತು ಮಾಹಿತಿ ಸಂವಹನ ಜಾಲ ರೂಪುಗೊಳ್ಳಬೇಕು. ಪಂಚಾಯತ್‌ನ ಸದಸ್ಯರುಗಳಿಗೆ ಬ್ಲಾಕ್ ಮಟ್ಟದಲ್ಲಿಯೇ ಶಿಕ್ಷಣ ಮತ್ತು ಮಾಹಿತಿಯನ್ನು ಒದಗಿಸುವ ಉದ್ದೇಶದ ಸಂಪನ್ಮೂಲ ಕೇಂದ್ರವಾಗಿ ಕಾರ್ಯ ನಿರ್ವಹಿಸುವ ಪಂಚಾಯಿತಿಯ ಮಾಹಿತಿ ಮತ್ತು ತರಬೇತಿ ಕೇಂದ್ರಗಳನ್ನು ರಚಿಸಬೇಕು. ರಾಜ್ಯ ಸರ್ಕಾರದ ಪಂಚಾಯತ್‌ರಾಜ್ ಇಲಾಖೆ ವ್ಯಾಪಕವಾದ ಸಂಪರ್ಕ ಜಾಲಗಳೊಂದಿಗೆ ಗ್ರಾಮೀಣಾಭಿವೃದ್ಧಿಯಲ್ಲಿ ತೊಡಗಿಸಿಕೊಂಡ ಅಧಿಕ ಅನುಭವವಿರುವ ಹಾಗೂ ಪಂಚಾಯತಿ

ವ್ಯವಸ್ಥೆಯೊಂದಿಗೆ ಕಾರ್ಯನಿರ್ವಹಿಸಿದ ಆಯಾ ಭಾಗದ ಸರ್ಕಾರೇತರ ಸಂಸ್ಥೆಗಳನ್ನು ಈ ಪ್ರಕ್ರಿಯೆಯಲ್ಲಿ ಬಳಸಿಕೊಳ್ಳಬಹುದು.

೪. ಕೆಲವು ಅಧ್ಯಯನಗಳ ಪ್ರಕಾರ ಪಂಚಾಯಿತಿಯ ಬಹಳಷ್ಟು ಚುನಾಯಿತ ಮಹಿಳಾ ಸದಸ್ಯರಿಗೆ ತರಬೇತಿಯ ನಂತರವೂ ಸಮರ್ಪಕ ಮಾಹಿತಿಯನ್ನು ಪಡೆದುಕೊಂಡಿಲ್ಲ. ಅಲ್ಲದೇ ಅವರೊಳಗೆ ಆತ್ಮವಿಶ್ವಾಸವನ್ನು ಮೂಡಿಸುವಲ್ಲಿಯೂ ತರಬೇತಿಗಳು ಹೆಚ್ಚು ಯಶಸ್ವಿಯಾಗಿಲ್ಲ. ಅಂದರೆ ಈ ತರಬೇತಿಗಳು ಪಂಚಾಯಿತಿ ಸದಸ್ಯರಲ್ಲಿ ಸಾಮರ್ಥ್ಯ ರೂಢಿಸುವುದರಲ್ಲಿ ಮತ್ತು ಆಸಕ್ತಿಯನ್ನು ಮೂಡಿಸುವಲ್ಲಿ ವಿಫಲವಾಗಿವೆ ಎನ್ನಬಹುದು. ಹಾಗಾಗಿ ಅವರ ಸಾಮರ್ಥ್ಯ ಮತ್ತು ಆತ್ಮವಿಶ್ವಾಸವನ್ನು ಹೆಚ್ಚುಗೊಳಿಸಿ ಮಹಿಳೆಯರ ಸಹಭಾಗಿತ್ವವನ್ನು ಹೆಚ್ಚು ಅರ್ಥ ಪೂರ್ಣಗೊಳಿಸಿ ಆ ಮೂಲಕ ಬಲವರ್ಧನೆಗೆ ಪೂರಕವಾಗುವಂತಹ ಕಾರ್ಯಕ್ರಮಗಳು ನಿರಂತರವಾಗಿ ನಡೆಯಬೇಕಾದ ಅಗತ್ಯವಿದೆ. ಇಲ್ಲಿ ಪಂಚಾಯತ್ ರಾಜ್ ಮತ್ತು ಗ್ರಾಮೀಣಾ ಭಿವೃದ್ಧಿಗೆ ಸಂಬಂಧಿಸಿದ ಸರ್ಕಾರಿ ಇಲಾಖೆಗಳೂ, ಅಸ್ತಿತ್ವದಲ್ಲಿ ಇರುವ ತರಬೇತಿ ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು, ಸಮಾಜ ಸೇವಕರು, ಈ ಕಾರ್ಯಕ್ರಮಗಳಲ್ಲಿ ತೊಡಗುವಂತಾಗಬೇಕು. ಈ ಮೂಲಕ ಇದಕ್ಕೆ ಸಂಬಂಧಿಸಿದ ನಿರ್ದಿಷ್ಟ ಕಾರ್ಯತಂತ್ರ ಮತ್ತು ವಿವಿಧೋದ್ದೇಶ ಕಾರ್ಯ ಕ್ರಮಗಳು ರೂಪಿತವಾಗಿ ಅನುಷ್ಠಾನಕ್ಕೆ ಬರಬೇಕು.

೫. ತರಬೇತಿಯ ಮೂಲಕ ಸ್ವಲ್ಪಮಟ್ಟಿಗಿನ ಅರಿವು ಮತ್ತು ಸಹಭಾಗಿತ್ವ ಸಾಧ್ಯವಾಗಿದ್ದರೂ ಈಗಲೂ ನ್ಯೂನ್ಯತೆಗಳು ಉಳಿದುಕೊಂಡಿವೆ. ಸಮರ್ಥವಾದ ಪಂಚಾಯಿತಿ ನಿರ್ವಹಣೆ ಮತ್ತು ನಾಯಕತ್ವದ ವಿವಿಧ ಕೌಶಲ್ಯಗಳ ಕುರಿತ ತರಬೇತಿ ನೀಡದಿದ್ದರೇ ಈ ನ್ಯೂನತೆಗಳನ್ನು ಮೀರುವುದು ಸಾಧ್ಯವಾಗುವುದಿಲ್ಲ. ಮುಖ್ಯವಾಗಿ ಯೋಜನೆಗಳನ್ನು ರೂಪಿಸುವುದು, ಸಭೆಯ ಕಾರ್ಯಕಲಾಪ ಗಳ ದಾಖಲೆ, ಪಂಚಾಯಿತಿ ಸಭೆಗಳ ಆಯೋಜನೆ, ಕಛೇರಿ ದಾಖಲೆಗಳ ನಿರ್ವಹಣೆ, ಲೆಕ್ಕ ಪತ್ರ ನಿರ್ವಹಣೆ, ಮತ್ತಿತರ ಬಹುಮುಖ್ಯ ಪಂಚಾಯಿತಿ ಕಾರ್ಯಗಳಿಗೆ ಸಂಬಂಧಿಸಿದ ಕೌಶಲ್ಯ ಗಳ ಕುರಿತ ತರಬೇತಿ ಹೆಚ್ಚು ಅತ್ಯಗತ್ಯವಾದದ್ದು. ಮಹಿಳಾ ಸದಸ್ಯರನ್ನು ದೃಷ್ಟಿಯಲ್ಲಿ ಇಟ್ಟು ಕೊಂಡೇ ಈ ತರಬೇತಿ ಕಾರ್ಯಕ್ರಮಗಳು ಆಯೋಜಿತವಾಗಬೇಕೆಂದು ಮುಖ್ಯ.

ಪಂಚಾಯತ್‌ರಾಜ್ ಸದಸ್ಯರಿಗೆ ಯಶಸ್ವಿಯಾಗಿ ತರಬೇತಿ ಆಯೋಜಿಸುವ ಬ್ಲಾಕ್ ಮಟ್ಟದ ಮಾಹಿತಿ ಮತ್ತು ತರಬೇತಿ ಕೇಂದ್ರದೊಂದಿಗೆ ಸಮನ್ವಯತೆ ಹೊಂದಿರುವಂತಹ ಜಿಲ್ಲಾವಾರು ನೊಡೆಲ್ ಏಜೆನ್ಸಿಯೊಂದರ ಅಗತ್ಯವಿದೆ. ಇದು ಜಿಲ್ಲಾಮಟ್ಟದ ವಿವಿಧ ಹಂತಗಳ ಪಂಚಾಯತ್ ಸದಸ್ಯರು, ಸಂಬಂಧಿತ ಇಲಾಖೆಗಳ ಅಧಿಕಾರಿಗಳು ಪಡೆದುಕೊಂಡ ಅನುಭವಗಳು ಮತ್ತು ಆ ಮೂಲಕ ಗಳಿಸಿದ ಪ್ರಯೋಜನೆಗಳನ್ನು ತಿಳಿದುಕೊಳ್ಳಲು ಇದು ಸಹಾಯಕವಾಗುತ್ತದೆ.

ಈ ರೀತಿಯಲ್ಲಿ ಮಹಿಳೆಯರಿಗೆ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಮಹಿಳೆಯರನ್ನು ಉತ್ತಮ ಆಡಳಿತಗಾರರನ್ನಾಗಿ ತಯಾರು ಮಾಡಬಹುದಾಗಿದೆ.

ಆಡಳಿತದಲ್ಲಿ ಮಹಿಳೆಯರ ಸಹಭಾಗಿತ್ವದ ಅವಶ್ಯಕತೆಯನ್ನು ಎತ್ತಿತೋರಿಸದೆ ಹಾಗೂ ಮಹಿಳೆಯ ಪಾಲುದಾರಿಕೆಯೊಂದಿಗೆ ಸಮಾಜದ ಅಭಿವೃದ್ಧಿಯಲ್ಲಿ ಮಹತ್ವದ ಬದಲಾವಣೆಗಳು

ಸಾಧ್ಯ ಎಂಬುದು ಸ್ಪಷ್ಟವಾಗಿದೆ. ಒಟ್ಟಾರೆಯಾಗಿ ಮಹಿಳಾ ಸದಸ್ಯರ ಎಲ್ಲಾ ಬಗೆಯ ಮಿತಿ ಮತ್ತು ಸಾಧ್ಯತೆಗಳನ್ನು ಕುರಿತು ಪ್ರಾತಿನಿಧಿಕ ನೆಲೆಯಲ್ಲಿ ಆಡಳಿತ ನಡೆಸುವ ಗಂಭೀರ ಪ್ರಯತ್ನ ಇದಾಗಿದೆ. ಶೇಕಡ ೫೦ರಷ್ಟು ಮೀಸಲಾತಿಯ ಮೂಲಕ ಮಹಿಳೆಯ ಆಡಳಿತದ ಒಂದು ಅವಶ್ಯಕ ಭಾಗವಾಗಬೇಕೆನ್ನುವುದನ್ನು ಇದು ಹೆಚ್ಚು ದೃಢಪಡಿಸಿದೆ ಮತ್ತು ಪುರುಷನಿಗೆ ಸಮಾನಾಂತರವಾಗಿ ನಿಲ್ಲಬಲ್ಲಳು ಎನ್ನುವುದನ್ನು ಅದಕ್ಕೆ ಪೂರಕವಾಗಿ ಅವಳಿಗೆ ಸೂಕ್ತ ಮಾರ್ಗದರ್ಶನ ನೀಡುವುದರ ಮೂಲಕ ಸಾಧಿಸಿ ತೋರಿಸುವ ಅಗತ್ಯವಿದೆ ಎನ್ನುವುದು ಸ್ಪಷ್ಟವಾಗಿದೆ.

ಸ್ಥಳೀಯ ಆಡಳಿತಕ್ಕೆ ದೊರಕಿರುವ ಮೀಸಲಾತಿಯನ್ನು ಒಂದು ಪ್ರಯೋಗವೆಂದು ಸಹ ಭಾವಿಸಲು ಅವಕಾಶವಿದೆ. ಹಾಗಾಗಿ ಈ ಗ್ರಾಮ ಪಂಚಾಯಿತಿಗಳು ಮಹಿಳಾ ಮೀಸಲಾತಿಯಿಂದ ಉತ್ತಮ ಆಡಳಿತ ಯಶಸ್ಸು ಸಾಧ್ಯವಾದರೆ. ನಾಳಿನ ದಿನಗಳಲ್ಲಿ ಉಳಿದ ಎಲ್ಲಾ ಹಂತಗಳಲ್ಲೂ ಶೇ. ೫೦ರ ಮಹಿಳಾ ಮೀಸಲಾತಿಯನ್ನು ಕೇಳುವ ದನಿ ಮತ್ತಷ್ಟು ಗಟ್ಟಿಯಾಗಬಹುದು. ಮಹಿಳಾ ಸಬಲೀಕರಣಕ್ಕೆ ವಿಶೇಷವಾದ ಅರ್ಥವೂ ದೊರೆಯಬಹುದು. ಸರ್ಕಾರಕ್ಕೆ ಮಹಿಳೆಯನ್ನು ತನ್ನ ಒಟ್ಟು ಆಡಳಿತ ವ್ಯವಸ್ಥೆಯಲ್ಲಿ ಸಮಾನವಾಗಿ ಪರಿಗಣಿಸುವುದು ಒತ್ತಡವೂ ಆಗಬಹುದು.

...

೮

# ಬಿಜಾಪುರ ತಾಲೂಕು ಪಂಚಾಯತಿಯಲ್ಲಿ ಮಹಿಳೆಯರ ಸಹಭಾಗಿತ್ವ

**ಸರೋಜಾ ಎಸ್. ಸಂತಿ**

**ಡಾ. ಎಂ. ಬಿ. ದಿಲ್‌ಶಾದ್**

ಪ್ರಸ್ತುತ ಅಧ್ಯಯನವು ತಾಲೂಕ ಪಂಚಾಯತ್ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ ವನ್ನು ಕುರಿತಾಗಿದೆ. ತಾಲೂಕ ಪಂಚಾಯತ್‌ನಲ್ಲಿ ಮಹಿಳೆ ಎನ್ನುವುದೇ ಸೂಚ್ಯವಾಗಿ ಮಹಿಳಾ ಮೀಸಲಾತಿಯನ್ನು ತಿಳಿಸುತ್ತದೆ. ತಾಲೂಕ ಪಂಚಾಯತ್ ವ್ಯವಸ್ಥೆಯನ್ನು ಒಂದು ರಾಜಕೀಯ ಸಂಸ್ಥೆಯಾಗಿದ್ದು; ಅದನ್ನು ವಿಕೇಂದ್ರೀಕರಣದ ಒಂದು ಚಿಂತನಾ ಕ್ರಮವಾಗಿ ಪರಿಭಾವಿಸುತ್ತದೆ. ಅಂದರೆ ಮಹಿಳಾ ಸಮುದಾಯ, ಮಹಿಳಾ ಮೀಸಲಾತಿಯಲ್ಲಿ ಬರುವ ಮಹಿಳಾ ಸದಸ್ಯರನ್ನು ಸ್ವೀಕರಿಸುವಲ್ಲಿ ವಿಕೇಂದ್ರೀಕರಣ ತತ್ವ ಕಟ್ಟಿಕೊಡುವ ದೃಷ್ಟಿಕೋನವನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಆಶಯವಾಗಿದೆ.

ಸಹಭಾಗಿತ್ವ ಹಾಗೂ ಭಾಗವಹಿಸುವಿಕೆಯ ಈ ಎರಡು ಪರಿಕಲ್ಪನೆಗಳು ಸೂಕ್ಷ್ಮವಾಗಿ ಭಿನ್ನ ಅರ್ಥಗಳನ್ನು ಹೊಂದಿವೆ. ಭಾಗವಹಿಸುವಿಕೆಯು ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ವೈಯಕ್ತಿಕತೆಯ ಮೇಲೆ ಮುಂದುವರೆಯುತ್ತದೆ. ಸಹಭಾಗಿತ್ವವು ಮೂಲವಾಗಿ ವೈಯಕ್ತಿಕತೆಯಿಂದ ಪ್ರಾರಂಭವಾಗಿ ಸಹಭಾಗವಹಿಸುವಿಕೆಯಾಗಿ ಮುಂದುವರೆಯುತ್ತದೆ. ಆದ್ದರಿಂದ ಈ ಲೇಖನದ ಉದ್ದೇಶವೇ ಮಹಿಳಾ ಸದಸ್ಯರು ಮತ್ತು ಪುರುಷ ಸದಸ್ಯರು ತಾಲೂಕ ಪಂಚಾಯತ್ ಕಾರ್ಯ ಚಟುವಟಿಕೆಗಳಲ್ಲಿ ಸಹಭಾಗಿಗಳಾಗಿ ಯಾವ ತೆರನಾಗಿ ಕಾರ್ಯನಿರ್ವಹಿಸುತ್ತಾರೆ ಎಂಬುದನ್ನು ಅವಲೋಕಿಸುವುದಾಗಿದೆ. ಅಂದರೆ ಸಹಭಾಗಿತ್ವವು ಭಾಗವಹಿಸುವಿಕೆಯ ಮೂಲಕ ಪ್ರಾರಂಭ ವಾಗಿ, ಸಹಭಾಗವಹಿಸುವಿಕೆಗೆ ಕೇಂದ್ರೀಕೃತವಾಗುತ್ತದೆ. ಸಹ ಎನ್ನುವುದು ಕೂಡಿಕೊಂಡು, ಸೇರಿಕೊಂಡು ಮತ್ತು ಸಮನಾಗಿ ಪಾಲದಾರರಾಗುವುದೆಂದು ಪರಿಭಾವಿಸಬಹುದಾಗಿದೆ.

ಭಾರತೀಯ ಸಂದರ್ಭದಲ್ಲಿ ೧೯೭೪ರ ಸಮಾನತೆಯೆಡೆಗೆ ವರದಿ, ಮಹಿಳಾ ಚಳುವಳಿ, ಮಹಿಳಾ ಅಧ್ಯಯನದ ಪ್ರವೇಶ ಸ್ತ್ರೀವಾದಿ ಚಿಂತನೆ, ಪ್ರಗತಿಪರ ಆಲೋಚನೆಗಳ ಕಾರಣವಾಗಿ ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲಿ ಸರಿಸಮಾನವಾಗಿ ಭಾಗವಹಿಸಬೇಕೆಂಬ ಧೋರಣೆಗಳು ಮುಂಚೂಣಿಗೆ ಬಂದವು. ರಾಜಕೀಯ ಚಿಂತಕರು ಸಹ ಮಹಿಳಾ ಮೀಸಲಾತಿ ನೀಡಬೇಕೆಂಬ ಧೋರಣೆಯನ್ನೇ ಆಗಿನ ಸಂದರ್ಭದಲ್ಲಿ ತಳೆದಿದ್ದಿರಬಹುದು. ಇಂದು ಮಹಿಳಾ ಮೀಸಲಾತಿಯ ವಿಷಯವು ಬೇರೆ ಆಯಾಮವನ್ನು ಪಡೆಯುತ್ತಲಿರುವ ವಿಷಯ. ಇದು ಬೇರೆ ರೀತಿಯದು. ಆದರೆ ಅಂದು ಸ್ಥಳೀಯ ಮಟ್ಟದಲ್ಲಿ ನೀಡಿದ ಮಹಿಳಾ ಮೀಸಲಾತಿ ಸಬಲೀಕರಣದ ಆಶಯ ಸಮಾನತೆಯ ಪ್ರತಿಪಾದನೆ ಮಾತ್ರ ಆಗಿರದೆ, ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಯರು ಭಾಗವಹಿಸಬೇಕು. ಇದು ಸಮುದಾಯದ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುವ ಎಲ್ಲೆಯನ್ನು ಮೀರಿ ಸಬಲೀಕರಣವನ್ನು ವ್ಯಕ್ತಿಯೆಡೆಗೆ/ವೈಯಕ್ತಿಕತೆಗೆ ವಿಸ್ತರಿಸಲು ಸಾಧ್ಯವಾಗುತ್ತದೆಂಬ ಆಶಯವನ್ನು ಪ್ರಕಟ ಪಡಿಸುವುದು ಆಗಿತ್ತು.

ಬಿಜಾಪುರ ಜಿಲ್ಲೆಯು ಉತ್ತರ ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಒಂದಾಗಿದ್ದು, ಮುಂಬೈ ಕರ್ನಾಟಕದ ಪ್ರದೇಶದಲ್ಲಿ ಹಿಂದುಳಿದ ಜಿಲ್ಲೆಯೆಂಬ ಹಣೆಪಟ್ಟಿಯನ್ನು ಕಟ್ಟಿಕೊಂಡಿದೆ. ಜಿಲ್ಲೆ ೫ ತಾಲೂಕುಗಳನ್ನು ಒಳಗೊಂಡಿದ್ದು, ಡಿ.ಎಂ.ನಂಜುಡಪ್ಪ ವರದಿಯನ್ವಯ ೪ ಅತ್ಯಂತ ಹಿಂದುಳಿದ ತಾಲ್ಲೂಕು ಹಾಗೂ ೧ ಹಿಂದುಳಿದ ತಾಲೂಕನ್ನು ಒಳಗೊಂಡಿದೆ. ೨೦೦೧ರಲ್ಲಿ ಲಿಂಗಾನುಪಾತ ೯೪೮, ಮತ್ತು ೦-೬ ವಯೋಮಾನದಲ್ಲಿ ಲಿಂಗಾನುಪಾತ ೯೨೮. ಸಾಕ್ಷರತಾ ಪ್ರಮಾಣ ೫೭.೦೦, ಪುರುಷರ ಸಾಕ್ಷರತಾ ಪ್ರಮಾಣ ೬೯.೯೦ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ೪೩.೫೦ರಷ್ಟಿತ್ತೆಂದು ಹೇಳಲಾಗಿದೆ.

ಈ ಪ್ರದೇಶದಲ್ಲಿ ಮಹಿಳೆಯರು ಸಾಮಾಜಿಕ ಸಂದರ್ಭ ಇಕ್ಕಟಿನಿಂದ ಕೂಡಿದೆ. ಅಂದರೆ ಹೆಣ್ಣಿಗೆ ಖಾಸಗಿ ಬದುಕಿನಲ್ಲಿ ವಿಧಿಸಲಾಗಿರುವ ಮರ್ಯಾದೆಯ ಚೌಕಟ್ಟು ಮತ್ತು ನಿರ್ಬಂಧಗಳಲ್ಲಿ ಜೀವಿಸಬೇಕಾದಂತಹ ಸ್ಥಿತಿಯು ಸಾರ್ವಜನಿಕ ವಲಯಗಳಲ್ಲಿ ಇನ್ನಷ್ಟು ಗಾಢವಾಗಿ ಕಂಡು ಬರುತ್ತದೆ. ಅದರಿಂದ ಮಹಿಳೆಯರಿಗಷ್ಟೇ ಸಮುದಾಯ, ಸಂಸ್ಕೃತಿಯ ಹೊಣೆಯನ್ನು ಹೊರಿಸ ಲಾಗಿರುವ ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಅವಳಿಗಾಗಿರುವ ಸಂಕಷ್ಟಗಳನ್ನು ಹೊರಹಾಕ ಲಾಗದ ಸಂಕಷ್ಟದ ಬದುಕು ನಡೆಸುತ್ತಿದ್ದಾಳೆ. ಪ್ರಧಾನ ವ್ಯವಸ್ಥೆಯು ಹಲವು ಸಂದರ್ಭದಲ್ಲಿ ಮಹಿಳಾ ಭಾಗವಹಿಸುವಿಕೆಯನ್ನು ಕೇವಲ ಔಪಚಾರಿಕ ನೆಲೆಯಲ್ಲಿ ಮಾತ್ರ ಸೀಮಿತಗೊಳಿಸಲು ಬಯಸುತ್ತದೆ. ಅದರ ಪರಮಾಧಿಕಾರದಲ್ಲಿ ಆಕೆಯನ್ನು ಅಸಹಾಯಕಳನ್ನಾಗಿಸಿದೆ. ಇದರಿಂದ ಅವರ ಸಾಮಾಜಿಕ ಸ್ಥಾನ ಮತ್ತು ಅಸುರಕ್ಷತೆಯ ಕೌಟುಂಬಿಕ ಚೌಕಟ್ಟು, ಸಂಪ್ರದಾಯ ಆಚರಣೆ ಗಳು, ರೂಢಿಯಿಂದ ಬಂದಿರುವ ಸಾಂಸ್ಕೃತಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರಾಜಕೀಯ ವಿವಿಧ ಆಯಾಮಗಳನ್ನು ಪರಿಶೀಲಿಸಬೇಕು. ಬಿಜಾಪುರ ತಾಲೂಕ್ ಪಂಚಾಯತ್ ಮಿತಿಯಲ್ಲಿ ಮಹಿಳಾ ಭಾಗವಹಿಸುವಿಕೆಯ ಸ್ವರೂಪ ಹಾಗೂ ಸಹಭಾಗಿತ್ವವನ್ನು ಇಲ್ಲಿ ಗ್ರಹಿಸಲು ಪ್ರಯತ್ನಿಸ ಲಾಗಿದೆ.

ಮಹಿಳೆ ಮತ್ತು ಪುರುಷ ಸದಸ್ಯರ ಭಾಗವಹಿಸುವಿಕೆಗಿರುವ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಶೈಕ್ಷಣಿಕ ಅಂಶಗಳಾವುವು; ಸಹಭಾಗವಹಿಸುವಿಕೆಗೆ ಪ್ರೇರಕಾಂಶಗಳು ಹಾಗೂ ಅಡ್ಡಿಗಳಾವುವು; ಅವರ ನಡುವಿನ ವ್ಯತ್ಯಾಸಗಳಾವುವು ಎಂಬುದನ್ನು ತಿಳಿಯವುದರ ಜೊತೆಗೆ ಮಹಿಳೆಯರು ಪಂಚಾಯತ್‌ಗೆ ಆಯ್ಕೆಯಾಗಿ ಯಾವ ತರಹದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ ಎಂಬುದನ್ನು ಗುರುತಿಸುವುದು ಅಗತ್ಯವಾಗಿದೆ.

ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯೊಬ್ಬಳು ಹೊರ ಜಗತ್ತಿಗೆ ಮುಖಾಮುಖಿಯಾಗಲು ಆಧುನಿಕ ಸಂದರ್ಭದಲ್ಲಿ ಸರಳವೆನಿಸಿದರೂ ಸಾಕಷ್ಟು ಕಷ್ಟಕರ ಪರಿಸ್ಥಿತಿಗಳನ್ನು ಮಹಿಳಾ ಸಮುದಾಯ ಎದುರಿಸಬೇಕಾಗುತ್ತದೆ. ಈ ಎಲ್ಲ ಅಂಶಗಳನ್ನು ಇಲ್ಲಿ ಗಮನಿಸಲಾಗಿದೆ. ಆದರೆ ಅಧ್ಯಯನ ಆಯ್ಕೆಯಲ್ಲಿ ಸಾಮಾಜಿಕ ಭಿನ್ನತೆಗೆ ಮಹತ್ವವನ್ನು ಕೊಡಲಾಗಿದೆ. ಈ ತರ್ಕವು ಜಾತಿ, ವರ್ಗ, ಪ್ರದೇಶ, ರಾಜಕೀಯ ಹಿನ್ನೆಲೆ, ಶಿಕ್ಷಣ, ಆಸಕ್ತಿಗಳು ಪಾತ್ರ ನಿರ್ವಹಣೆಯಲ್ಲಿ ಪ್ರಮುಖವಾಗುತ್ತಿವೆ. ಆದ್ದರಿಂದ ವಿವಿಧ ಸಮುದಾಯದ ಮಹಿಳೆಯರನ್ನು ಪ್ರಾತಿನಿಧಿಕ ಭಾಗವಾಗಿ ಪ್ರಕರಣಗಳನ್ನು ದಾಖಲಿಸಿ ಅರ್ಥೈಸಲಾಗಿದೆ. ಹಾಗೂ ವಿಷಯ ಪುನರಾವರ್ತನಗೊಳ್ಳುವ ಪ್ರಕರಣಗಳನ್ನು ಕೈಬಿಡಲಾಗಿದೆ. ಅಧ್ಯಯನವು ಮೊದಲು ತಾಲೂಕ್ ಪಂಚಾಯತಿ ಮಹಿಳಾ ಸದಸ್ಯೆಯರ ಸಹಭಾಗಿತ್ವ ಪ್ರಮಾಣವನ್ನು ಪರಿಗಣಿಸಿದೆ. ಅಂದರೆ ಈ ತಾಲೂಕ್ ಪಂಚಾಯತಿಯು ಒಟ್ಟು ೩೩ ಸದಸ್ಯರನ್ನು ಒಳಗೊಂಡಿದೆ. ಸದಸ್ಯರ ವರ್ಗವಾರು ವಿವರ ಈ ರೀತಿಯಾಗಿದೆ :

ವರ್ಗವಾರು ವಿವರ

| ಸಾಮಾನ್ಯ | | ಹಿಂದುಳಿದ ವರ್ಗ | | ಅನುಸೂಚಿತ ಜಾತಿ | | ಅನುಸೂಚಿತ ಪಂಗಡ | |
|---|---|---|---|---|---|---|---|
| ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆ ಪುರು | ಪುರು ಪುರು |
| ೦೫ | ೦೭ | ೦೪ | ೦೭ | ೦೩ | ೦೬ | ೦೧ | - |

ಒಟ್ಟು ೩೩ ಸದಸ್ಯರಲ್ಲಿ ೧೩ ಜನ ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲರೂ ಮೀಸಲಾತಿಯಿಂದ ಆಯ್ಕೆಯಾಗಿದ್ದಾರೆ. ಇವರಲ್ಲಿಯೂ ಸ್ಪರ್ಧೆ ಇತ್ತು. ಯಾವ ಒಬ್ಬ ಸದಸ್ಯರು ಅವಿರೋಧವಾಗಿ ಆಯ್ಕೆಯಾಗಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಮಹಿಳೆಯರೆಲ್ಲರೂ ಮೀಸಲಾತಿಯಿಂದಾಗಿ ಇಂದು ತಾಲೂಕ ಪಂಚಾಯತಿಯನ್ನು ನೋಡುವಂತಾಗಿದೆ. ಇಲ್ಲದಿದ್ದರೆ ಇವರಿಗೆ ರಾಜಕೀಯದ ಬಗ್ಗೆ ಏನು ಗೊತ್ತಾಗುತ್ತಿರಲಿಲ್ಲ. ಇದರಲ್ಲಿ ಸಾಮಾನ್ಯ ವರ್ಗದ ಮಹಿಳೆ ಹಾಗೂ ಪುರುಷರೆಲ್ಲರೂ ಸ್ಥಿತಿವಂತರಾಗಿದ್ದಾರೆ. ಆದರೆ ಯಾರೂ ಸಹ ಕನಿಷ್ಠ ಮಟ್ಟವನ್ನು ಹೊಂದಿಲ್ಲ. ತುಂಬಾ ಸ್ಥಿತಿವಂತರಲ್ಲದಿದ್ದರೂ ಅವರುಗಳ ಕುಟುಂಬ ಜೀವನ ನಿರ್ವಹಣೆಗೆ ಯಾವುದೇ ರೀತಿ

ಯಾದ ಕಷ್ಟವಿಲ್ಲ. ರಾಜಕೀಯಕ್ಕೆ ಪ್ರವೇಶಿಸಬೇಕಾದರೆ ಇವರು ಸ್ಥಿತಿವಂತರಾಗಿರುವುದು ಕಾರಣ ವಾಗಿದೆ. ಏಕೆಂದರೆ ರಾಜಕೀಯವೆನ್ನುವುದು ಹಣ ಬಲದ ಮೇಲೆ ಆಧಾರಿತ ವಾಸ್ತವ. ಇಲ್ಲ ದಿದ್ದರೆ ರಾಜಕೀಯ ಪಕ್ಷಗಳು ಟಿಕೆಟ್‌ನ್ನು ನೀಡುವುದಿಲ್ಲ. ವೈಯಕ್ತಿಕ ಸಾಮರ್ಥ್ಯ, ಸೇವಾ ಮನೋ ಭಾವನೆ, ಆಸಕ್ತಿ ಎಂಬುದರ ಮೇಲೆ ಇಂದಿನ ರಾಜಕೀಯ ಅವಲಂಬಿಸಿಲ್ಲ. ಹಣ ಬಲ, ತೋಳ ಬಲ, ಕಾರ್ಯತಂತ್ರಗಳು, ಪಕ್ಷಗಳ ಬಲಾಬಲ ಎಂಬ ಇತ್ಯಾದಿ ಅಂಶಗಳನ್ನು ಅವಲಂಬಿ ಸಿದೆ. ಅವುಗಳೊಳಗೆ ಪಿತೃಪ್ರಧಾನತೆಯಿದೆ.

೨೦೦೧ರ ಜನಗಣತಿಯಂತೆ ಪರಿಶಿಷ್ಟ ಪಂಗಡದ ಜನಸಂಖ್ಯೆ ಬಿಜಾಪುರ ಜಿಲ್ಲೆಯಲ್ಲಿ ಶೇ.೧.೬೬ ಮತ್ತು ಪರಿಶಿಷ್ಟ ಜಾತಿ ಜನಸಂಖ್ಯೆ ಶೇ. ೧೮.೪೫ರಷ್ಟಿದೆ. "ಬಡತನದ ತೀವ್ರತೆ ಇವರಲ್ಲಿ ಅತಿ ಹೆಚ್ಚು. ಸಾಮಾಜಿಕವಾಗಿ ಅನೇಕ ತಾರತಮ್ಯಗಳಿಗೆ ಒಳಗಾಗಿದ್ದಾರೆ. ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ರಾಜಕೀಯವಾಗಿ ಅಬಲರಾಗಿದ್ದಾರೆ" ಎಂದು ಟಿ.ಆರ್ ಚಂದ್ರಶೇಖರ ಅವರು 'ವಿಜಾಪುರ ಜಿಲ್ಲೆ ಅಭಿವೃದ್ಧಿ ಮತ್ತು ದುಸ್ಥಿತಿ: ಒಂದು ಅಧ್ಯಯನ'ದಲ್ಲಿ ತಿಳಿಸಿದ್ದಾರೆ. ಜಾತಿಯ ತಾರತಮ್ಯಗಳು ಇನ್ನು ಸಂಪೂರ್ಣವಾಗಿ ಕಳಚಿಕೊಂಡಿಲ್ಲ. ಇನ್ನು ಕೆಲವು ಗ್ರಾಮ ಗಳಲ್ಲಿ ದಲಿತರನ್ನು ದೂರವಿರಿಸುವುದು ಕಂಡುಬರುತ್ತದೆ. ದಲಿತ ಮಹಿಳೆಯರು ಊರಿನ ಪ್ರಮುಖರ ಜೊತೆ ಎದುರು ನಿಂತು ಮಾತನಾಡುವುದಿಲ್ಲ. ತಲೆ ತಗ್ಗಿಸಿ, ತಲೆ ಮೇಲೆ ಸೆರಗನ್ನು ಹಾಕಿಕೊಂಡು ಮಾತನಾಡುವ ಸಂದರ್ಭಗಳು ಬಂದರೆ ಮಾತನಾಡಬೇಕು ಎಂಬ ಅಲಿಖಿತ ನಿಯಮಗಳು ಜಾರಿಯಲ್ಲಿವೆ. ಮಹಿಳಾ ಸದಸ್ಯರುಗಳೆಲ್ಲರಿಗೂ ಮಹಿಳಾ ಸದಸ್ಯರ ಪರಿಚಯ ತುಂಬಾ ಇಲ್ಲ. ಸಭೆಗಳು ಇದ್ದಾಗ ಬರುವುದು ಹೋಗುವುದು ಆಗ ಮಾತನಾಡಿಸುವುದಕ್ಕೆ ಸೀಮಿತವಾಗಿದೆ. ಜಾತಿ ಜಾತಿಗಳಲ್ಲಿ ಮಹಿಳಾ ಸದಸ್ಯರುಗಳು ನೆಟ್‌ವರ್ಕ ಇಲ್ಲ. ಆದರೆ ಪುರುಷ ಸದಸ್ಯರೆಲ್ಲರಿಗೂ ಒಂದು ಹಂತದ ಪರಿಚಯ ಇದೆ. ಅಲ್ಲದೆ ಇವರುಗಳೆಲ್ಲ ಪಕ್ಷ ರಾಜಕೀಯ ಚಟುವಟಿಕೆಗಳ ಕಾರಣದಿಂದ ಮೊದಲೇ ಪರಿಚಯವಾದವರು. ಆದರೆ ಮಹಿಳಾ ಸದಸ್ಯ ರೆಲ್ಲರಿಗೂ ಈ ತರಹದ ಅವಕಾಶಗಳು ಇಲ್ಲ. ಗ್ರಾಮೀಣ ಪ್ರದೇಶದ ವಾಸಿಗಳು ಹಾಗೂ ಗ್ರಾಮೀಣ ಪ್ರದೇಶದ ಮಹಿಳೆಯರು ಇವರು ಆಗಿರುವದರಿಂದ ಅಲಿಖಿತ ನಿಯಮಗಳನ್ನು ಇವರುಗಳು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

**ವಯೋಮಿತಿ ವಿವರ**

| ವಯಸ್ಸು | ಮಹಿಳಾ ಸದಸ್ಯರು | ಪುರುಷ ಸದಸ್ಯರು |
|---|---|---|
| ೨೧-೩೦ | ೦೨ | ೦೭ |
| ೩೧-೪೦ | ೦೫ | ೦೮ |
| ೪೧-೫೦ | ೦೪ | ೦೪ |
| ೫೧-೬೦ | ೦೨ | ೦೧ |

೨೧ ರಿಂದ ೩೦ ವರ್ಷ ವಯಸ್ಸಿನ ಮಹಿಳಾ ಸದಸ್ಯರ ಸಂಖ್ಯೆ ೦೨ ಇದ್ದರೆ ಪುರುಷರ ಸಂಖ್ಯೆ ೦೭ ರಷ್ಟಿದೆ. ಒಬ್ಬ ಪುರುಷ ಸದಸ್ಯನ ವಯಸ್ಸು ೨೧ ಇರುವುದು ಅತಿ ಕಡಿಮೆ ವಯಸ್ಸಿನಲ್ಲಿಯೇ ತಾಲೂಕ ಪಂಚಾಯತ್ ಸದಸ್ಯರಾಗಿರುವ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಇವರು ಸಹ ರಾಜಕೀಯ ಕ್ಷೇತ್ರಕ್ಕೆ ಬಂದಿರುವುದು ಆಕಸ್ಮಿಕವಾಗಿ ಆದರೂ ಇವರು ಮೊದಲೇ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ ಹಾಗೂ ಅನೇಕ ಸಾಮಾಜಿಕ ಸೇವೆಗಳನ್ನು ಮಾಡಿದ್ದಾರೆ. ಇವರಿಗೆ ರಾಜಕೀಯದಲ್ಲಿ ಪ್ರವೇಶಿಸಬೇಕೆಂಬ ಆಸೆ ಇತ್ತು. ಅದರಲ್ಲಿ ಯಶ್ವಸಿಯಾಗಿದ್ದಾರೆ. ಇವರು ಸಾಮಾನ್ಯ ವರ್ಗದವರಾಗಿದ್ದಾರೆ. ಇವರ ಮನೆಯಲ್ಲಿ ಮೊದಲು ಇವರ ತಾಯಿ ಇವರ ಚುನಾವಣೆಗೆ ಸ್ಪರ್ಧಿಸಲು ಅನುಮತಿ ನೀಡಿರಲಿಲ್ಲ. ಆದರೆ ತಂದೆ ಅನುಮತಿ ನೀಡಿ ಸಹಾಯವನ್ನು ಮಾಡಿದರು.

ಮಹಿಳಾ ಸದಸ್ಯರಲ್ಲಿ ೨೧ ರಿಂದ ೩೦ ವಯಸ್ಸಿನವರ ಸಂಖ್ಯೆ ೦೨ ಇದೆ. ಇವರಿಬ್ಬರು ಶಿಕ್ಷಣ ಪಡೆದಿದ್ದಾರೆ ಎನ್ನುವ ಕಾರಣದಿಂದಲೇ ಇವರನ್ನು ಚುನಾವಣೆಗೆ ಸ್ಪರ್ಧಿಸಲು ಕುಟುಂಬದ ಸದಸ್ಯರ ಒತ್ತಾಯದ ಮೇರೆಗೆ ನಿಂತವರು. ಇವರಿಗೆ ಆಸಕ್ತಿ ಏನು ಇರಲಿಲ್ಲ. ಕುಟುಂಬವೆಂದಾಗ ಮಹಿಳಾ ಸದಸ್ಯರಲ್ಲಿ ಮೊದಲ ಪ್ರಶ್ನೆ ಬರುವುದು ಯಾವುದು ಎಂದು ಅದು ತವರು ಮನೆಯೋ? ಗಂಡನ ಮನೆಯೋ? ಈ ಪ್ರಕರಣಗಳಲ್ಲಿ ಅದು ಗಂಡನ ಮನೆಯೇ ಆಗಿದೆ. ಗಂಡನ ಮನೆಯವರು ಮಹಿಳೆಯರನ್ನು ಪ್ರೋತ್ಸಾಹಿಸುತ್ತಿದ್ದಾರೆ ಎಂದು ಮೇಲನೋಟಕ್ಕೆ ಕಂಡು ಬಂದರು ಇದರ ಹಿಂದೆ ಪುರುಷ ಕೇಂದ್ರಿತ ಯೋಚನೆ ಇರುವುದು ಕಂಡುಬರುತ್ತದೆ. ಇವರುಗಳ ಗಂಡಂದಿರು ಅಲ್ಲಿ ಸ್ಪರ್ಧಿಸಬೇಕೆಂದು ಬಯಸಿದ್ದರು ಆದರೆ ಮೀಸಲಾತಿ ಇರುವುದರಿಂದ ಇವರುಗಳಿಗೆ ಸಾಧ್ಯವಾಗಲಿಲ್ಲ. ಆದ ಕಾರಣ ಯಾಕೆ ಬೇರೆದವರಿಗೆ ಸೀಟು ಬಿಟ್ಟು ಕೊಡಬೇಕು ಎಂಬ ಯೋಚನೆಯಿಂದ ಇವರ ಹೆಂಡತಿಯರು ತಾಲೂಕ ಪಂಚಾಯತ್ ಸದಸ್ಯರಾಗಲು ಸಾಧ್ಯವಾಯಿತು ಅಷ್ಟೇ. ಅಲ್ಲದೆ ಇವರ ಮದುವೆಯಾಗಿ ಇನ್ನು ೧೦ ವರ್ಷಗಳಿಗಿಂತ ಹೆಚ್ಚಾಗಿಲ್ಲ. ಮಕ್ಕಳ ಪಾಲನೆ ಪೋಷಣೆ ಹೊರೆಯಿರುವದರಿಂದ ಯಾಕಾದ್ರೂ ತಾಲೂಕ ಪಂಚಾಯತ್ ಸದಸ್ಯರಾದೇವು ಎಂದು ಅನಿಸಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ರಾಜಕೀಯಕ್ಕೆ ಯುವ ಮಹಿಳೆಯರು ಪ್ರವೇಶಿಸಬೇಕು ಎಂಬ ವಾದಕ್ಕೆ ಇಂತಹ ಪ್ರತಿವಾದಗಳು ಎದುರಾದಾಗ ಏನು ಉತ್ತರಿಸಬೇಕು ಎಂಬುವುದು ಗೊತ್ತಾಗುವುದಿಲ್ಲ. ಸಂತಾನೋತ್ಪತ್ತಿಯ ಚಟುವಟಿಕೆಗಳು ಈ ಹಂತದಲ್ಲಿಯೇ ನಡೆಯುವುದರಿಂದ ರಾಜಕೀಯದಲ್ಲಿ ಭಾಗವಹಿಸುವುದು ಕಷ್ಟವಾಗುತ್ತದೆಂಬುದು ಎಂದೆನಿಸಿದರೂ ಪುರುಷ ಪ್ರಧಾನ ವ್ಯವಸ್ಥೆಯಿಂದಾಗಿ ಕೆಲಸಗಳ ಹಂಚುವಿಕೆ ಲಿಂಗಾಧಾರಿತವಾಗಿ ನಡೆಯುವದರಿಂದ ಮಹಿಳೆಗೆ ಇದು ಸಹಜವಾಗಿಯೇ ಹೊರೆಯೆನಿಸುವುದು. ಜೋರಾಗಿ ಮಾತನಾಡುವಂತಿರುವುದಿಲ್ಲ, ಗಂಡನು ಎಲ್ಲಾ ನೋಡಿಕೊಂಡರು ಸಭೆಗಳಿಗೆ ನಾವೇ ಹೋಗಬೇಕು. ಆಗ ನಮ್ಮ ಸಮಸ್ಯೆ ಅಷ್ಟಿಷ್ಟಲ್ಲ. ಒಂದು ಕಡೆ ತರಬೇತಿಯಲ್ಲಿ ಕ್ರಿಯಾತ್ಮಕ ಭಾಗವಹಿಸಬೇಕು ಎಂದು ಮಾತನಾಡುವವರು ಹೇಳುತ್ತಾರೆ. ಆದರೆ ಹೇಗೆ ಎಂಬುದೆ ಪ್ರಶ್ನೆ. ಮಹಿಳೆಯ ಭಾಗವಹಿಸುವಿಕೆಯು ಕೇವಲ ಔಪಚಾರಿಕ ರಾಜಕೀಯದಲ್ಲಿ ಪ್ರವೇಶ ಪಡೆಯುವುದರಿಂದ ಮಾತ್ರ ಸಾಧ್ಯವಾಗುವುದಿಲ್ಲ. ಮಹಿಳಾ ಬಂಧನವನ್ನು ಎಲ್ಲ ರೀತಿಯಿಂದಲೂ ಬಿಡಿಸ

ಬೇಕಾದ ಅವಶ್ಯಕತೆ ಕಂಡುಬರುತ್ತದೆ. ವಯಸ್ಸಾದ ೫೧ಕ್ಕೂ ಹೆಚ್ಚು ಮೇಲ್ಪಟ್ಟು ವಯಸ್ಸಿನ ಇಬ್ಬರು ಮಹಿಳೆಯರು ನಮಗ ಯಾಕ ರಾಜಕೀಯ, ಮಗಾ ಹೇಳಿದ್ದಾನೆ ಎಂದು ನಾನು ನಿಂತೆ. ಅವನಿಗೆ ಏನಾದರೂ ಅನುಕೂಲವಾಗುತ್ತದೆಂದು. ಆದರೆ ನನಗೆ ಏನೂ ಗೊತ್ತ ಆಗುವುದಿಲ್ಲ. ಮಗಾ ಕರೆದುಕೊಂಡ ಬಂದ ದಿನಾ ಮೀಟಿಂಗಕ್ಕ ಬರತೀನಿ. ಮೀಟಿಂಗ ಒಳಗ ಏನ ನಡಿತ ಅಂತ ಹೇಳತೀನಿ. ನಮಗ ಇಷ್ಟ ವಯಸ್ಸ ಆದರೂ ನಾನು ಗಂಡಸರ ಹಾಗೆ ಎದ್ದು ನಿಂತ ಮಾತನಾಡುವುದಿಲ್ಲ. ನನ್ನ ಮಗಾ ಮೊದಲೇ ನಮ್ಮ ಊರಿಗಿ ಏನ ಕೆಲಸಾ ಮಾಡಬೇಕ ಅಂತ ಅಧ್ಯಕ್ಷರ ಜೊತೆ ಮಾತಾಡಿರತಾನ, ಅವನೇ ಎಲ್ಲಾ ನೋಡಕೊತ್ತಾನ ನನಗ ಕೆಲಸ ಹಗರ ಆಗೈತೀ. ಇಲ್ಲದಿದ್ದರ ಕಷ್ಟ ಆಗತಿತ್ತು. ಊರಾಗ ಜನ ಬಂದು ತಾಲೂಕ ಪಂಚಾಯತ್ ಮೆಂಬರ ಆಗಿರ್ರಿ ಆ ಕೆಲಸಾ ಮಾಡಸರ್ರೀ, ಈ ಕೆಲಸಾ ಮಾಡಸರ್ರೀ ಅಂತ ಬರತಾರ. ನಾನು ಅವರಿಗಿ ಮಾಡಿಸಿ ಕೊಡತೀನಿ ಅಂತ ಹೇಳತೀನಿ. ಮಗಾ ಅದನ್ನ ಓಡಾಡಿ ಮಾಡಿಸಿ ಕೊಡತಾನ. ನಾನು ಅದಕ್ಕ ನನ್ನ ಮಗಾ ಹೇಳದಂಗ ಕೇಳತೀನಿ. ಗಂಡಸರು ಹೊರಗ ಅಡ್ಡಾಡತ್ತಾರ ಅದಕ್ಕ ಅವರಿಗೆ ಎಲ್ಲಾ ಗೊತ್ತ ಆಗತದ. ಮುಂದ ಮಗಾ ಮುಂದಿನ ಇಲೆಕ್ಷನಗೆ ನಿಲ್ಲು ಅಂತ ಹೇಳಿದರ ನಿಲ್ಲತೀನಿ.

ಮಧ್ಯಮ ವಯಸ್ಸಿನ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ. ಈ ವಯಸ್ಸಿನಲ್ಲಿ ಮಹಿಳೆಯರಿಗೆ ಕೌಟುಂಬಿಕ ಹೊರೆಗಳು ಸ್ವಲ್ಪ ಮಟ್ಟಿಗೆ ಕಡಿಮೆಯಾಗಿರುವದರಿಂದ ಮಧ್ಯ ವಯಸ್ಸಿನ ವಿವಾಹಿತ ಸ್ತ್ರೀಯನ್ನು ಹಚ್ಚಾಗಿ ಪರಿಗಣಿಸುತ್ತಾರೆ. ಗಂಡನ ಮನೆಗೆ ಬಂದು ೩೦-೩೫ ವರ್ಷ ವಾಗಿರುದರಿಂದ ಈ ವಯಸ್ಸಿನ ಮಹಿಳೆಯರಿಗೆ ಹೆಚ್ಚು ಪ್ರಾಶಸ್ತ್ಯ ಸಿಗುತ್ತದೆ. ಒಟ್ಟು ೦೯ ಮಹಿಳೆಯರಲ್ಲಿ ಇಬ್ಬರು ಮಹಿಳೆಯರಿಗೆ ಆಸಕ್ತಿ ಇದೆ ಎಂದು ತಿಳಿಸಿದ್ದಾರೆ. ಅಲ್ಲದೆ ರಾಜಕೀಯ ದಲ್ಲಿ ಮುಂದುವರೆಯಲು ಸಹ ಬಯಸಿದ್ದಾರೆ. ಮಧ್ಯ ವಯಸ್ಸಿನ ಪುರುಷರ ಸಂಖ್ಯೆ ೧೨. ಇವರಿಗೂ ಸಹ ಈ ವಯಸ್ಸಿನಲ್ಲಿ ಮಕ್ಕಳು ಬೆಳೆದು ದೊಡ್ಡವರಾಗಿರುತ್ತಾರೆ. ಸಾಕಷ್ಟು ದುಡಿಮೆ ಯನ್ನು ಮಾಡಿರುತ್ತಾರೆ, ಗ್ರಾಮದ ರಾಜಕೀಯ ಪ್ರಕ್ರಿಯೆಗಳಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿ ಕೊಂಡಿರುತ್ತಾರೆ. ಇವರಿಗೆ ಅನುಭವ, ವಯಸ್ಸಿನಿಂದಾಗಿ ಆದ್ಯತೆ ದೊರೆಯುತ್ತದೆ.

**ಶಿಕ್ಷಣ ಮಟ್ಟ**

| ಶಿಕ್ಷಣದ ವಿವರ | ಮಹಿಳಾ ಸದಸ್ಯರು | ಪುರುಷ ಸದಸ್ಯರು |
|---|---|---|
| ಪ್ರಾಥಮಿಕ (೧-೪) | ೦೩ | - |
| ಮಾಧ್ಯಮಿಕ (೫-೭) | ೦೫ | ೦೨ |
| ಪ್ರೌಢ (೮-೧೦) | ೦೪ | ೦೮ |
| ಪಿಯುಸಿ | - | - |
| ಪದವಿ | - | ೧೦ |
| ಸ್ನಾತಕೋತ್ತರ | ೦೧ | - |

ತಾಲೂಕ ಪಂಚಾಯತ್‌ನ ಸದಸ್ಯರೆಲ್ಲರೂ ಸಾಕ್ಷರರಾಗಿರುವುದು ಸಂತೋಷದ ವಿಷಯ. ಪ್ರಾಥಮಿಕ ಹಂತದವರೆಗೆ ಓದಿದ ಮಹಿಳಾ ಸದಸ್ಯರು ೦೮ ಜನರಿದ್ದಾರೆ, ಪುರುಷ ಸದಸ್ಯರ ಸಂಖ್ಯೆ ೦೨. ಎಲ್ಲ ಹಂತಗಳ ಶಿಕ್ಷಣದಲ್ಲಿ ಮಹಿಳೆಯ ಸಂಖ್ಯೆಗಿಂತ ಪುರುಷ ಸದಸ್ಯರ ಸಂಖ್ಯೆ ಹೆಚ್ಚಾಗಿರುವುದು ಕಂಡು ಬಂದಿದೆ. ಆದರೆ ಸ್ನಾತಕೋತ್ತರ ಪದವಿಯನ್ನು ಹೊರತುಪಡಿಸಿ. ಸ್ನಾತಕೋತ್ತರ ಪದವಿ ಪಡೆದ ಮಹಿಳೆ ರಾಜಕೀಯಕ್ಕೆ ಪ್ರವೇಶ ಪಡೆದಿರುವುದು ಹೆಮ್ಮೆಯ ವಿಷಯವಾದರೂ ಈ ಪದವಿಯಿಂದಲೇ ಆಕೆಗೆ ಪಕ್ಷದ ಟಿಕೆಟ್ ಪಡೆದುಕೊಳ್ಳಲು ಸಹಾಯಕವಾಯಿತು ಎಂದು ತಿಳಿಸಿದ್ದಾರೆ. ಇವರಿಗೂ ಸಹ ರಾಜಕೀಯವೆಂದರೆ ಆಸಕ್ತಿ ಇರಲಿಲ್ಲ, ಆದರೆ ಗಂಡನ ಒತ್ತಾಯದ ಮೇರೆಗೆ ನಾಮಪತ್ರ ಸಲ್ಲಿಸಿದರು ಹಾಗೂ ಚುನಾವಣೆಯಲ್ಲಿ ಯಶಸ್ಸನ್ನು ಪಡೆದರು. ಆದರೂ ರಾಜಕೀಯದಲ್ಲಿ ಮಹಿಳೆಯರು ಬಹಳ ಕಷ್ಟವನ್ನು ಅನುಭವಿಸುತ್ತಾರೆ. ಸಾಕ್ಷರತೆ ಅನಕ್ಷರತೆ ಎಂಬ ಅಂಶಗಳು ಮಹಿಳೆಯರ ಪಾಲಿಗೆ ಯಾವುದೇ ರೀತಿಯ ಉಪಯೋಗವಿಲ್ಲ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಎಲ್ಲ ಮಹಿಳೆಯರು ಶೋಷಿತರೆ ಎಂದು ಇವರು ತಿಳಿಸಿದ್ದಾರೆ. ಆಸಕ್ತಿ ಇಲ್ಲದೆ ಬಂದ ಕ್ಷೇತ್ರದಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸುವುದು ಸಾಧ್ಯವಾಗುವುದಿಲ್ಲ. ಅಲ್ಲದೆ ಗಂಡನ ಒತ್ತಾಯದ ಮೇರೆಗೆ ಬಂದ ನಾವುಗಳು ಗಂಡ ಹೇಳಿದಂತೆ ಕೇಳಬೇಕಾದ ಪರಿಸ್ಥಿತಿಯಲ್ಲಿ ಇರುತ್ತೇವೆ. ಸ್ವತಂತ್ರವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುವುದಿಲ್ಲ, ಏಕೆಂದರೆ ಅವರುಗಳು ನಮ್ಮನ್ನು ಸಾರ್ವಜನಿಕವಾಗಿ ಔಪಚಾರಿಕ ರಾಜಕೀಯದಲ್ಲಿ ಗೆಲ್ಲಿಸಿರುತ್ತಾರೆ. ನಾನು ತಾಲೂಕ ಪಂಚಾಯತ್ ಸದಸ್ಯಳಾದಾಗಿನಿಂದ ಜನರು ನೋಡುವ ದೃಷ್ಟಿಕೋನವೇ ಬದಲಾಗಿದೆ. ಮೊದಲು ನಾನು ಶಿಕ್ಷಣ ಪಡೆದಿದ್ದೇನೆ ಎಂದು ಯಾರು ಗುರುತಿಸುತ್ತಿರಲಿಲ್ಲ. ಈಗ ತಾಲೂಕ ಪಂಚಾಯತ್ ಮೆಂಬರ ಅಂತಲೂ, ಅಧ್ಯಕ್ಷರುಂತಲೂ ನಾನು ಹೆಚ್ಚಿಗೆ ಶಿಕ್ಷಣ ಪಡೆದೆನೆಂತಲೂ ಗುರುತಿಸುತ್ತಾರೆ. ಈ ರೀತಿಯ ಗುರುತಿಸುವಿಕೆ ಸಂತೋಷವನ್ನು ನೀಡಿದೆ.

ಹಲವಾರು ಕಾರ್ಯಕ್ರಮಗಳಲ್ಲಿ ತಾಲೂಕ ಪಂಚಾಯತ್ ಅಧ್ಯಕ್ಷರಾಗಿರುವ ಕಾರಣದಿಂದ ಭಾಗವಹಿಸಲು ಜನರ ಕಷ್ಟಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ಇಲ್ಲದಿದ್ದರೆ ಸಾಧ್ಯವಿರುತ್ತಿರಲಿಲ್ಲ. ಮೀಸಲಾತಿ ಮಹಿಳೆಯ ಸಬಲೀಕರಣವನ್ನು ಈ ತೆರನಾಗಿ ವಿಸ್ತರಿಸುತ್ತಿದೆ ಎನ್ನಬಹುದು. ಗಂಡನು ಸಹ ಬಹಳ ಗೌರವ ಕೊಟ್ಟು ಮಾತನಾಡುತ್ತಾನೆ. ಅವರಿಗೂ ತಿಳುವಳಿಕೆ ಇದೆ, ಆದರೆ ಅಧ್ಯಕ್ಷರಾಗಿರುವುದರಿಂದ ಅಧಿಕಾರ ನನ್ನಲ್ಲಿ ಇದೆ, ಸಾರ್ವಜನಿಕ ವ್ಯಕ್ತಿಯಾಗಿ ಗುರುತಿಸಿಕೊಳ್ಳುವುದರಿಂದ ಗಂಡನು ಗೌರವ ನೀಡುವುದು ಸಹಜವಾಗಿದೆ ಎಂದಿದ್ದಾರೆ. ಗ್ರಾಮೀಣ ಪ್ರದೇಶದಿಂದ ಬಂದವರಾಗಿರುವದರಿಂದ ಗ್ರಾಮೀಣ ಪ್ರದೇಶದವರ ಕಷ್ಟಗಳನ್ನು ಅರ್ಥ ಮಾಡಿಕೊಳ್ಳಲು ಸ್ವಲ್ಪ ಮಟ್ಟಿಗಾದರೂ ಅವರ ಕಷ್ಟಗಳನ್ನು ಪರಿಹರಿಸಲು ಸಾಧ್ಯವಾಗಿದೆ.

ಪದವಿ ಪಡೆದ ಮಹಿಳೆಯರ ಸಂಖ್ಯೆ ಶೂನ್ಯವಾಗಿದೆ. ವಿಜಾಪುರ ಜಿಲ್ಲೆಯ ಸಾಕ್ಷರತೆಯು ಶೇ. ೫೭.೧೫, ಪುರುಷರ ಸಾಕ್ಷರತೆ ಶೇ. ೬೯.೯೪, ಮಹಿಳಾ ಸಾಕ್ಷರತಾ ಪ್ರಮಾಣ ಶೇ.

೪೩.೪೭. ಗ್ರಾಮೀಣ ಪ್ರದೇಶದ ಒಟ್ಟು ಸಾಕ್ಷರತೆ ಶೇ. ೫೧.೯೭, ಗ್ರಾಮೀಣ ಪ್ರದೇಶ ಸಾಕ್ಷರತಾ ಪ್ರಮಾಣ ೧೯೯೧ಕ್ಕಿಂತ ೨೦೦೧ರಲ್ಲಿ ಕುಸಿದಿರುವುದು ಕಂಡು ಬಂದಿದೆ. ಅದು ತಾಲೂಕ ಪಂಚಾಯತಗಳಲ್ಲಿ ಕಂಡುಬರುತ್ತದೆ.

**ಕೆಲಸದ ವಿವರ**

| ಕೆಲಸದ ವಿವರ | ಗಂಡು | ಹೆಣ್ಣು |
|---|---|---|
| ಕೃಷಿ | ೦೫ | - |
| ವ್ಯಾಪಾರ | ೧೫ | - |
| ಮನೆಗೆಲಸ | - | ೧೩ |

ವ್ಯಾಪಾರ (Business) ಮಾಡುವ ಪುರುಷ ಸದಸ್ಯರ ಸಂಖ್ಯೆ ೧೫ ಹಾಗೂ ಕೃಷಿ ಕೆಲಸ ಮಾಡುವವರ ಸಂಖ್ಯೆಗಿಂತ ಅಧಿಕವಾಗಿರುವುದು ಕಂಡು ಬಂದಿದೆ. ಇವರುಗಳಿಗೆಲ್ಲ ಭೂಮಿ ಇದ್ದರೂ ಭೂಮಿಯನ್ನು ನಂಬಿಕೊಂಡು ಕೃಷಿಯನ್ನು ಮಾಡುವುದರ ಜೊತೆಗೆ ವ್ಯಾಪಾರ ವ್ಯವಹಾರವನ್ನು ಮಾಡುತ್ತಿದ್ದಾರೆ. ಮಹಿಳಾ ಸದಸ್ಯರೆಲ್ಲರೂ ಮನೆಗೆಲಸ ಮಾಡುವವರಾಗಿದ್ದಾರೆ. ಮಹಿಳೆಯರು ನಿರ್ಧರಿತ, ಸಾಮಾಜಿಕವಾಗಿ ಒಪ್ಪಿತ, ಮಹಿಳೆಯರೆ ಮಾಡಬೇಕೆಂದು, ಮಹಿಳೆ ಯರ ಕೆಲಸವೆಂದು ನಿಗದಿತ ಮನೆಕೆಲಸದ ಜೊತೆಗೆ ಕೃಷಿ ಕೆಲಸವನ್ನು ಇಬ್ಬರು ಮಹಿಳೆಯರು ಮಾಡುತ್ತಿದ್ದಾರೆ. ಇನ್ನು ಮೂವರು ಮಹಿಳೆಯರು ಸ್ವಃಉದ್ಯೋಗವನ್ನು ಅಂದರೆ ಟೇಲರಿಂಗ, ಕಸೂತಿ, ಬಟ್ಟೆ ವ್ಯಾಪಾರವನ್ನು ಮಾಡುತ್ತಿದ್ದಾರೆ. ಆದರೂ ಸಹ ಅಧ್ಯಯನದ ಸಂದರ್ಭದಲ್ಲಿ ಮಹಿಳಾ ಸದಸ್ಯರನ್ನು ಭೇಟಿಯಾದಾಗ ಏನು ಕೆಲಸ ಮಾಡುತ್ತಿದ್ದೀರಿ, ಯಾವ ಕೆಲಸ ಮಾಡು ತ್ತೀರಿ ಎಂದು ಕೇಳಿದಾಗ ಮೊದಲಿಗೆ ಬರುವ ಉತ್ತರವೇ ನಾವು ಏನ ಕೆಲಸಾ ಮಾಡುವುದು ಮನ್ಯಾಗ ಇರತೀವಿ. ಮನಿ ಕೆಲಸ ಎಂದು ಗೌರವ, ಆತ್ಮಸ್ಥೈರ್ಯದಿಂದ ಹೇಳುವುದು ಕಡಿಮೆ ಎನಿಸಿತು. ಆದರೆ ಆರು ಜನ ಮಹಿಳೆಯರು 'ಮನೀ ಕೆಲಸಾ ಮಾಡತೀವಿ' ಎಂದು ಗಟ್ಟಿ ಯಾಗಿ ಹೇಳಿದ್ದಾರೆ. ಗಟ್ಟಿಯಾಗಿ ಹೇಳುವುದು, ಮೃದುವಾಗಿ ಹೇಳುವುದು ಪ್ರಶ್ನೆ ಅಲ್ಲ. ಮನೆಗೆಲಸವನ್ನು ಯಾವ ರೀತಿಯಾಗಿ ನೋಡುತ್ತಿದ್ದಾರೆ ಎನ್ನುವುದು. ಮಹಿಳಾ ಸದಸ್ಯರೆಲ್ಲರೂ ಮನೆಗೆಲಸವನ್ನು ಮಾಡುತ್ತಾರೆ. ಮನೆಗೆಲಸ ಎನ್ನುವುದು ಕಡ್ಡಾಯ ಹಾಗೂ ಅನಿವಾರ್ಯ.

ಅಧ್ಯಯನ ಸಂದರ್ಭದಲ್ಲಿನ ೨೦ ಜನರನ್ನು ಭೇಟಿಯಾದಗಲೂ ಭಿನ್ನ ಭಿನ್ನ ಅನುಭವಗಳು ಸಿಕ್ಕಿವೆ. ಅವುಗಳನ್ನು ದಾಖಲಿಸುತ್ತ ಹೋದರೆ ಅಧ್ಯಯನ ಕೈಗೊಂಡದರ ಮೂಲ ಉದ್ದೇಶ ಎಲ್ಲೆಡೆ ಚೆಲ್ಲಿ ಹೋಗಬಹುದೆಂದು ಕೈಬಿಡಲಾಗಿದೆ. ಅಧ್ಯಯನ ಜಗತ್ತಿಗೂ, ವಾಸ್ತವ ಜಗತ್ತಿಗೂ ಇರುವ ಅಂತರ ಸಂಬಂಧಗಳನ್ನು ಗುರುತಿಸಿಕೊಳ್ಳುವ ಕಾರಣಗಳಿಗಾಗಿ ಕೆಲವು ಅನುಭವಗಳನ್ನು

ಉಲ್ಲೇಖಿಸಬೇಕಾಗಿದೆ, ಅಧ್ಯಯನ ಜಗತ್ತಿಗೆ ಕೆಲವು ನಿರ್ದಿಷ್ಟವಾದ ಹಾಗೂ ಸ್ಪಷ್ಟವಾದ ಸಾಮಾಜಿಕ ಧೋರಣೆಗಳಿರುತ್ತವೆ. ಅಧ್ಯಯನ ನಡೆಸಬೇಕೆನ್ನುವ ಖಚಿತತೆ ಇರುತ್ತದೆ. ಅಧ್ಯಯನದ ಕುರಿತಂತೆ ಕೆಲವು ನಿರೀಕ್ಷೆಗಳು ಹಾಗೂ ಅಪೇಕ್ಷೆಗಳಿರುತ್ತವೆ. ಇವೆಲ್ಲವೂ ಅಧ್ಯಯನ ಪೂರ್ವದ ಅಪೇಕ್ಷೆಗಳಾಗಿರುತ್ತವೆ. ಅಧ್ಯಯನ ಪೂರ್ವದ ಅಪೇಕ್ಷೆಗಳು ಖಚಿತವಾಗಿರುತ್ತವೆ ಹಾಗೂ ಸ್ಪಷ್ಟವಾಗಿರುತ್ತವೆ. ಆ ನಂತರ ಅವು ಉಳಿಯಬಹುದು ಕಳೆದು ಹೋಗಬಹುದು.

ಕ್ಷೇತ್ರಕಾರ್ಯ ಅನುಭವವನ್ನು ಗಮನಿಸಿ ಹೇಳುವುದಾದರೆ ಅಧ್ಯಯನ ಜಗತ್ತಿನ ನಿರೀಕ್ಷೆಗಳೆಲ್ಲ ವಸ್ತು ಜಗತ್ತಿನ ಎದುರು ತಿರುಗು ಮುರುಗಾಗುತ್ತವೆ. ಅಧ್ಯಯನ ಜಗತ್ತನ್ನು ಅವರು ಭಯ, ಅನುಮಾನದಿಂದ ನೋಡುತ್ತಾರೆ. ಅಧ್ಯಯನವನ್ನು ಗೌರವಿಸಿ ನೋಡಿದವರು ಕೇವಲ ಬೆರಣಿಕೆಯ ಮಂದಿ ಮಾತ್ರ. ಒಂದು ಅಧಿಕಾರಯುತ ಸ್ಥಾನದಲ್ಲಿ ಇದ್ದು ಅಧ್ಯಯನ ಜಗತ್ತನ್ನು ಗೌರವಿಸುವುದಕ್ಕಿಂತ, ಅದರ ಬಗ್ಗೆ ಮೊದಲೇ ಪೂರ್ವಗ್ರಹ ಪೀಡಿತರಂತೆ ನಮ್ಮ ಜೊತೆ ಮಾತನಾಡಿದರೆ ದಾಖಲಾಗುತ್ತದೆ. ನಮ್ಮದು ಎಲ್ಲರಿಗೂ ಗೊತ್ತಾಗಿ ಬಿಡುತ್ತದೆ ಎಂದಲೇ ಹೆಚ್ಚಿನವರು ಅಂದುಕೊಂಡಿದ್ದು.

ಸಹಜವಾಗಿ ದಾಖಲಾಗಬೇಕೆಂದು ಹಂಬಲಿಸುವವರು ಸಾಮಾನ್ಯವಾಗಿ ಮೇಲ್ಜಾತಿ, ಮೇಲ್ವರ್ಗದವರಾಗಿರುತ್ತಾರೆ ಅಥವಾ ಮಧ್ಯಮ ಜಾತಿ, ಮಧ್ಯಮ ವರ್ಗದವರಾಗಿರುತ್ತಾರೆ. ಅವರು ಸಾಮಾಜಿಕ ಪ್ರತಿಷ್ಠೆಯಲ್ಲಿ ಬದುಕುತ್ತಿರುತ್ತಾರೆ. ಸಾಮಾಜಿಕವಾಗಿ ಹಾಗೂ ಆಡಳಿತಾತ್ಮಕವಾಗಿ ನೀತಿ ನಿರೂಪಣೆಗಳನ್ನು ಮಾಡುತ್ತಿರುತ್ತಾರೆ. ತಾವು ನಿರೂಪಿಸಿದ ಮೌಲ್ಯಗಳ ಜೊತೆಯಲ್ಲಿಯೆ ತಮ್ಮ ವರ್ಚಸ್ಸು ದಾಖಲಾಗಬೇಕೆಂದು ಬಯಸುತ್ತಿರುತ್ತಾರೆ. ಅಧ್ಯಯನಕಾರರ ಅಧ್ಯಯನದ ಹಿನ್ನೆಲೆಯಲ್ಲಿ ದಾಖಲಾಗಬೇಕೆಂದು ಇವರು ಬಯಸುವುದಿಲ್ಲ. ಬದಲಾಗಿ ಅವರ ಅಪೇಕ್ಷೆಗೆ ಅನುಗುಣವಾಗಿಯೇ ದಾಖಲಾಗಬೇಕೆಂದು ಬಯಸುತ್ತಿರುತ್ತಾರೆ.

ಜನರು ತಮ್ಮ ನಂಬಿಕೆಗಳನ್ನು ತಮ್ಮಂತರಂಗದಲ್ಲಿಯೇ ಇಟ್ಟುಕೊಳ್ಳಬೇಕೆಂದು, ಅವುಗಳನ್ನು ಬಹಿರಂಗಗೊಳಿಸಬಾರದೆಂಬ ಕಟ್ಟಳೆಗಳನ್ನು ತಾವೇ ವಿಧಿಸಿಕೊಂಡಿರುತ್ತಾರೆ. ಹೀಗಾಗಿ ಅವುಗಳು ನಿಗೂಢವಾಗಿಡಲು ಉಳಿಸಿಡಲು ಬಯಸುತ್ತಾರೆ. ಇಂತಹ ಸಮುದಾಯಗಳಲ್ಲಿ ಮಹಿಳಾ ಸಮುದಾಯವು ಒಂದು. ಅದರಲ್ಲೂ ರಾಜಕೀಯ ಭಾಗವಹಿಸುವಿಕೆಯಲ್ಲಿ ಅನುಭವಗಳನ್ನು ಅಧಿಕಾರದ ಅವಧಿಯಲ್ಲಿ, ಪಕ್ಷದ ನಿಷೇಧಗಳು, ಜಾತಿ ವರ್ಗ ತಾರತಮ್ಯ ಇವುಗಳಲ್ಲದೆ ಪುರುಷ ಪ್ರಾಧ್ಯಾನತೆ ಮಹಿಳೆಯರನ್ನು ಹೆಚ್ಚು ಬಿಗಿಗೊಳಿಸಿರುತ್ತದೆ.

ಪ್ರಸ್ತುತ ಅಧ್ಯಯನವು ದಾಖಲಾಗಬೇಕೆಂದು ಬಯಸುವವರು ಹಾಗೂ ತಮ್ಮ ನಂಬಿಕೆಗಳನ್ನು ತಮ್ಮ ಅಂತರಂಗದಲ್ಲಿಯೇ ಇಟ್ಟುಕೊಂಡು ಕೆಲಸ ಮಾಡುವವರಾಗಿದ್ದಾರೆ. ಸಹಭಾಗಿತ್ವದ ಸ್ವರೂಪ ಯಾವ ತೆರನಾಗಿದೆ ಎಂಬ ಉದ್ದೇಶ ಇಟ್ಟುಕೊಂಡು ಸದಸ್ಯರ ಪ್ರತಿಕ್ರಿಯೆಗಳನ್ನು ಪುರುಷ ಸದಸ್ಯರು, ಮಹಿಳಾ ಸದಸ್ಯರು ಎನ್ನುವ ಎರಡು ಪ್ರಧಾನ ನೆಲೆಗಳಲ್ಲಿ

ವಿಂಗಡಣೆ ಮಾಡಿಕೊಳ್ಳಲಾಗಿದೆ. ಈ ಪ್ರಧಾನ ನೆಲೆಗಳಲ್ಲಿಯೇ ಸದಸ್ಯರ ಪ್ರತಿಕ್ರಿಯೆಗಳನ್ನು ವಿಂಗಡಿಸಿಕೊಳ್ಳಲಾಗಿದೆ.

**ಮಹಿಳಾ ಪ್ರಕರಣ-೧**

ನಾನು ಎಂದೂ ಮನಿ ಬಿಟ್ಟು ಹೊರ ಬಂದಿರಲಿಲ್ಲ. ಅಲ್ಲದೆ ಯಾವ ಗಂಡಸರ ಜೊತೆ ಮಾತನಾಡಿದ್ದೂ ಇಲ್ಲ. ಮನ್ಯಾಗ ನಮ್ಮ ಮಾವ ಬಂದರೆ ನಾನು ಮುಂದ ನಿಂತ ಮಾತನಾಡುವುದಿಲ್ಲ. ಯಾಕಂದ್ರ ಎಲ್ಲಾ ನಿಮಗೆ ಗೊತ್ತ ಅದ. ಅವರು ಹಿರಿಯರು ಅವರ ಮುಂದ ನಾವು ಹೆಣ್ಣ ಮಕ್ಕಳು ನಿಂತ ಮಾತನಾಡಿದರ್ರ ಚಂದ ಅನಿಸುದಿಲ್ಲ. ನಮ್ಮ ಮನ್ಯಾಗಿನ ಪದ್ಧತಿ ಇದೆ ಅದ. ನಾನು ನನ್ನ ತವರ ಮನ್ಯಾಗ ಅಷ್ಟೆ ಯಾವುದೇ ಗಂಡಸರ ಜೊತೆ ಮಾತಾಡತಿರಲಿಲ್ಲ. ಹೆಣ್ಣ ಮಕ್ಕಳು ಹಂಗೇ ಇರಬೇಕ ಅಂತ ರೀತಿ, ಪದ್ಧತಿ ಅದ. ನಾನು ಹಂಗೇ ನಡಕೊಳ್ಳುತ್ತೀನಿ.

ನಾನು ೭ನೇ ಇಯತ್ತೆ (ತರಗತಿ) ತನಕ ಓದಿನೀ. ನನಗ ಪಂಚಾಯತಿ ಮೆಂಬರ ಆಗಬೇಕ ಅಂತ ಆಸೆ ಏನು ಇರಲಿಲ್ಲ. ಆದ್ರ ನನ್ನ ಗಂಡಗ ನಾನ ಪಂಚಾಯತೀ ಮೆಂಬರ ಆಗಬೇಕು ಅಂತ ಆಸೆ ಇತ್ತ. ಕಾರಣ ಯಾಕ ಅಂತ ಗೊತ್ತ ಇಲ್ಲ. ನನ್ನ ತವರ ಮನ್ಯಾಗ ಆಗಲೀ ಗಂಡನ ಮನ್ಯಾಗ ಆಗಲೀ ಯಾರು ಈ ರಾಜಕೀಯದಾಗ ಇರಲಿಲ್ಲ. ನನ್ನ ಗಂಡನೇ ಸಣ್ಣವ ಇದ್ದಾಗೇನೆ ರಾಜಕೀಯದಾಗ ಓಡಾಡುವುದು, ಕೆಲಸ ಮಾಡುವುದು ಮಾಡತಾನ, ಊರಾಗ ಇದಿದ್ದ ನಾಲ್ಕ ಜನರು ಬೇಕ. ನಮಗ ಆಸ್ತಿ ಅದ ಜೀವನಕ್ಕ ಏನ ಕಷ್ಟ ಇಲ್ಲ. ಆದ್ರ ಕಷ್ಟ ಇರುವ ಜನರನ್ನು ನೋಡಿದ್ರ ನನ್ನ ಗಂಡಗ ಅವರಿಗೆ ಏನರೇ ಮಾಡಬೇಕ ಅಂತ ಅನಸತದ. ಅದಕ್ಕ ಅವರು ಊರಾಗ ಬಾಳ ಕೆಲಸಾ ಮಾಡಸತಾರ.

ನಾ ಇಲೆಕ್ಷನಲ್ಲಿ ಗೆದ್ದ ಬರಬೇಕ ಅಂದ್ರ ನನ್ನ ಗಂಡನೆ ಕಾರಣ ಅದಾರ. ನನಗ ಮೊದಲೇ ಈ ರಾಜಕೀಯದಾಗ ಆಸಕ್ತಿ ಇರಲಿಲ್ಲ. ಅದಕ್ಕ ನಾನ ಈ ಇಲೆಕ್ಷನ್ ಗದ್ದಲ ಮುಗಿತನಕ ಮನೀ ಬಿಟ್ಟ ಹೊರಗ ಬರಲಿಲ್ಲ. ಇಲೆಕ್ಷನ್ ಒಳಗ ಓಡಾಡುವವರಿಗೆ ಅಡಿಗಿ ಮಾಡುವುದು ಊಟಕ್ಕ ಹಾಕುವುದೇ ಕೆಲಸಾ ಮಾಡತಿದ್ಯಾ ಹೊರತು ನಾನ ಒಂದ ದಿನಾನು ಪ್ರಚಾರಕ್ಕ ಹೋಗಲಿಲ್ಲ. ನಾನ ನನ್ನ ಗಂಡಗ ಮೊದಲೇ ಹೇಳಿದ್ಯಾ ನಾನ ಏನ ಓಟ್ ಕೇಳಲಾಕ ಹೊರಗ ಹೋಗುವುದಿಲ್ಲ. ಎಲ್ಲಾ ನೀನೆ ಮಾಡತೀನಿ ಅಂದ್ರ ನನ್ನ ಹೆಸರ ಕೊಡು ಇಲ್ಲದಿದ್ರ ಬ್ಯಾಡ ಅಂತ. ಅದಕ್ಕ ಅವರು ಏನ ಒತ್ತಾಯ ಮಾಡಲಿಲ್ಲ.

ಪಕ್ಷದ ಟಿಕೆಟ್ ಪಡಿಲಾಕನು ಬಾಳ ಕಷ್ಟ ಪಟ್ಟಾರ. ಇಲೆಕ್ಷನ್ ನಿಂತಾಗ ಬಾಳ ರೊಕ್ಕಾನು ಖರ್ಚ ಆಗದ. ಇಷ್ಟೆಲ್ಲಾ ಆಗಿದಕ್ಕ ಗೆದ್ದ ಬಂದೀ ಅದಕ್ಕ ಖುಷಿ ಆತು.

ನಾನ ಗೆದ್ದೀನಿ ಅಂದಾಗ ನನಗ ಖುಷಿ ಆತ. ನಮ್ಮ ಮನಿಯವರು ಗುಲಾಲ ಅದು ಹಾಕೋಂಡ ಮನಿಗಿ ಬಂದಾಗಲೇ ನನಗ ಗೊತ್ತ ಆಗಿದ್ದ. ನಾನು ಮೀಟಿಂಗ ಹೋಗಬೇಕ

ಅಂದ್ರುನು ನನ್ನ ಗಂಡನ ಜೊತೆ ಕರಕೊಂಡ ಹೋಗತೀನಿ. ನನಗ ಅಲ್ಲಿ ಹೆಚ್ಚ ಏನು ಗೊತ್ತ ಆಗುವುದಿಲ್ಲ. ಅವರೇ ಎಲ್ಲಾ ಕೇಳಿ ಮಾಡತಾರ. ನಾನು ಸುಮ್ಮ ಮೀಟಿಂಗ ಹೋಗತಿನೀ ಬರತೀನಿ. ಅಲ್ಲಿ ಹೋದಾಗ ನನಗ ಒಂದೊಂದ ಸಲಾ ಬಾಳ ಅಂಜಿಕಿ ಬರತದ ಯಾಕಂದ್ರ ಯಾರರೇ ಏನರ ಕೇಳಿದರ‍್ರ ಏನ ಹೇಳ ಬೇಕ ಅಂತ ಗೊತ್ತ ಇಲ್ಲ. ಒಂದ ಸಲಾ ನನಗ ಹೀಂಗೆ ಆತ. ಒಬ್ಬ ಸಾಹೇಬ್ರ ಬಂದಿದ್ರ ಅವರ ನಿಮಗ ಏನ ಕೆಲಸಾ ಆಗಬೇಕ ಅಂತ ಕೇಳಿದ್ರ ನನಗ ಏನ ಹೇಳ ಬೇಕ ಅಂತ ಗೊತ್ತೆ ಆಗಲಿಲ್ಲ. ಆದ್ರ ಗಂಡು ಮಕ್ಕಳು ನಮ್ಮ ಊರಾಗ ಅದು ಆಗಬೇಕು ಇದು ಆಗಬೇಕು ಅಂತ ಹೇಳಿದರು. ಆಗ ನನಗ ಬಹಳ ಕೆಟ್ಟ ಅಂತ ಅನಿಸತ. ನಾನು ನಮ್ಮ ಊರಿಗಿ ಏನ ಬೇಕ ಅಂತ ಹೇಳಲಿಲ್ಲಾ ಅಂತ ಅನಿಸತು.

### ಮಹಿಳಾ ಪ್ರಕರಣ-೨

ನನ್ನ ಹೆಸರು ಜಲ. ವಯಸ್ಸು ೩೮, ಜಾತಿ ಎಸ್ ಸಿ, ಶಿಕ್ಷಣ ೧೦. ನನ್ನ ತವರು ಮನ್ಯಾಗ ಮೊದಲಿನಿಂದಲೂ ರಾಜಕೀಯದಾಗ ಒಬ್ಬರಲ್ಲದಿದ್ದರೂ ಒಬ್ಬರು ಇರುತ್ತಿದ್ದರು. ಹೀಗಾಗಿ ನನಗ ರಾಜಕೀಯದಾಗ ಸ್ವಲ್ಪ ಆಸಕ್ತಿ ಇತ್ತು. ಆದರೆ ತಾಲೂಕ ಪಂಚಾಯತ್ ಮೆಂಬರ ಆಗತ್ತೀನಿ ಅಂತ ಅಂದುಕೊಂಡಿರಲಿಲ್ಲ. ನಾ ತಾಲೂಕ ಪಂಚಾಯತ್ ಮೆಂಬರ ಆಗುವುಕ್ಕಿಂತ ಮುಂಚೆ ಗ್ರಾಮ ಪಂಚಾಯತ್ ಮೆಂಬರ ಆಗಿದ್ಯಾ. ನಮಗ ಮಕ್ಕಳು ಮರೀ ಏನು ಇಲ್ಲ. ನಾವು ಏನ ಮಾಡಿದರ‍್ರೂ ಜನರಿಗಾಗಿ. ನನ್ನ ಗಂಡಾ ಬಡುವರ ಸಲುವಾಗಿ ಅನೇಕ ಚಲೂ ಕೆಲಸಾ ಮಾಡಿಸಿದ್ದಾರೆ. ಅವರಿಗೀ ರೇಷನ್ ಕಾರ್ಡ, ಉದ್ಯೋಗ ಕಾರ್ಡ, ಸಾಲ ಕೊಡಿಸಿದ್ದಾರೆ. ಬಡವರ ಸಲುವಾಗಿ ನಮ್ಮ ಜಾತಿ ಒಳಗಿನ ಜನರನ್ನೇ ಎದರ (ವಿರೋಧ) ಹಾಕಿಕೊಂಡಿದ್ದಾರೆ. ನನಗ ನನ್ನ ಗಂಡ ಮಾಡುವುದು ಸಂತೋಷ ಎನಿಸಿದೆ. ನಾನು ತಾಲೂಕ ಪಂಚಾಯತ್ ಸದಸ್ಯ ರಾಗಿರುವುದರಿಂದ ಇನ್ನು ಹೆಚ್ಚ ಕೆಲಸಾ ಮಾಡಲಾಕ ನನಗ ಮತ್ತ ನನ್ನ ಗಂಡಗ ಸಾಧ್ಯ ವಾಗುತ್ತದೆ.

ಮೊದಲ ನನಗ ಗ್ರಾಮ ಪಂಚಾಯತ್ ಮೆಂಬರ ಅದಾರ ಅನ್ನುತ್ತಿದ್ದರು. ಈಗ ಈ ಬಾಯಿ ತಾಲೂಕ ಮೆಂಬರ ಅದಾರ‍್ರಿ ಅಂತ ಅನತಾರ. ಇದರಿಂದ ನನಗ ಖುಷಿ ಆಗತದ. ನಾನು ೧೦ನೇ ತನಕ ಸಾಲಿ ಕಲತೀನಿ. ಎಲ್ಲಾ ವಿಷಯಗಳು ಗೊತ್ತಾಗುತ್ತವೆ. ಆದ್ರ ಸಮಾಜದೊಳಗ ಹೆಣ್ಣ ಮಕ್ಕಳನ್ನು ನೋಡೊ ರೀತಿ ಬದಲಾಗಿಲ್ಲ. ಒಬ್ಬ ಹೆಣ್ಣ ಮಗಳು ಮುಂದ ಹೊರಟರೆ ಆಕೆಯನ್ನು ಹಿಯಾಳಿಸುವುದು, ಅವಮಾನ, ಆರೋಪ ಮಾಡತ್ತಾರ. ಗಂಡ ಆಕೆ ಜೊತೆ ಇದ್ದರ‍್ರ ಬಾಯಿ ಮುಚ್ಚತಾರ. ನನ್ನ ಗಂಡಾ ಹೆಣ್ಣ ಮಕ್ಕಳ ಸಲುವಾಗಿ ಕೆಲಸಾ ಮಾಡು, ಮೀಟಿಂಗ ಒಳಗ ಮಾತಾಡು ಅಂತ ಹೇಳತಾರ. ಆದ್ರ ನನಗ ಕೆಲವು ಸಾಧ್ಯ ಆಗುವುದಿಲ್ಲ. ಗಂಡಸರೇ ಹೆಚ್ಚ ಮಾತನಾಡತಾರ, ಅವರೇ ಕೆಲವು ಸಲ ಜಗಳಾ ತಗದಂಗ ಮಾತಾಡತ್ತಾರ. ಇನ್ನ ಹೆಣ್ಣ ಮಕ್ಕಳು ತಮ್ಮ ಗಂಡಂದಿರಿಗೆ ಹೇಳಿ ಸುಮ್ಮ ಕುಂತಿರತ್ತಾರ. ಹಂತಾದರೊಳಗ ನಾನ ಒಬ್ಬಕ್ಕೆ ಏನ ಮಾತಾಡಲೀ ಅಂತ ಸುಮ್ಮನಿರತೀನಿ.

ನನ್ನ ಹೆಸರು ಇಂದಿರಾಬಾಯಿ ಪವಾರ. ನನ್ನ ಗಂಡನ ಮನೆಯೂ ತವರು ಮನೆಯೂ ಒಂದೆ ಊರ(ಮನಗೂಳಿ) ನಾ ಮೊದಲಿನಿಂದಲೂ. ಊರಾಗ ದೇವರ ಸೇವಾ ಕಾರ್ಯ ಮಾಡುತ್ತಿದ್ವೆ. ಅಂದ್ರ ವಿಠೋಬಾ ದೇವರ ಗುಡಿ ಪೂಜಾರಿ ಕೆಲಸ ಮಾಡತ್ತಿದ್ದೆ. ಮತ್ತ ಊರಾಗ ಜಾತ್ರೆ, ಉತ್ಸವ ಕುಂಭ ಮೇಳ ಅದ್ರ ಬಹಳ ಉತ್ಸಾಹದಿಂದ ಅಡ್ಡಾಡತ್ತಿದ್ದೆ (ಭಾಗಿಯಾಗುತ್ತಿದ್ವೆ). ಅಲ್ಲದೇ ಊರ ಜನರು ಭಾಗವಹಿಸುವಂತೆ ಮನೀ ಮನೀ ಅಡ್ಡಾಡಿ ತಿಳಿಸುತ್ತಿದ್ವೆ. ಹೀಗಾಗಿ ನನಗ ಊರ ಜನರ ಪರಿಚಯು ಹೆಚ್ಚ ಅದ. ಹಿಂಗಾಗಿ ಗೌಡ್ರ ನನಗ ಇಲೆಕ್ಷನ್‌ಗೆ ನಿಲ್ಲಿಸಿದ್ರು. ಗೌಡ್ರ ಅಂದ್ರ ನಮ್ಮ ಅಪ್ಪಾರ ಇದ್ದಂಗ. ಅವರ ಮಾತು ನಾವು ಕೇಳಲೇ ಬೇಕು. ನಾವು ಅವರಿಗೆ ಕಿಮ್ಮತ್ತ ಕೊಟ್ರ ಊರ ಕೊಡುತ್ತದೆ. ಅವರ ಏನರ ಮಾತ ಹೇಳಿದ್ರು ನಾವು ಇಲ್ಲ ಅಂತ ಹೇಳುವುದಿಲ್ಲ. ಗೌಡ್ರ ಏನ ಮಾಡಿದ್ರು ನಮ್ಮ ಒಳ್ಳೆದಕ್ಕೆ ಮಾಡತಾರ. ಅವರು ಬಹಳ ಚಲೋ ಅದಾರ.

ನಾವು ಬಡವರು, ನನ್ನ ಗಂಡ ಹೊಲ-ಮನಿ ಕೆಲಸ ಮಾಡತಾನ. ನಾನು ಹೊಲದ ಕೆಲಸಕ್ಕ ಹೋಗತಿನಿ. ನಾನು ಇದೇ ಊರಕ್ಕೆ ಇರುವುದರಿಂದ ನನಗ ಮೊದಲಿನಿಂದಲೇ ಗೌಡ್ರ ಬಗ್ಗೆ ಗೊತ್ತಿತ್ತು. ನಾನು ಮತ್ತ ಗೌಡ್ರ ಮಕ್ಕಳು ಒಂದೇ ವಯಸ್ಸಿನವರು. ನಾನು ಮತ್ತ ಅವರು ಮಕ್ಕಳು ಕೂಡಿಕೊಂಡ ಸಾಲಿಗಿ ಹೋಗತ್ತಿದ್ವಿ. ಅವರ ಮನೀಗಿ ನಾನು ಹೋಗುವುದು ಬರುವುದು ಅವರ ಮನ್ಯಾಗಾನ ಕೆಲಸ ಮಾಡುವುದನ್ನೆ ಮಾಡುತ್ತಿದ್ದೆ. ಹಿಂಗಾಂಗಿ ಅಪ್ಪಾರ(ಊರಗೌಡ್ರ) ಪರಿಚಯು ಚೆನ್ನಾಗಿ ಇತ್ತು. ಅಲ್ಲದೆ ಅವರು ಇಲೆಕ್ಷನ್‌ಗೆ ನಿಂತಾಗ ನನ್ನನ್ನು ಪ್ರಚಾರಕ್ಕೆ ಅಂತ ಕರೆದುಕೊಂಡು ಹೋಗುತ್ತಿದ್ದರು. ಯಾಕಂದ್ರ ನನ್ನ ಬಾಯಿ ಸ್ವಲ್ಪ ಜೋರ ಇತ್ತ. ಅಲ್ಲದ ನನಗ ಚೆನ್ನಾಗಿ ಮಾತನಾಡಲಿಕ್ಕೆ ಬರತಿತ್ತ. ಹಿಂಗಾಂಗಿ ನನಗ ರೊಕ್ಕ ಕೊಟ್ಟು ಪ್ರಚಾರ ಮಾಡಲಿಕ್ಕೆ ಕರೆದುಕೊಂಡು ಹೋಗುತ್ತಿದ್ರು. ನಮ್ಮ ಮನ್ಯಾಗ ಯಾರು ಏನು ಅನ್ನುತ್ತಿದ್ದಿಲ್ಲ. ಊರ ಗೌಡ್ರ ಕೆಲಸ ಮಾಡಬೇಕು. ನೀ ಮಾಡು ಅಂತ ನನಗೆ ಹೇಳುತ್ತಿದ್ದರು.

ಬಹಳ ವರ್ಷಗಳ ಹಿಂದಿನ ಮಾತು, ನನಗ ಮೊದಲು ಗ್ರಾ.ಪಂ. ಮೆಂಬರ್ ಆಗು ಅಂತ ಹೇಳಿ ಮಾಡಿದ್ರು. ಅದರ ಬಗ್ಗೆ ನನಗೆ ಸರಿಯಾಗಿ ಏನ ಅಷ್ಟು(ಬಹಳ ಅಥವಾ ಎಲ್ಲಾ ವಿಷಯ) ಗೊತ್ತಿಲ್ಲ. ಅದ್ರ ನಡದಿದ್ದೆ ಹೇಳತೀನಿ, ನಾ ಹೆಂಗ ತಾಲೂಕ ಪಂಚಾಯತ್ ಮೆಂಬರ್ ಅಗಾದಕ್ಕೆ ಮೊದಲ ಇದು (ಘಟನೆ ) ಕಾರಣವಾಯಿತು. ಅದು ಏನಂದ್ರ. ನಾ ಗ್ರಾಮ ಪಂಚಾಯತ್ ಮೆಂಬರ ಆಗಿ ಆಯ್ಕೆ ಆಗಾದ್ವೀನಿ ಅಂತ ನನಗ ಊರಾನ ನಾಲ್ಕು ಜನರು ಹೂವಿನ ಹಾರಾ ಹಾಕಿ, ಊರೆಲ್ಲಾ ಮೆರವಣಿಗೆ ಮಾಡಿದ್ರ. ನನಗೂ ಆಗ ಬಹಳ ಸಂತೋಷ ಆಗಿತ್ತು. ಅದ್ರ ಮರುದಿನ ನಾನು ಸೋತಿನೀ, ಬೇರೆಯುವರು ಗೆದ್ದಾರ ಅಂತ

ಹೇಳಿ ಊರೆಲ್ಲಾ ಸುದ್ದಿ ಬಂತ. ನನಗ ಯಾಕ ಹೀಂಗ ಆಯಿತು ಅಂತ ಏನು ಗೊತ್ತಾಗಲಿಲ್ಲ. ನಾನು ಸೀದಾ ಊರ ಗೌಡ್ರ ಹತ್ತೀರ ಹೋಗಿ ಯಾಕ್ರಿ ಗೌಡ್ರ ನನಗ ಹಿಂಗ ಅಸಹ್ಯ ಮಾಡುವುದು ಏನರ್ರಿ. ನನಗ ಯಾಕ ಹಿಂಗ ಮಾಡಿದ್ರಿ ಅಂತ ಹೇಳಿ ಬೈಯ್ದೆ ನನಗ ಅವಾಗ ಬಹಳ ಸಿಟ್ಟ ಬಂದಿತ್ತು. ಅದಕ್ಕೆ ಅವರ ಮನೀಗಿ ಹೋಗಿ ಅವರಿಗೆ ಬೈಯ್ದೆ. ಅವಾಗ ಗೌಡ್ರ ನಿನಗ ದೊಡ್ಡ ಮೆಂಬರ ಮಾಡತೀನಿ ಸ್ವಲ್ಪ ದಿನಾ ಸುಮ್ಮಿರು, ಬೈಯ ಬ್ಯಾಡ ಅಂದ್ರು. ಅವರು ಕೊಟ್ಟ ಮಾತಿಗೆ ತಪ್ಪಲಿಲ್ಲ. ನನಗ ಮುಂದ (ಸ್ವಲ್ಪ ದಿನಗಳ ನಂತರ) ತಾಲೂಕ ಪಂಚಾಯತಿ ಮೆಂಬರ ಮಾಡಿದ್ರ. ಹೀಗಾಂಗಿ ನಾನು ತಾಲೂಕ ಪಂಚಾಯತಿ ಮೆಂಬರ ಆದೆ, ನನಗೇನು ಗೊತ್ತಿತ್ತು ರೀ ಈ ತಾಲೂಕ ಪಂಚಾಯತಿ ಮೆಂಬರ್ ಬಗ್ಗೆ. ಎಲ್ಲಾನು ನಮ್ಮ ಅಪ್ಪಾರ ಪುಣ್ಯಾ.

ನಾನು ತಾಲೂಕ ಪಂಚಾಯತಿ ಮೆಂಬರ್ ಆಗತ್ತೀನಿ ಅಂತ ನನಗೇನು ಗೊತ್ತಿರಲಿಲ್ಲ ಅಲ್ಲದೆ, ನನಗ ತಾ.ಪಂ. ಮೆಂಬರ ಆಗಬೇಕು ಅಂತ ಆಸೆ ಏನು ಇರಲಿಲ್ಲ. ಒಂದು ದಿನ ಗೌಡ್ರ ನನಗ ಬರಲಿಕ್ಕೆ ಹೇಳಿ ಕಳಿಸಿದ್ರ ಸರಿ ಆಯಿತು ಅಂತ ನಾ ಅವರನ್ನೆ ನೋಡಲಿಕ್ಕೆ ಹೋದೆ. ಅವರು ಸೀದಾ ಒಂದು ಜೀಪ ಬಳಗ ನನಗ ಮತ್ತ ಊರನ ನಾಲಕು ಮಂದಿನ ಕರೆದುಕೊಂಡು ಬಾಗೇವಾಡಿಗಿ ಹೋದ್ರ. ನಾ ಯಾಕ್ರೀ ಗೌಡ್ರ ಬಾಗೇವಾಡಿಗ ಕರಕೊಂಡ ಹೊರಟಿರೀ ಅಂತ ಕೇಳಿದಕ್ಕೆ ನಿನಗ ತಾಲೂಕ ಪಂಚಾಯತ ಮೆಂಬರ್ ಮಾಡಿಸಲಿಕ್ಕ ನಾಮಿನೇಷನ್ ಮಾಡಲಿಕ್ಕೆ ಹೋರಟಿವು ಅಂತ ಅಂದ್ರ ನಾನು ನನಗ ಬ್ಯಾಡರಿ ಗೌಡ್ರ. ನನಗ ಮೊದಲೇ ಅಷ್ಟೇನು ಗೊತ್ತೆ ಇಲ್ಲರ್ರೀ, ಅಂತ ಅಂದೇ, ನಾವೆಲ್ಲಾ ಇರತೇವಲ್ಲಾ ನಿನ್ನ ಜೊತೆ, ನೀ ಸುಮ್ಮನಿಂದ್ರ ಅಂತ ಅಂದ್ರು ನಾನು ಸುಮ್ಮ ಆದೆ.

ನನ್ನ ಇಲೆಕ್ಷ್ನನ ಪ್ರಚಾರಕ್ಕೆ ನಾನು ೨೧ ದಿನ ತಿರುಗಾಡಿದಾ. ಊಟ ನಿದ್ದಿ ಅಂತ ಅನ್ನುತ್ತೀರಲಿಲ್ಲ. ೨೧ ಹಗಲ, ರಾತ್ರಿ ಅನ್ನಲಾರದೇ ಪ್ರಚಾರ ಮಾಡಲಿಕ್ಕೆ ಹೋದೆ, ಹೋದಾಗ ನಿನಗ ಓಟ ಹಾಕತೀನಿ ಅಂತ ಹೇಳುತ್ತಿದ್ದರು. ಇನ್ನು ಕೆಲವೊಬ್ಬರು ನೀವೆಲ್ಲಾ ಓಟ ಇದ್ದಾಂಗ ಮೊತ್ತ ಬರತ್ತೀರಿ ಅಂತ ಬೈಯುತ್ತಿದ್ದರು. ನಾನೇನು ಹಂಗ ಅಲ್ಲಾ ಓಟರೇ ಹಾಕಿ ನೋಡ ಅಂತ ಹೇಳುತ್ತಿದ್ರ ಹಿಂಗ ಪ್ರಚಾರ ಮಾಡಿದ್ದಕ ನಾನು ಗೆದ್ದ ಬಂದೆ. ನಾನೇನು ಒಂದು ಪೈಸೆ ಖರ್ಚ ಮಾಡಲಿಲ್ಲ. ಖರ್ಚ ಮಾಡಲಿಕ್ಕೆ ನನ್ನ ಹತ್ರ ರೊಕ್ಕಾನು ಇರಲಿಲ್ಲ. ಎಲ್ಲಾ ಗೌಡ್ರ ನೋಡಿಕೊಂಡರ್ರ.

ತಾ.ಪಂ. ಮೀಟಿಂಗ್ ಬಗ್ಗೆ, ನನಗ ಏನು ಗೊತ್ತಿರಲಿಲ್ಲ. ತಾ.ಪಂಚಾಯತ್ ಮೀಟಿಂಗ್ ನಾಳೆ ಇದೆ ಅಂತ ಹೇಳಿದಾಗ, ಒಂದು ದಿನಾ ಮೊದಲೇ ಗೌಡ್ರ ಹತ್ತಿರ ಹೋಗಿ ನಾಳೇ ಮೀಟಿಂಗ ಇದೆ ಅಂತ ಹೇಳುತ್ತೀದ್ವಿ, ಆಗ ಗೌಡ್ರುರ್ರೆ, ಏನೇನು ಮಾತನಾಡಬೇಕು, ಹೇಂಗ ಮಾತನಾಡಬೇಕು ಅಂತ ಎಲ್ಲಾ ಹೇಳುತ್ತಿದ್ದರು. ನಾವು ಹಂಗ ಮಾತಾಡುತ್ತಿದ್ದೇವು. ತಾಲೂಕ

ಪಂಚಾಯತಿ ಆಫೀಸ್‌ನ್ಯಾಗ, ನಮ್ಮಗ ಬಹಳ ಕಿಮ್ಮ ಕೊಡತಾರ ಯಾಕಂದ್ರ ನಾವು ಎಮ್.ಎಲ್.ಎ ಸಾಹೇಬರ ಊರಿನವರು ಅಂತ ಹೇಳಿ. ನಾನು ತಾಲೂಕ ಪಂಚಾಯತಿ ಮೀಟಿಂಗನ್ನ ಒಂದ ಸಲಾನು ತಪ್ಪಿಸುವುದಿಲ್ಲ. ಪ್ರತಿಯೊಂದು ಮೀಟಿಂಗಿಗೆ ಹೋಗಿ ಬರತೀನಿ. ನನಗೇನು ಇದು ತ್ರಾಸ ಆಗತ್ತದ, ಮತ್ತು ಊರಿಗಿ ಯಾವ ಯಾವ ಕೆಲಸ ಬಂದಾವ ಅಂತ ತಿಳಿತದ.

ನಮ್ಮ ಊರ ಅಭಿವೃದ್ಧಿಗೆ ಬಹಳ ಕೆಲಸಾ ಮಾಡಿಸಿನೀ. ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರೌಢಶಾಲೆ, ರಸ್ತೆ ಮಾಡಿಸಿದ್ದೇವ. ನಾನು ಊರಿನವರು ಯಾವುದೇ ಕಾರ್ಯಕ್ರಮಕ್ಕೆ ಕರೆದರ ಹೋಗತ್ತೀನಿ. ಒಂದು ದಿನಾನು ನಾನು ಬರುವುದಿಲ್ಲ ಅಂತ ಹೇಳುವುದಿಲ್ಲ. ನಾನೇನು ಅಲ್ಲಿ ಹೋಗಿ ದೊಡ್ಡ ದೊಡ್ಡ ಭಾಷಣಾ ಮಾಡುವುದಿಲ್ಲ. ನನಗ ಗೊತ್ತಾಗಿದ್ದ ನಾಲ್ಕ ಮಾತ ಹೇಳಿ, ಅವರ ಮಾಡಿದ್ದ ಕಾರ್ಯಕ್ರಮ ನೋಡಿ ಸಂತೋಷಪಟ್ಟ ಬರತ್ತೀನಿ. ನನಗ ಮುಂದನು (ಮುಂದೆಯೂ) ಇಲೆಕ್ಷನ್‌ಗೆ ನಿಲ್ಲಬೇಕು ಅಂತ ಆಸೆ ಇದೆ. ಆದರೆ ಈಗ ಅವರ ಮನ್ಯಾಗನೇ ಅವರಲ್ಲಿಯೇ ನಿಲ್ಲಬೇಕು ಅಂತ ಜಗಳಾಡಲಿಕ್ಕತ್ತಾರ. ಇನ್ನ ನಮ್ಮಂತವರಿಗೆಲ್ಲಿ ಅದ್ರು ಅಪ್ಪವರು ನನ್ನನ್ನು ತಾ.ಪಂ.ಮೆಂಬರ ಮಾಡಿದ್ದಾರ ಅವರ ಉಪಕಾರ ನಾ ಎಂದು ಮರೆಯುವುದಿಲ್ಲ ಎಂದು ತಮ್ಮ ಮಾತ ಮುಗಿಸಿದರ್ರು.

### ಮಹಿಳಾ ಪ್ರಕರಣ-೪

ನನಗೆ ಪಂಚಾಯತಿ ಮೆಂಬರ್ ಆಗಬೇಕು ಅಂತ, ಆಸೆ ಏನು ಇರಲಿಲ್ಲ. ನಮ್ಮ ಊರಾಗ, ತವರು ಮನೆ & ಗಂಡನ ಮನೆಯಲ್ಲಿ ನಾನು ಒಂದ ದಿನಾನು ಮನೀ ಬಿಟ್ಟ ಹೊರಗ ಬರುತ್ತಿರಲಿಲ್ಲ. ನಮ್ಮದು ಗೌಡರ ಮನೆತನ. ನನಗ ಇದರ (ಪಂಚಾಯತಿ) ಬಗ್ಗೆ ಏನು ಗೊತ್ತಿರಲಿಲ್ಲ. ಊರಾಗ ಮೊದಲಿನಿಂದಲೂ ನಮ್ಮ ಮನ್ಯಾಗ ಗಂಡ ಮಕ್ಕಳು ರಾಜಕೀಯದಲ್ಲಿ ಇರುತ್ತಿದ್ದರು. ಈಗ ಆದ್ರು ನನ್ನ ಗಂಡ ರಾಜಕೀಯದಲ್ಲಿಯೇ ಓಡಾಡುತ್ತಾನೆ. ಅವರೇ ಇಲೆಕ್ಷನ್‌ಗೆ ನಿಲ್ಲಬೇಕು ಅಂತ ಮಾಡಿದ್ರು. ಅದ್ರ ಅವರಿಗೆ ನಿಲ್ಲಲಿಕ್ಕೆ ಆಗಲಿಲ್ಲ. ಯಾಕಂದ್ರ ನಮ್ಮ ಮಂದಿ ಒಳಗ (ಜಾತಿಯಲ್ಲಿ) ಹೆಣ್ಣ ಮಕ್ಕಳಿಗೆ ಸೀಟ್ ಬಂದಿತ್ತು. ಅದಕ್ಕೆ ನಮ್ಮ ಮಾವ ಮತ್ತು ಗಂಡ ನನ್ನ ನಿಲ್ಲಿಸಿದ್ರು.

ನಾನು ಇಲೆಕ್ಷನ್‌ಗೆ ನಿಲ್ಲಬೇಕು ಅಂತ ನನ್ನ ಗಂಡ & ಮಾವ, ನಮ್ಮ ಮಂದಿ (ಊರಿನ ಪ್ರಮುಖರು) ನಿರ್ಧಾರ ಮಾಡಿದಾಗ ನನಗ ಅಂಜಿಕೀ ಬಂದು ನಾನು ಒಲ್ಲೇ ಅಂತ ನನ್ನ ಗಂಡನ ಮುಂದೇ ಹೇಳಿದ್ಯಾ. ಆದ್ರ ಅವರು ನಾವೆಲ್ಲಾ ಇರತೀವಿ. ನೀ ಸುಮ್ಮ ಮನೀ ಒಳಗ ಇರು. ನಾವೆಲ್ಲಾ ನೋಡಿಕೊಳ್ಳುತ್ತೇವ ಅಂತ ಹೇಳಿದ್ರು ಇಲೆಕ್ಷನಕ ಸುಮಾರು ರೂ. ೨ ಲಕ್ಷ ಖರ್ಚಾಯಿತು ಅಂತ ನನ್ನ ಗಂಡ ಹೇಳ್ಯಾರ. ನಾನೇನು ಒಂದ ದಿನಾನು ಇಲೆಕ್ಷನ್ ಪ್ರಚಾರಕ್ಕೆ ಹೋದಕ್ಕಿ ಅಲ್ಲ. ಎಲ್ಲಾನೂ ಅವರೇ ನೋಡಿಕೊಂಡ್ರು. ನನ್ನನ್ನು ಗೆಲ್ಲಿಸಿದರ್ರು.

ನಾನೇನ ತಾಲೂಕ ಪಂಚಾಯತಿ ಮೀಟಿಂಗಕ ಯಾವಾಗಲೂ ಹೋಗುವುದಿಲ್ಲ. ಒಟ್ಟು ೩ ಸಲ ಮೀಟಿಂಗಗೆ ಬರದೇ ಹೋದ್ರ ಮೆಂಬರಕಿ(ಸದಸ್ಯತ್ವ) ಹೋಗುತ್ತದ ಅಂತ ಗೊತ್ತ ಅದ. ಅದಕ್ಕ ನಾನು ಒಂದು ಮೀಟಿಂಗ್ ಹೋದ್ರ ಇನ್ನೊಂದು ಮೀಟಿಂಗಕ ಹೋಗುವುದಿಲ್ಲ. ಪಂಚಾಯತಿ ಕೆಲಸದ ವಿಷಯ ಎಲ್ಲಾ ನನ್ನ ಗಂಡನೇ ನೋಡಿಕೊಳ್ಳತಾನ. ನನಗ ಮನೀ ಮಕ್ಕಳ ಕೆಲಸದಲ್ಲಿಯೇ ಟೈಮ್ ಹೋಗತದ, ಇನ್ನ ಪಂಚಾಯತಿ ವಿಷಯ, ಕೆಲಸ ತಿಳಿದು ಕೊಳ್ಳಲಿಕ್ಕೆ ಆಗುವುದಿಲ್ಲ.

ನಮ್ಮ ಮನೀಯವರು ಇಂದ, ಹೊಲಗಳಿಗೆ ಒಡ್ಡ ಹಾಕಸ್ಯಾರ ಅಂತ ಹೇಳತಾರ ಮತ್ತು ರಸ್ತೆ ಮಾಡಿಸಿದ್ದಾರೆ. ಈಗೀಗ ಪಂಚಾಯತಿಗೆ ಕೆಲಸ ಬರುವುದಿಲ್ಲ ಅಂತ ಮೊನ್ನೆ ಮೊನ್ನೆ(ಕೆಲವು ದಿನಗಳ ಹಿಂದೆ) ನನ್ನ ಗಂಡ ಹೇಳುತ್ತಿದ್ದರು.

ನನಗೇನು ಮತ್ತ ಮುಂದ ಪಂಚಾಯತಿ ಮೆಂಬರ್ ಆಗಬೇಕು ಅಂತ ಆಸೆ ಏನು ಇಲ್ಲ. ಅಲ್ಲದೆ ನನಗ ಮನಿ ಕೆಲಸ ಹೆಚ್ಚ ಇರುವುದರಿಂದ, ಪಂಚಾಯತಿ ಕೆಲಸ ಮಾಡಲಿಕ್ಕೆ ಆಗುವು ದಿಲ್ಲ. ಅಲ್ಲದ ನನ್ನ ಮನಸ್ಸಿಗೂ ಸುಮ್ಮ ಸುಮ್ಮನೆ ಪಂಚಾಯತಿ ಮೆಂಬರ್ ಆಗುವುದು ಇಷ್ಟ ಇಲ್ಲ.

ನಾನು ತಾ. ಪಂ. ಅಧ್ಯಕ್ಷರು. ನನಗೇನು ಮೊದಲ ರಾಜಕೀಯ ಬಗ್ಗೆ ಆಸಕ್ತಿ ಏನ ಇರಲಿಲ್ಲ. ಊರಾಗ ನಾವು ಗೌಡ್ರ ಇದ್ದೇವೆ. ನನ್ನ ಗಂಡ ನಮ್ಮ ಮಂದಿ ಒಳಗ ಸೀಟ್ ಬಂದಿದೆ ಅದಕ್ಕ ನೀ ನಿಲ್ಲು ಅಂತ ಹೇಳಿದ್ರು. ನಾನು ಮೊದಲಿಗೆ ಒಲ್ಲೆ ಅಂತ ಹೇಳಿದೆ ಯಾಕಂದ್ರ ನನಗ ಮನಿ ಬಿಟ್ಟು ಹೊರಗ ಹೋಗಿದ್ದು ಗೊತ್ತಿಲ್ಲ. ಮದುವೆ ಆದ ಮೇಲೆ, ಮದುವೆಗಿಂತ ಮೊದಲ ನಾನು ಹೆಣ್ಣಮಗಳು ಅಂತ ಯಾರು ನನಗ ಮನೀ ಬಿಟ್ಟು ಹೊರಗ ಕಳಿಸಲಿಲ್ಲ. ಹೀಗಾಗಿ ನನಗ ಪ್ರಪಂಚದ ಜ್ಞಾನ ಕಡಿಮೆ ಅದ. ಅಂತಾದರೊಳಗಾ ನನಗ ಒಮ್ಮೆಗಲೇ ಪಂಚಾಯತಿ ಮೆಂಬರ ಆಗು ಅಂತ ಹೇಳಿದ್ರ ನಾ ಹೇಂಗ ಹೂಂ ಅಂತ ಹೇಳಲೀ: ನನಗ ನನ್ನ ಗಂಡ ಮೊದಲ ಹೇಳಿದಾಗ ಅಂಜಿಕೆ ಬಂದು ನಾ ಒಲ್ಲೇ ಎಂದು ಹೇಳಿದೆ. ಆದ್ರ ನಾನು ನಿನ್ನ ಜೊತೆ ಇರತೀನಿ, ಸುಮ್ಮನೇ ನೀ ನಿಲ್ಲು. ನಾನೇ ಎಲ್ಲಾ ನೋಡಕೋತಿನಿ ಅಂತ ಅಂದ್ರ ಅದಕ್ಕ ನಾ ಒಪ್ಪಿಕೊಂಡೆ.

ನಾನೇನು ಊರಾಗ ಇಲೆಕ್ಷನ್ ಪ್ರಚಾರಕ್ಕ, ಓಟ ಕೇಳಲಾಕ ಹೋಗಲಿಲ್ಲ. ಎಲ್ಲ ನನ್ನ ಗಂಡ, ನಮ್ಮ ಮಂದಿನೇ ನೋಡಿಕೊಂಡ್ರು. ಅದ್ರ ನನಗ ಮಾತ್ರ ಯಾವಾಗಲು ಬಯಳ ಅಂಜಿಕೆ ಆಗುತ್ತಿತ್ತು. ಯಾಕೆಂದ್ರ ನಾ ಆಕಸ್ಮಾತ ಸೋತಬ್ರೆ, ಗೆದ್ದಬ್ರೆ ಮುಂದ ಏನ ಮಾಡೋದು. ರೊಕ್ಕ ಬ್ಯಾರಾ ಬಹಳ ಖರ್ಚ ಆಗಲಾಕತದ. ಅಂತಾದರೊಳಗೆ ನಾ ಸೋತ್ರ ಅಂತ ಹೇಳಿ ಬಹಳ ಭಯ ಆಗಿತ್ತು. ಅದ್ರ ದೇವರ ಪುಣ್ಯ ನಾ ಗೆದ್ದಬಿಟ್ಟಾ ಅಂತ ಹೇಳಿದಾಗ ಬಹಳ ಖುಷಿ ಆತು. ನನ್ನ ಗಂಡ, ನಮ್ಮ ಮನ್ಯಾಗಿನವರು ಬಯಳ ಸಂತೋಷಪಟ್ಟರು.

ನನ್ನ ಗಂಡ ಮೊದಲ ಸಲ ನಾ ಪಂಚಾಯತಿ ಮೀಟಿಂಗ್ ಹೋಗಬೇಕಾದ್ರ ನನ್ನ ಜೊತೆ ಒಂದು ಧೈರ್ಯ ಹೇಳಿದ್ರು. ಅಲ್ಲದೆ ಪಂಚಾಯಿತಿಯಿಂದ ತರಬೇತಿನು ಕೊಟ್ಟರು. ಆಮೇಲೆ ನನಗ ಧೈರ್ಯ ಬಂತು. ನಾ ಒಬ್ಬಕೆ ಪಂಚಾಯತಿ ಮೀಟಿಂಗ ಹೋಗಲಿಕ್ಕೆ ಪ್ರಾರಂಭಿಸದೇ ನಾ ಹೋದ್ರ ಪಂಚಾಯತಿ ಮೆಂಬರ ಎಲ್ಲಾರು ಮಾತಾಡಸತಾರ ಮತ್ತು ಕಿಮ್ಮತ(ಗೌರವ) ಕೊಡತಾರ. ನಾನು ಊರಾಗ ಏನೇನು ಕೆಲಸ ಆಗಬೇಕು, ನಾಳೆ ಮೀಟಿಂಗ್ ಒಳಗ ಏನೇನ ಮಾತಾಡಬೇಕು ಎಂದು ಮೊದಲೇ ನನ್ನ ಗಂಡನ ಹತ್ರ ಕೇಳಿ ತಿಳಿಕೊತೀನಿ. ಅಲ್ಲದೆ ಊರ ಜನರು ಬಂದು ನಮ್ಮ ಊರಾಗ ಹಿಂತಾವರ, ಕೆಲಸ ಆಗಬೇಕು ಅಂತ ಮೊದಲ ತಿಳಿಸಿರತಾರ ಅದನ್ನೆಲ್ಲಾ ಮೀಟಿಂಗನ್ಯಾಗ ಮಾತಾಡತ್ತೀನಿ.

ಮೊದಲ ೩ ವರ್ಷ ಎಲ್ಲಾ ತಿಳಕೊಳಾಕನೇ ಹೋಯಿತು. ಆಮೇಲೆ ನನಗೂ ಪಂಚಾಯತಿ ವಿಷಯದ ಬಗ್ಗೆ ಆಸಕ್ತಿ ಬರಲಾಕ ಶುರು ಆಯಿತು. ನಾನೇ ಮೀಟಿಂಗ್ ಒಳಗ ಹೆಚ್ಚ ಮಾತಾಡೊದು. ಉಳಿದ ಹೆಣ್ಣ ಮಕ್ಕಳು ಸುಮ್ಮ ಇರತಾರ ಗೌಡತೀ ನೀವೇ ಮಾತಾಡರ್‍ರೀ. ನಾವು ನಿಮ್ಮ ಜೊತೆ ಇರತ್ತೀವಿ ಅಂತ ಹೇಳತ್ತಾರ. ಅಲ್ಲದ ಅವರು ನನ್ನಷ್ಟ ಸಾಲೀನು ಕಲತ್ತೀಲ್ಲ. ಅಲ್ಲದ ಅವರಿಗೆ ಧೈರ್ಯನು ಸ್ವಲ್ಪ ಕಡಿಮೆ.

ನಮ್ಮ ತಾಲೂಕ ಪಂಚಾಯತಿ ಒಳಗ ನಮ್ಮ ಪಕ್ಷದವರೇ ಹೆಚ್ಚ ಅದಾರ. ಹೀಗಾಂಗಿ ನನಗೇನು ಸಮಸ್ಯೆ ಆಗುವುದಿಲ್ಲ. ಆದ್ರನು ಕೆಲವು ಸಲ ಗಂಡಸರು ಎಲ್ಲಾ ಬರೀ ನಿಮ್ಮ ಕೆಲಸಾನೇ ಮಾಡಕೋತ್ತಿರ್‍ರಿ ಎನರ್‍ರೀ ಅಂತ ಬೈಯತ್ತಾರ. ಅದಕ್ಕ ನಾನು ನಮ್ಮ ಕಡೆ ಆಡಳಿತ ಅದ ಅದಕ್ಕ ಮಾಡಕೋತ್ತೀವಿ ಅಂತೀನಿ. ನಾನು ಬಹಳ ಮಾತಾಡೋದು, ಸರಿಯಾಗಿ ಎಲ್ಲಾ ತಿಳಿಕೊಳ್ಳುವುದು ಮಾಡಿರುವುದರಿಂದ ನನಗ ಅಧ್ಯಕ್ಷ ಮಾಡಿದ್ರ. ಸದಸ್ಯರಾಗುವುದಕ್ಕಿಂತ ಅಧ್ಯಕ್ಷರಾಗುವುದರಿಂದ ಬಹಳ ಕೆಲಸ ಮಾಡಬಹುದು. ಅಲ್ಲದೆ ನಮ್ಮ ತಾ.ಪಂ.ಇ.ಓ. ಬಹಳ ಚಲೂ ಅದಾರ. ಅವರೇ ನಮಗ ಎಲ್ಲಾ ತಿಳಿಸಿ ಹೇಳುತ್ತಾರ. ಹೀಂಗಾಗಿ ಎಲ್ಲಾ ಚಲೂ ಅನ್ನಿಸಿದೆ. ಮುಂದೆ ಅವಕಾಶ ಸಿಕ್ಕರೆ ಜಿಲ್ಲಾ ಪಂಚಾಯತಿ ಮೆಂಬರ ಆಗಬೇಕು ಅಂತ ಅನಿಸಿದೆ. ಅದ್ರ ನೋಡಬೇಕು. ರಾಜಕೀಯದಾಗ ಯಾವಾಗ ಏನ ಆಗತದ ಅಂತ ಹೇಳಲಿಕ್ಕ ಬರುವುದಿಲ್ಲ.

**ಪುರುಷ ಪ್ರಕರಣ-೧:**

ನಾನು ಊರಾಗ ಬಹಳ ಓಡಾಡುತ್ತೇನ್ರೆ, ಊರ ಒಳಗ ಇರುವ ಗೌಡ್ರ, ಪಕ್ಷದ ಮೆಂಬರು ಎಲ್ಲಾ ನನಗ ಗೊತ್ತ ಅದಾರ. ನಾನ ಸಾಲಿ ಕಲತೀನಿ ಅಂತ ನಮ್ಮ ಓಣ್ಯಾಗ ಮತ್ತ ಊರಾಗ ಬಹಳ ಕಿಮ್ಮತ ಕೊಡತಾರ, ಬರೀ ಸಾಲಿ ಕಲಿಯೋದರಿಂದ ಏನು ಆಗೋದಿಲ್ಲ. ನಾಲ್ಕು ಜನರಿಗೆ ಒಳ್ಳೆಯದ ಮಾಡಲಾಕ ಬಯಸತೀನಿ, ಜನರಿಗೆ ಏನರೇ ಗೊತ್ತ ಆಗದಿದ್ದರ ನನಗ ಬಂದ ಕೇಳತಾರ. ನಾನು ನನಗ ಎಷ್ಟ ಗೊತ್ತ ಆಗತ್ತದ ಅಷ್ಟ ಹೇಳತೀನಿ. ಒಂದೊಂದು ಸಲಾ ಅವರ ಜೊತೆ ಹೋಗಿ ಅವರಿಗೆ ಸಹಾಯ ಮಾಡತೀನಿ. ಹೀಂಗಾಗಿ ನನಗ ಗೌಡ್ರರೆ ತಾಲೂಕ ಪಂಚಾಯತ್ ಚುನಾವಣೆಗೆ ನಿಲ್ಲಲಿಕ್ಕೆ ಟಿಕೆಟ್ ಕೊಡಿಸಿದರು.

ನನಗ ಮನ್ಯಾಗ ಯಾರು ವಿರೋಧಿಸಲಿಲ್ಲ. ಮನ್ಯಾನವರೇ ಬಂದು ಚುನಾವಣೆಯೊಳಗ ಪ್ರಚಾರ ಮಾಡಿದರ್ರು. ನನಗ ಸಾಥ ಕೊಟ್ಟರು. ಇಂದು ನನಗ ಊರಾಗ ಬಹಳ ಕಿಮ್ಮತ ಕೊಡತಾರ. ದಿನಾ ಒಂದ ಇಲ್ಲ ಒಂದ ಕೆಲಸಾ ಮಾಡಿಸಿ ಕೊಡರ್ರಿ ಅಂತ ನಮ್ಮ ಸುತ್ತಮುತ್ತ ಹಳ್ಳಿಯವರು ಬರತಾರ. ನಾನು ಮುಂದ ಜಿಲ್ಲಾ ಪಂಚಾಯತ್ ಚುನಾವಣೆಗೆ ಸ್ಪರ್ಧಿಸಬೇಕು ಅಂತ ಮಾಡಿದ್ದಿನೀ. ಸಾಧ್ಯ ಆದ್ರ ಇನ್ನು ಒಳ್ಳೆಯ ಕೆಲಸಾ ಮಾಡಲಿಕ್ಕೆ ಅವಕಾಶ ಸಿಕ್ಕರ ಖಂಡಿತ ಮಾಡತೀನಿ.

**ಪುರುಷ ಪ್ರಕರಣ-೨**

ನಾನು ಮೊದಲಿನಿಂದಲೂ ರಾಜಕೀಯದಾಗ ಓಡಾಡಕೊಂಡ ಇರತ್ತಿದ್ದೆ. ನಾನ ಬಹಳ ಸಾಲಿ (ಪದವಿ) ಕಲತೀನಿ ಅಂತ ಊರಾಗ ಬಾಳ ಕಿಮ್ಮತ ಕೊಡತಾರ. ಅಲ್ಲದೆ ನಾನು ಊರಾನ ಜನ ಕರದರ ಅವರ ಜೊತೆ ಹೋಗಿ ಕೆಲಸಾ ಮಾಡತೀನಿ. ಊರಾನವರಿಗೂ ಬಾಳ ಖುಷಿ ಆಗತ್ತದ. ಹೀಂಗಾಗಿ ನನಗ ಊರಾಗಿನ ಗೌಡ್ರರು, ದೊಡ್ಡವರು, ಪಕ್ಷದವರು ಎಲ್ಲಾ ಗೊತ್ತ ಅದಾರ.

ನಮ್ಮ ಓಣಿ ಒಳಗಿನ ಜನರೆಲ್ಲಾ ಮೊದಲ ನನಗ ಗ್ರಾಮ ಪಂಚಾಯತಿ ಮೆಂಬರ ಆಗ ಅಂತ ಹೇಳಿದ್ರ, ಆದ್ರ ನಾನೇ ಒಲ್ಲೇ ಅಂತ ಹೇಳಿದೆ ಯಾಕಂದ್ರ ಇನ್ನೊಬ್ರು ನಮ್ಮ ಓಣ್ಯಾಗ ನಿಂತಿದ್ದರ್ರ ಅದಕ ನಾನ ಒಲ್ಲೆ ಅಂತ ಹೇಳಿದೆ. ನನಗ ಜಗಳಾ ತಗದ ಮೆಂಬರ ಆಗಲಾಕ ಇಷ್ಟ ಇಲ್ಲಾ. ನಮ್ಮ ಊರಾಗನೇ ನಮ್ಮ ಜನರ ಜೊತೆ ಜಗಳಾ ತಗೀಯಬಾರದು ಅನ್ನುವುದು ನನ್ನ ಪೊಲಿಸಿ. ನಮ್ಮ ನಮ್ಮ ಒಳಗ ಜಗಳಾ ಹಚ್ಚೊದು ಬಾಳ ನಡಿತದ. ಆದ್ರ ನಾವ ಅದನ್ನೆಲ್ಲಾ ತಿಳಿದುಕೊಂಡ ಮುಂದಿನ ಹೆಜ್ಜಿ ಇಡಬೇಕ. ಊರಾಗ ನಮಗ ಆಗುವವರು ಇರತಾರ ಆಗದವರು ಇರತಾರ. ಎಲ್ಲಾರನ್ನು ಒಟ್ಟಿಗೆ ಇಟ್ಟುಕೊಂಡರ ಮಾತ್ರ ರಾಜಕೀಯದಾಗ ಬಾಳ ದಿನಾ ಬಾಳಲಾಕ ಆಗತದ, ಇಲ್ಲಾದ್ರ ಆಗುವುದಿಲ್ಲ. ಅದಕ ನನಗ ಜಿಲ್ಲಾ ಪಂಚಾಯತ್ ಮೆಂಬರ ಆಗಲಾಕ ಸಾಧ್ಯ ಆಯಿತು. ಪಕ್ಷದಾಗ ನಮ್ಮ ಮಂದಿನೇ, ಊರಾನ ಮಂದಿನೇ ಇರುವುದರಿಂದ ಪಕ್ಷದ ಟಿಕೆಟ್ ಸಿಗುವುದು ಏನ ಕಷ್ಟ ಆಗಲಿಲ್ಲ. ಚುನಾವಣೆ ಪ್ರಚಾರಕ್ಕ ಅದು ಹಗಲ ರಾತ್ರಿ ಅಡಾಡತ್ತಿದ್ದೆ. ಆಗ ನಮ್ಮ ಊರಾನ್ನ ಜನರು ನನಗ ಏನು ಅನ್ನಲಿಲ್ಲ. ಆದ್ರ ಬ್ಯಾರೆ ಊರಾನ ಜನ ನೀವು ಎಲ್ಲಾ ಹೀಂಗೆ ಓಟ್ ಹಾಕಬೇಕಂದ್ರ ಮಾತ್ರ ನಾವ ನೆನಪ ಆಗತೇವ ಅಂತ ಅನ್ನತ್ತಿದ್ರ. ಆಗ ನಾನ ಹಂಗೇನ ಇಲ್ಲಾ ನಿಮಗ ಹಾಕಬೇಕ ಅಂತ ಅನಿಸಿದ್ರ ಹಾಕ್ರಿ, ನನಗ ಕೆಲಸಾ ಮಾಡಲಾಕ ಒಂದು ಅವಕಾಶ ಮಾಡಿ ಕೊಡ್ರೀ ಅಂತ ಹೇಳತ್ತಿದ್ದಾ. ಹಂಗೇ ಎಲ್ಲಾ ರಾಜಕೀಯದೊಳಗ ನಡೀತಾವ.

ನನಗ ಊರಾಗ ಮೊದಲೇ ಕಿಮ್ಮತ್ತ ಕೊಡತ್ತಿದ್ದರ, ಈಗ ಜಿಲ್ಲಾ ಪಂಚಾಯತ್ ಮೆಂಬರ ಆದ ಮೇಲೆ ಇನ್ನಾ ಹೆಚ್ಚ ಕೊಡತಾರ. ಊರಾಗ ಯಾವುದಾದರೂ ಕಾರ್ಯಕ್ರಮ ಆದ್ರ ನನಗ ಕರೀತಾರ. ನನಗ ಕೇಳಿ ಹೇಳಿ ಕಾರ್ಯಕ್ರಮ ಮಾಡತಾರ. ನನಗೂ ಖುಷಿ ಆಗತದ.

ಊರಾಗ ನಾನು ಬಾಳ ಕೆಲಸಾ ಮಾಡಿಸಿಕೊಟ್ಟೆನಿ. ಆರೋಗ್ಯ ಕೇಂದ್ರಕ್ಕ ಕಂಪೌಡ ಕಟ್ಟಿಸಿಕೊಟ್ಟೆನಿ. ರಸ್ತೆ ಮಾಡಿಸಿದ್ದೀವಿ.

**ಪುರುಷ ಪ್ರಕರಣ-೩**

ನನ್ನ ಹೆಸರು ನಿಂಗಪ್ಪ ನಾನು ಮೊದಲಿನಿಂದಲೂ ಊರಾಗಿನ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದೇ. ಪಕ್ಷದ ಮುಖಂಡರು ನನಗ ಗೊತ್ತ ಅದಾರ. ಹೋದ ಸಲಾ ಚುನಾವಣೆ ಯಲ್ಲಿ ನಾನು ನಮ್ಮ ಊರಾಗಿನ ಗೌಡರಿಗೆ ಬಹಳ ಸಹಾಯ ಮಾಡಿದ್ದೇ. ಅವರ ಜೊತೆ ತಿರುಗಾಡುವುದು, ಅವರ ಕರದಾಗ ಹೋಗುವುದು ಅವರ ಮಾತ ಕೇಳುವುದು ಮಾಡತ್ತಿದ್ಯಾ. ನಮ್ಮ ಜಾತಿ ಒಳಗ (ಎಸ್.ಸಿ) ಸೀಟ ಬಂದದ ಅಂತ ಗೊತ್ತಾದ ಮೇಲೆ ನನಗ ನಮ್ಮ ಗೌಡ್ರರೆ ಕರೆದು ನೀನು ಈ ಸಲಾ ಚುನಾವಣೆಗೆ ನಿಲ್ಲು ಅಂತ ಹೇಳಿದ್ರ. ನಾನು ಗೌಡರೇ ನಾನು ಒಲ್ಲೇ ಅಂತ ಹೇಳಿದೇ. ಗೌಡರೇ ಮೊದಲೇ ಇಲೆಕ್ಷನ್ ಅಂದ್ರೇ ಬಹಳ ರೊಕ್ಕಾ ಖರ್ಚ ಆಗತ್ತದ ನನ್ನ ಹತ್ತರ ಎಲ್ಲಿ ರೊಕ್ಕಾ ಅದ ಅಂದೇ. ಗೌಡರು ಪಕ್ಷದವರೇ ಎಲ್ಲಾ ರೊಕ್ಕಾ ಕೊಡತಾರ, ಅವರ ಕೊಡದ್ದಿದ್ರ ನಾನ ಕೊಡತೀನಿ ಅಂತ ಹೇಳಿದರು. ನಾನು ಇಂದ ತಾಲೂಕ ಪಂಚಾಯತ್ ಮೆಂಬರ ಆಗಬೇಕ ಅಂದ್ರ ಅವರೇ ಕಾರಣ, ಅವರ ಪುಣ್ಯಾದಿಂದ ನಾನ ಆಗಿನೀ.

ನಮ್ಮದು ಒಕ್ಕಲುತನದ ಮನೆತನ ಅದ. ಇರೋದು ಸ್ವಲ್ಪ ಭೂಮಿ ದುಡಿದರ ಹೊಟ್ಟಿ ತುಂಬತದ ಇಲ್ಲದಿದ್ರ ಇಲ್ಲ. ಮೊದಲ ಸಲಾ ಮೀಟಿಂಗ ಇದ್ದಾಗ ನಮ್ಮ ಗೌಡರ ಹತ್ತರ ಹೋಗಿ ಗೌಡರ ಏನ ಮಾತಾಡೋದು ಅಂತ ಕೇಳಿದ್ಯಾ, ಅವರೇ ಎಲ್ಲಾ ಹೇಳಿದ್ರ, ಅಲ್ಲದ ತಾಲೂಕ ಪಂಚಾಯತಿಯಲ್ಲಿ ಇರುವ ಯೋಜನೆಗಳ ಬಗೆಗೆ ಹೇಳಿದರು. ಅವರು ಹೇಳಿರುವುದ ರಿಂದ ನನಗ ಗೊತ್ತ ಆತ. ಅಲ್ಲದ ನನಗ ನನ್ನ ಮಗಾ ಎಲ್ಲಾ ಹೇಳಿದ. ಅವಾ (ಮಗಾ) ಈ ಸಲಾ ಹತ್ತನೇತ್ತೆ ಓದತಾನ. ಅವಾ ನಾನ ತಾಲೂಕ ಪಂಚಾಯತ ಮೆಂಬರ ಆದ ಮೇಲೆ ಒಂದ ಬುಕ ತೆಗೆದುಕೊಂಡ ಬಂದ ಓದಿ ಹೇಳಿದ. ಆಗ ನನಗ ಇನ್ನಾ ಹೆಚ್ಚಿಗೆ ತಿಳಿದ ಕೊಂಡೇ. ನನ್ನ ಮಗಾನೇ ನನಗ ಅಪ್ಪಾ ಯಾವುದೇ ಮೀಟಿಂಗ ತಪ್ಪಸಬ್ಯಾಡ. ಎಲ್ಲದಕೂ ಹೋಗ ಅಂತ ಹೇಳಿದ ಆಗಿನಿಂದ ನಾನ ಎಲ್ಲಾ ಮೀಟಿಂಗಕ್ಕ ಹೋಗತ್ತೀನಿ. ನನಗ ಏನ ಕಷ್ಟ ಅಂತ ಏನ ಅನಿಸಿಲ್ಲ. ಇಲೆಕ್ಷನ ಇದ್ದಾಗನೇ ಕಷ್ಟ ಅಂತ ಅನಸಿತ್ತು. ಈಗ ಏನ ಇಲ್ಲ. ನಾನ ಗೆಲ್ಲತ್ತೀನಿ ಅಥವಾ ಇಲ್ಲ ಅಂತ ಅನಸತಿತ್ತ. ಈಗ ಏನ ಇಲ್ಲಾ ಎಲ್ಲಾ ಚಂದಗೇ ನಡೀತದ.

**ವಿಮರ್ಶೆ**

ಎಲ್ಲ ಪ್ರಕರಣಗಳನ್ನು ಅವಲೋಕಿಸಿದಾಗ ತಾಲೂಕ್ ಪಂಚಾಯತಿಯಲ್ಲಿಯೂ ಜಾತಿ, ವರ್ಗ, ಮನೆತನ, ಪಕ್ಷಗಳಿಂದ ಆಯ್ಕೆಯಾಗಿರುವುದು ಕಂಡು ಬಂದಿದೆ. ಮಹಿಳಾ ಸದಸ್ಯರುಗಳ

ಆಯ್ಕೆಯ ಹಿನ್ನೆಲೆ ಕೇವಲ ಶಿಕ್ಷಣ, ಮೀಸಲಾತಿ ಮಾತ್ರ ಆಗಿರದೇ ಇದನ್ನು ಮೀರಿದ ಪುರುಷ ಪ್ರಧಾನ್ಯತೆ ಪ್ರಭಾವ ಕೆಲಸ ಮಾಡಿರುವುದು ಕಂಡು ಬಂದಿದೆ. ಮಹಿಳಾ ಸದಸ್ಯರುಗಳ ಆಯ್ಕೆಯ ಹಿನ್ನೆಲೆಯಲ್ಲಿಯೂ ಪುರುಷರ ಹಿತಾಸಕ್ತಿಗಳು ಕೆಲಸ ಮಾಡಿವೆ. ಮಹಿಳೆಗೆ ಆಸಕ್ತಿ ಇದ್ದು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದರೆ ಆಕೆಯನ್ನು ತಪ್ಪಾಗಿಯೇ ಅರ್ಥೈಸುವ ಹಾಗೂ ಆಕೆಯನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ ಹೊರತು ಮಹಿಳೆಯರಿಗೆ ಪ್ರೋತ್ಸಾಹ ದೊರೆಯುವುದಿಲ್ಲ. ರಾಜಕೀಯದಲ್ಲಿ ಪುರುಷ ಪ್ರಧಾನತೆಯಿಂದಾಗಿ ಮಹಿಳೆಯರಲ್ಲಿ ಧೈರ್ಯ, ಜಾಣ್ಮೆ, ಸಾಮರ್ಥ್ಯವಿದ್ದರೂ ಅವಕಾಶಗಳನ್ನು ಪುರುಷರು ಬಳಸಿಕೊಳ್ಳುತ್ತಿದ್ದಾರೆ. ಮಹಿಳಾ ಮೀಸಲಾತಿಯಿಂದ ಮಹಿಳೆಯರು ಮನೆ ಬಿಟ್ಟು ಹೊರ ಬಂದಿರುವುದು, ಸಮಾಜಮುಖಿಯಾಗು ತ್ತಿರುವುದು, ಬದಲಾವಣೆ ಆಗುತ್ತಿರುವುದು ಸಬಲೀಕರಣವನ್ನು ಸಾಧಿಸಲು ಮೊದಲ ಮೆಟ್ಟಿಲು ಗಳಾಗಿವೆ. ಅರಿವು, ಜ್ಞಾನವನ್ನು ನೀಡದೆ ಸಬಲೀಕರಣವೆಂದರೆ ಏನು ಸಾಧ್ಯವಾಗುತ್ತದೆ. ಮೀಸಲಾತಿಯಿಂದ ನಿರೀಕ್ಷಿತ ಮಟ್ಟದ ಸಾಧನೆಯನ್ನು ನಾವು (ಅಧ್ಯಯನ) ನಿರೀಕ್ಷಿಸುವುದು ತಪ್ಪಾಗುತ್ತದೆ. ಆಯಾ ಸ್ಥಾನದಲ್ಲಿರುವವರ ಅನುಭಕ್ಕೆ ಬಂದರೆ ಸಾರ್ಥಕವಾಗುತ್ತದೆ. ಮಹಿಳಾ ಸದಸ್ಯರು ಪುರುಷರು ಹೇಳಿದಂತೆ ನಡೆದುಕೊಳ್ಳುತ್ತಿರುವುದು ಅವರ ಸಾಮಾಜಿಕ ಸಂದರ್ಭಗಳನ್ನು ತಿಳಿಸುತ್ತದೆ. ವ್ಯಕ್ತಿಯನ್ನು ಅರ್ಥ ಮಾಡಿಕೊಳ್ಳಬೇಕಾದರೆ ಮೊದಲು ಅವರ ಸಾಮಾಜಿಕ ಪರಿಸರ ವನ್ನು ತಿಳಿದುಕೊಳ್ಳಬೇಕಾಗಿರುವುದು ಅಗತ್ಯ.

ಸಮಾಜವೇ ಪುರುಷ ಕೇಂದ್ರಿತವಾಗಿರುವುದರಿಂದ ಪುರುಷ ಸದಸ್ಯರಿಗೆ ಅವಕಾಶಗಳು ಬೆಳೆಯುತ್ತಲೇ ಸಿಗುತ್ತವೆ. ಇವರಲ್ಲಿಯೂ ಅಧೀನ, ಪ್ರಧಾನ, ಜಾತಿ, ವರ್ಗವಾರು ಸಮಸ್ಯೆ ಗಳು ಇರಬಹುದಾದರೂ ಅವುಗಳನ್ನು ಮೀರಿಕೊಂಡು ಬೆಳೆಯುವುದನ್ನು ಸಾಮಾಜಿಕ ವ್ಯವಸ್ಥೆ ಕಲಿಸಿರುತ್ತದೆ. ಮಹಿಳಾ ಸದಸ್ಯರ ಸಮಸ್ಯೆಗಳು ಇದಕ್ಕಿಂತ ಭಿನ್ನವಾಗಿವೆ. ಮಹಿಳೆಯನ್ನು ವ್ಯಕ್ತಿಯನ್ನಾಗಿ ನೋಡದೆ ಲಿಂಗವನ್ನಾಗಿ ನೋಡುತ್ತಾರೆ. ಮೀಸಲಾತಿ ನೀಡುವುದರ ಜೊತೆಗೆ ಸಾಮಾಜಿಕ ಬದಲಾವಣೆಗಳು ಕೇಂದ್ರೀಕೃತವಾಗಿರುವ ವ್ಯವಸ್ಥೆಗೆ ಪೂರಕವಾಗಿರದೆ ವಿಕೇಂದ್ರೀ ಕರಣಗೊಳಿಸಬೇಕಾಗಿದೆ.

**ಪರಾಮರ್ಶನ ಗ್ರಂಥಗಳು**

೧. ಹೇಮಲತಾ ಮಹಿಷಿ, ೨೦೦೪, ಸಬಲೆ-ಸಲಹೆ, ಸಾಧನಾ ಪ್ರಕಾಶನ, ಬೆಂಗಳೂರು.
೨. ಹೇಮಲತಾ ಮಹಿಷಿ, ೧೯೯೯, ಇಪ್ಪತ್ತೊಂದನೆಯ ಶತಮಾನದಲ್ಲಿ ಮಹಿಳೆ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೩. ಹೇಮಲತಾ, ಎಚ್.ಎಂ., ೨೦೦೦, ಮಹಿಳಾ ಸಬಲೀಕರಣ, ಅಭಿರುಚಿ ಪ್ರಕಾಶನ ಬೆಂಗಳೂರು.
೪. ಹೆಗ್ಗಡೆ ಒಡೆಯರ್ ಡಿ. ೨೦೦೪, ಮಾನವಾಭಿವೃದ್ಧಿ ಮತ್ತು ಪ್ರಜಾಪ್ರಭುತ್ವ, ಮಾನವಾಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು
೫. ಶ್ರೀಮತಿ ಎಚ್. ಎಸ್. : ೨೦೦೪, ಹೆಣ್ಣು ಹೆಂಗಸು, ಬ್ಯಾಲದ ಕೆರೆ ಪ್ರಕಾಶನ,, ಮಂಡ್ಯ.

೬. ಚಂದ್ರಶೇಖರ ಟಿ. ಆರ್. ೨೦೦೦. ವಿಕೇಂದ್ರೀಕರಣ ತತ್ವ ಮತ್ತು ಆಚರಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
೭. ಚಂದ್ರಶೇಖರ ಟಿ. ಆರ್. ೨೦೦೧ ಗ್ರಾಮೀಣಾಭಿವೃದ್ಧಿ ಮತ್ತು ವಿಕೇಂದ್ರಿಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
8. Letha kumari 'Women in politics' Authour press New Delhi 2005.
9. Laneihzove 'women's development in india' Mittal publication New Delhi , 2007.
10. Snehalatha panda 'Indian politics'Archive pudlication New delhi.
11. Timmaiah T 'Power politics and social justice' sage publication New dehli, 1993.

...

೯

# ದೇವದಾಸಿ ಪದ್ಧತಿ : ಒಂದು ವಿಶ್ಲೇಷಣೆ

ಡಾ. ಶಾಂತಾ ಮಠ

ದೇವದಾಸಿ ಪದ್ಧತಿಯ ಉಗಮ, ವಿಕಾಸ, ಸ್ವರೂಪ, ಕಾರಣ, ಪರಿಣಾಮಗಳನ್ನು ಕುರಿತಂತೆ ವಿಶ್ವದಾದ್ಯಂತ ಅಧ್ಯಯನಗಳು ನಡೆದು ಬಂದಿವೆ. ಅಂತೆಯೇ ಭಾರತದ ಉದ್ದಗಲಕ್ಕೂ ಹರಡಿಕೊಂಡಿರುವ ಈ ಸಂಪ್ರದಾಯವನ್ನು ಕುರಿತು ಮೊದಲಿಗೆ ಪಾಶ್ಚಿಮಾತ್ಯರು ಅನಂತರ ದೇಶಿಯ ವಿದ್ವಾಂಸರು, ಸಮಾಜಶಾಸ್ತ್ರಜ್ಞರು ಅಧ್ಯಯನ ನಡೆಸಿದ್ದಾರೆ. ಜಗತ್ತಿನಾದ್ಯಂತ ಈ ಪದ್ಧತಿ ಒಂದಿಲ್ಲೊಂದು ರೀತಿಯಲ್ಲಿ ಆಚರಣೆಯಲ್ಲಿದೆ. ಭಾರತ ಅಲ್ಲದೆ ಪಶ್ಚಿಮ ಏಷ್ಯಾ, ಮಧ್ಯ ಅಮೆರಿಕಾ, ಈಜಿಪ್ಟ್, ಗ್ರೀಸ್, ರೋಮ್‌ಗಳಲ್ಲದೆ ಪಶ್ಚಿಮ ಆಫ್ರಿಕಾ ಮುಂತಾದೆಡೆಗಳಲ್ಲಿ ಆಯಾ ಪ್ರದೇಶಕ್ಕನುಗುಣವಾಗಿ ಬೇರೆ ಬೇರೆ ಪದ್ಧತಿಗಳು, ಸಂಪ್ರದಾಯಗಳು ಬೆಳೆದು ಆಚರಣೆಯಲ್ಲಿರುವುದನ್ನು ಕಾಣುತ್ತೇವೆ. ಭಾರತದಲ್ಲಿ ವೇದಕಾಲದಿಂದಲೂ ಈ ಪದ್ಧತಿ ಇರುವುದಕ್ಕೆ ನಿದರ್ಶನಗಳಿವೆ. ಸ್ಕಂದಪುರಾಣ, ಶಿವಪುರಾಣದಲ್ಲಿ ದೇವನರ್ತಕಿಯರ, ಗಣಿಕಾ ಸ್ತ್ರೀಯರ ಬಗ್ಗೆ ಉಲ್ಲೇಖಗಳಿವೆ. ಮೊದಮೊದಲ ಮಾತೃಪ್ರಧಾನ ಸಂಸ್ಕೃತಿಯಲ್ಲಿ ಸ್ತ್ರೀಯರನ್ನು ಗೌರವಿಸುವ ಸಂಕೇತವಾಗಿ ಶಕ್ತಿ ಆರಾಧನಾ ಕೇಂದ್ರಗಳು ಬೆಳೆದು ಬಂದಿವೆ ಎಂದು ಹೇಳಲಾಗುತ್ತಿದೆ. "ಹರಪ್ಪ-ಮೆಹಂಜೋದಾರೊ ನಿವೇಶನಗಳ ಬಳಿಯ ಯೋಬ್ ಪ್ರದೇಶದ ರಣಗಾಂಧಾರಿ ಮತ್ತು ಕುಳ್ಳಿಯ ಮಡಕೆಗಳಲ್ಲಿ ವೃಷಭ ಸ್ವರೂಪದ ಚಿತ್ರವಿರುವಂತೆ ಅಲ್ಲಿಯೇ ಕಂಚಿನ ನೃತ್ಯದ ಹುಡುಗಿಯ ಚಿತ್ರವು ಗಮನ ಸೆಳೆಯುತ್ತದೆ. ಹುಡುಗಿಯು ಬೆತ್ತಲೆಯಾಗಿದ್ದು ಕತ್ತಿನಲ್ಲಿ ಭಾರವಾಗಿರುವ ಸರವನ್ನು, ತೋಳಿನ ತುಂಬಾ ಬಳೆಗಳನ್ನೂ ಧರಿಸಿದ್ದಾಳೆ."[೧] ಪ್ರಾಯಶಃ ಇದು ಆ ಕಾಲದ ಸ್ತ್ರೀಯರ ಸಾಂಸ್ಕೃತಿಕ ಅಭಿವ್ಯಕ್ತಿಯ ಸಂಕೇತವೂ ಇರಬಹುದು ಅಥವಾ ದೇವಸ್ಥಾನದ ಪರಿಚಾರಿಕೆಯರ ಚಿತ್ರಣವು ಇರಬಹುದು.

ಅಸ್ಸಾಂನಲ್ಲಿ ದೇವದಾಸಿಯರನ್ನು ನಟಿಯರೆಂದು, ಮಹಾರಾಷ್ಟ್ರದಲ್ಲಿ 'ಮುರಳೀಸ್', ಒರಿಸ್ಸಾದಲ್ಲಿ 'ಮಹರೀಸ್' ಎಂದೂ, ಆಂಧ್ರಪ್ರದೇಶದಲ್ಲಿ ದೇವಲಿ, ಭೋಗ ಮಗಳೆಂದು,

ಕರ್ನಾಟಕದಲ್ಲಿ ಜೋಗತಿಯರು. ಬಸವಿಯರು ಎಂದು ಕರೆಯಲಾಗುತ್ತದೆ. ಶಾಸನಗಳಲ್ಲಿ ದೊರೆಯುವ ರಾಣಿವಾಸ. ಪೆಂಡವಾಸದ ಸೂಳೆಯರು. ಗಣಿಕೆಯರು ಮುಂತಾದ ಪದಗಳನ್ನು ಗಮನಿಸಿದಾಗ ಇವರು ರಾಜನೊಂದಿಗೆ ಸಂಬಂಧ ಹೊಂದಿದ್ದು ಉತ್ತಮ ಸ್ಥಿತಿವಂತರಾಗಿದ್ದುದು ಕಂಡುಬರುತ್ತದೆ. ಪ್ರಾಚೀನ ಹಿಂದೂ ಗ್ರಂಥಗಳಲ್ಲಿ ಏಳು ವಿಧದ ದೇವದಾಸಿಯರ ಉಲ್ಲೇಖಗಳು ಸಿಗುತ್ತವೆ.

೧. "ದತ್ತಾ : ತನ್ನನ್ನು ತಾನೆ ಯಾವುದಾದರೂ ದೇವಾಲಯೊಂದಕ್ಕೆ ಅರ್ಪಿಸಿಕೊಂಡವಳು.
೨. ವಿಕ್ರೀತಾ : ದೇವಾಲಯದ ಸೇವಾ ಕಾರ್ಯಗಳಿಗಾಗಿ ತನ್ನನ್ನೇ ಮಾರಿಕೊಂಡವಳು.
೩. ಭೃತ್ಯಾ : ತನ್ನ ಕುಟುಂಬದವರ ಪೋಷಣೆಯ ಸಲುವಾಗಿ ದೇವದಾಸಿಯಾದವಳು.
೪. ಭಕ್ತಾ : ಕೇವಲ ಭಕ್ತಿ ಭಾವಗಳಿಂದ ಪ್ರೇರಿತಳಾಗಿ ದೇವಾಲಯವನ್ನು ಪ್ರವೇಶಿಸಿದವಳು.
೫. ಹೃತಾ : ಅಪಹರಿಸಿಕೊಂಡು ತಂದ ಹೆಣ್ಣು, ದೇವಾಲಯಕ್ಕೆ ಉಡುಗೊರೆಯಾಗಿ ಬಂದವಳು.
೬. ಅಲಂಕಾರಾ : ರಾಜ ಅಥವಾ ಮಂತ್ರಿ ಯಾವ ಯುವತಿಯನ್ನು ಅಪೇಕ್ಷಿತ ಪರಂಪರೆಯಲ್ಲಿ ಸಂಪೂರ್ಣ ದೀಕ್ಷಿತೆಯೆಂದು ಭಾವಿಸುತ್ತಿದ್ದರೂ ಅಂಥ ಯುವತಿಯನ್ನು ಅಲಂಕರಿಸಿ ದೇವಾಲಯಕ್ಕೆ ಒಪ್ಪಿಸಲಾಗುತ್ತಿತ್ತು.
೭. ರುದ್ರಗಣಿಕಾ ಅಥವಾ ಗೋಪಿಕಾ : ನಿಯಮಿತ ವೃತಿ ಅಥವಾ ವೇತನ ಪಡೆದು ನಾಟ್ಯ ಗಾಯನ ಮೊದಲಾದ ಕೆಲಸಗಳನ್ನು ನಿರ್ವಹಿಸುವವಳು."[೨]

ಈ ವಿವರಗಳನ್ನು ಗಮಸಿಸಿದಾಗ ದೇವರನ್ನು ಜೀವಂತ ವ್ಯಕ್ತಿಯಂತೆ ಭಾವಿಸಿ ವೈಭವದಲ್ಲಿ ಬಾಳುವ ಒಬ್ಬ ವ್ಯಕ್ತಿಯ ಎಲ್ಲಾ ಭೋಗಗಳನ್ನು ದೇವರಿಗೆ ಅರ್ಪಿಸುವ ಸಂಪ್ರದಾಯ ದೇವದಾಸಿ ಪದ್ಧತಿಯ ಮೂಲವಾಗಿರಬೇಕು.

ಅಂತೆಯೇ ಸ್ತ್ರೀಯರ ದೇಹ ವ್ಯಾಪಾರವು ಪ್ರಾಚೀನ ಉದ್ಯಮಗಳಲ್ಲೊಂದಾಗಿದೆ ಎಂದು ಗುರುತಿಸಲಾಗಿದೆ. ದೇವದಾಸಿ ಪದ್ಧತಿಗೂ ವೇಶ್ಯಾವಾಟಿಕೆಗೂ ಮೊದಮೊದಲು ನೇರವಾದ ಸಂಬಂಧವಿರಲಿಕ್ಕಿಲ್ಲವಾದರೂ ನಂತರದ ದಿನಗಳಲ್ಲಿ ದೇವದಾಸಿ ಮಹಿಳೆಯರನ್ನು ಅಧಿಕೃತವಾಗಿ ಸೂಳೆಗಾರಿಕೆಗಾಗಿ ಬಳಸಿಕೊಂಡದ್ದು ಇದೆ. ದೇವಸ್ಥಾನಗಳಲ್ಲಿ ಅಂಗಭೋಗ-ರಂಗಭೋಗಗಳೆಂದು ಇದ್ದು, ದೇವರಿಗೆ ಅಲಂಕಾರ ಮಾಡುವುದು, ಪೂಜೆ-ಪುನಸ್ಕಾರ, ದೇವಾಲಯ ಸ್ವಚ್ಛಗೊಳಿಸುವುದು, ನೈವೇದ್ಯ ತಯಾರಿಸುವುದು ಇತ್ಯಾದಿ ಕೆಲಸಗಳಿಗಾಗಿ ಮಹಿಳೆಯರನ್ನು ನೇಮಿಸಿಕೊಂಡು ಅವರನ್ನು ಅಂಗಭೋಗದ ದಾಸಿಯರೆಂದು, ದೇವಾಲಯದ ಪ್ರಾಂಗಣದಲ್ಲಿ ನೃತ್ಯ. ಸಂಗೀತ ಇತ್ಯಾದಿ ಸಾಂಸ್ಕೃತಿಕ ಕಲಾಪಗಳಿಗಾಗಿ ಮೀಸಲಾದವರನ್ನು ರಂಗಭೋಗದ ದಾಸಿಯರೆಂದು ಗುರುತಿಸಲಾಗುತಿತ್ತು. ದೇವಸ್ಥಾನದ ಈ ದಾಸಿಯರು ಬರುಬರುತ್ತ ರಾಜನ ಪರಿವಾರಕ್ಕೆ ಸೇರಿಕೊಂಡು ರಾಜ ನರ್ತಕಿಯರಾಗಿ, ರಾಜ ಪರಿವಾರದ ವೇಶ್ಯೆಯರಾಗಿ ಪರಿವರ್ತಿತವಾದದ್ದು ಇತಿಹಾಸದ ಸಂಗತಿ. ನಿಜವಾಗಿಯೂ ಲಲಿತಕಲೆಗಳಾದ ಸಾಂಪ್ರದಾಯಕ ಶೈಲಿಯ ನೃತ್ಯ. ಸಂಗೀತಗಳಿಗೆ ದೇವದಾಸಿಯರೇ ಮೂಲ ಆಕರವಾಗಿದ್ದರು. ಮೈಸೂರಿನ ಒಡೆಯರ ಕಾಲದಲ್ಲಿ ರಾಜಾಶ್ರಯದ

ಮೂಲಕ ದೇವದಾಸಿಯರಿಂದ ನೃತ್ಯ ಶೈಲಿ ಅಭಿವೃದ್ಧಿ ಕಂಡಿತು. ದೇವದಾಸಿಯರಿಗೆ ನೃತ್ಯಾಭ್ಯಾಸ ಮಾಡಿಸುವವರನ್ನು ನಟುವರ್‌ಗಳೆಂದು ಕರೆಯುತ್ತಿದ್ದರು. ಅಲ್ಲಮಪ್ರಭು ನಟುವರ ಜಾತಿಯವನಾಗಿದ್ದುದನ್ನು ಇಲ್ಲಿ ಸ್ಮರಿಸಬಹುದು. ಮೈಸೂರು ಅರಸರ ಕಾಲಕ್ಕೆ ಸುಮಾರು ಇನ್ನೂರು ಮಂದಿ ನರ್ತಕಿಯರು ಇರುವುದು ತಿಳಿದು ಬರುತ್ತದೆ. ಅವರಲ್ಲಿ ಜಟ್ಟಿತಾಯಮ್ಮ ಪ್ರಮುಖರು. ಜಟ್ಟಿ ತಾಯಮ್ಮ ಇಪ್ಪತ್ತೆಂಟನೆಯ ವಯಸ್ಸಿನಲ್ಲಿಯೆ 'ನಾಟ್ಯ ಸರಸ್ವತಿ' ಬಿರುದನ್ನು ಪಡೆದರು. ಜಗದ್ವಿಖ್ಯಾತ ಸಂಗೀತಗಾರತಿ ಎಂ.ಎಸ್. ಸುಬ್ಬಲಕ್ಷ್ಮಿ ಕೂಡಾ ಈ ಪರಂಪರೆಯಲ್ಲಿಯೆ ಬಂದು ಅದ್ವಿತೀಯ ಸಾಧನೆ ಗೈದಿದ್ದಾರೆ. ಕ್ರಮೇಣ ರಂಗಕಲೆಯಲ್ಲಿ ಪಾಳೇಗಾರಿ ಶಕ್ತಿಗಳ ಕುತಂತ್ರದಿಂದ ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನೇ ಉಳಿಸಿಕೊಳ್ಳುವ ವ್ಯವಸ್ಥಿತ ಸಂಚು ನಡೆದು ಈ ಕಲೆಗಳು ಮೇಲ್ವರ್ಗದ ಜನರಿಗೆ ಮಾತ್ರ ರವಾನೆಯಾಗಿ ರಾಜನರ್ತಕಿಯರು ಉಚ್ಚಕುಲದವರು. ದೇವದಾಸಿಯರು ಕೆಳವರ್ಗದವರು ಎಂಬ ಭೇದವನ್ನು ಅವರಲ್ಲಿ ಹುಟ್ಟುಹಾಕಿದರು. ಇದರ ಪರಿಣಾಮವಾಗಿ ದಲಿತ ವರ್ಗದ ಜನರೇ ವಿಶೇಷವಾಗಿರುವ ದೇವದಾಸಿಯರನ್ನು ನೋಡುವ ದೃಷ್ಟಿಕೋನ ಬದಲಾಯಿತು. ಕಲಾವಿದರಿದ್ದರೂ ಇವರನ್ನು ಮುಖ್ಯವಾಹಿನಿಗೆ ತರದೇ ಲೈಂಗಿಕ ತೃಷೆಗೆ ಮಾತ್ರ ಇವರನ್ನು ಬಳಸಿಕೊಳ್ಳಲು ಆರಂಭಿಸಿದರು. ಸ್ವಾರ್ಥ ರಾಜಕಾರಣ ಇಲ್ಲಿ ಕೆಲಸ ಮಾಡಲು ಆರಂಭಿಸಿತು. ಮೇಲ್ವರ್ಗದವರು. ಭೂಮಾಲೀಕರು, ಪಾಳೇಗಾರ ಶಕ್ತಿಗಳು ವೈಚಾರಿಕ ಪ್ರಜ್ಞೆಗೆ ಕೊಡಲಿಯೇಟು ಹಾಕಿದರು. ದೇವರ ಹೆಸರಿನಲ್ಲಿ ಅನೇಕ ಮೂಢನಂಬಿಕೆಗಳು ಬೆಳೆಯುವಂತೆ ಮಾಡಿದರು. ಬಡವರ, ಅನಕ್ಷರಸ್ಥರ, ಕೆಳವರ್ಗದವರ ಮೌಢ್ಯ ಹಾಗೂ ಭಯವನ್ನು ಬಂಡವಾಳವಾಗಿ ಮಾಡಿಕೊಂಡು ಅವರು ದೇವದಾಸಿಗಳಾಗುವಂತೆ ಮಾಡಿದರು. ಸಹಜವಾಗಿ ಬರುವ ರೋಗ ರುಜಿನಗಳಿಗೆ, ಮಾನಸಿಕ ಹಾಗೂ ಶಾರೀರಿಕ ತೊಂದರೆಗಳಿಗೆ, ಕುಟುಂಬದಲ್ಲಿ ಏನಾದರೂ ಅವಘಡ ಸಂಭವಿಸಿದರೆ ಇಂತಹ ಹತ್ತು ಹಲವು ಕಾರಣಗಳಿಗೆ ದೇವರ ಹೆಸರಿನಲ್ಲಿ ಬಿಟ್ಟರೆ ತೊಂದರೆ ನಿವಾರಣೆಯಾಗುತ್ತದೆಂದು ನಂಬಿಸಿ ಇದಕ್ಕೆ ಪೂಜಾರಿಗಳನ್ನು ಮಧ್ಯವರ್ತಿಗಳಾಗಿ ಮಾಡಿಕೊಂಡರು. ಈ ಜಾಲದಲ್ಲಿ ಅರಿಯದೆ ಅಮಾಯಕ ಹೆಣ್ಣುಗಳನ್ನು ಬಲಿಬೀಳಿಸಿ ಸಂಪ್ರದಾಯ ಗಟ್ಟಿಗೊಳ್ಳುವಂತೆ ಮಾಡಿದರು.

ಅದರಲ್ಲೂ ಮಧ್ಯಯುಗದಲ್ಲಿ ಅಂದರೆ ಕ್ರಿ.ಶ. ೬ನೇ ಶತಮಾನದಿಂದ ೧೭ನೆಯ ಶತಮಾನದವರೆಗೆ ರಾಜರ ಆಳ್ವಿಕೆಯ ಕಾಲ. ಪ್ರಭುತ್ವ ಇಲ್ಲಿ ಮುಖ್ಯವಾಗಿದ್ದು ಜನ ಇವನ ಆಜ್ಞಾಧಾರಕರಾಗಿರುತ್ತಿದ್ದರು. ಈ ಯುಗದಲ್ಲಿ ಹೆಚ್ಚಿದ ಯುದ್ಧಗಳು, ಸಂಪತ್ತಿನ ಕ್ರೋಢೀಕರಣ ಹೆಚ್ಚಿ ಸಾಮಾನ್ಯ ಬದುಕು ದಯನೀಯವಾಗಿತ್ತು. ಗುಪ್ತರ ಕಾಲದಿಂದ ವಿಜಯನಗರ ಅರಸರ ಕಾಲದವರೆಗೂ ನಡೆದ ಘರ್ಷಣೆಗಳು ಜನರ ಬದುಕಿನೊಂದಿಗೆ ಅದರಲ್ಲೂ ವಿಶೇಷವಾಗಿ ಮಹಿಳಾ ಸಮುದಾಯದ ಮೇಲೆ ಕೆಟ್ಟ ಪರಿಣಾಮ ಬೀರಿತು. ಈ ವೇಳೆಗಾಗಲೇ ಸ್ಮೃತಿಕಾರರ ಸಾಮಾಜಿಕ ಕಾನೂನುಗಳು ರಚನೆಯಾಗಿ ಪಾಳೇಗಾರಿ ಶಕ್ತಿಗಳಿಗೆ ಕುಮ್ಮಕ್ಕು ನೀಡಿದವು. ಶಾಸ್ತ್ರಗಳು ಘೋಷಿಸಿದ ಕಟ್ಟಳೆಗಳು, ಕಾನೂನುಗಳು, ಕಟ್ಟುಪಾಡುಗಳು, ಮೂಢನಂಬಿಕೆಗಳು ಬೆಳೆಯುವಂತೆ

ಮಾಡಿ ಅವಳು ಬದುಕುವ ಸ್ವಾತಂತ್ರ್ಯವನ್ನೇ ಹರಣ ಮಾಡಿದವು. ಬದುಕಿನ ಎಲ್ಲಾ ಆಯ್ಕೆಗಳಿಂದ ವಂಚಿತಳಾದಳು. ಹೆಣ್ಣನ್ನು ಹೇಗೆ ನಡೆಸಿಕೊಳ್ಳಲಾಯಿತು ಎಂಬುದಕ್ಕೆ ರಾಹುಲ ಸಾಂಕೃತ್ಯಾಯನರು ಕೊಟ್ಟ ಹರ್ಷವರ್ಧನನ ಕಾಲದ ಚಿತ್ರಣ ನೋಡಿದಾಗ ಹೇಸಿಗೆ ಉಂಟಾಗುತ್ತದೆ. "ಪ್ರಥಮ ಅಧಿಕಾರಿಗಳಾದ ಕೆಲವೇ ಮಂದಿ ಸಾಮಂತರಲ್ಲಿ ಒಬ್ಬೊಬ್ಬರಲ್ಲಿಯೂ ನೂರಾರು ಮಂದಿ ತರುಣಿಯರ ತಂಡ ಸೇರಿ ಹೋಗಿತ್ತು. ಈ ಸಾಮಂತರು ರಾಜರು ತರುಣಿಯರನ್ನೆಲ್ಲ ಸೆಳೆದುಕೊಳ್ಳಲು ಉಪಾಯ ಹೂಡಿದರು. ತರುಣಿಯೊಬ್ಬಳನ್ನು ಮದುವೆಯಾಗಿ ಪತಿಯ ಬಳಿ ಸೇರುವ ಪ್ರಥಮ ರಾತ್ರಿಯ ಹಿಂದಿನಿರುಳಿನ ಅಧಿಕಾರಿಗಳು ಈ ಸಾಮಂತರು! ಕಡೆಗೆ ಈ ಕಾಮ ಪಿಪಾಸೆ ಧಾರ್ಮಿಕ ಕಾರ್ಯರೂಪದಲ್ಲಿ ಒಂದಾಯಿತು. ತಮ್ಮ ಪುತ್ರಿಯರನ್ನೋ, ಸೊಸೆಯಂದಿರನ್ನೋ, ಸೋದರಿಯರನ್ನೋ ಪಲ್ಲಕ್ಕಿಯೇರಿಸಿ ಅರಸರ ಅಂತಃಪುರಕ್ಕೋ, ಸಾಮಂತರ ರಾಣೀವಾಸಕ್ಕೋ ಒಂದು ದಿನಕ್ಕಾಗಿ ಕಳುಹಿಸಿಕೊಡುವ ಪದ್ಧತಿಯೇ ನಡೆದು ಬಂತು. ಯಾರಾದರೂ ಹೀಗೆ ಕಳುಹಿಸಿ ಕೊಡಲಿಲ್ಲವೆಂದರೆ ಅವರ ತಲೆ ಹಾರುವುದೇ ಸರಿ! ಒಡೆಯರಿಗೆ ಮೆಚ್ಚಿಗೆಯಾದರೆ ಅಂತಹ ತರುಣಿಯರನ್ನು ಅಲ್ಲೇ ಇರಿಸುವರು. ಇರಿಸಿಕೊಳ್ಳುವುದೆಂದರೆ ಅರಸಿಯರಾಗಿ ಅಲ್ಲ, ಪರಿಚಾರಿಕೆಯರಾಗಿ, ಅರಸಿಯರಾಗುವ ಭಾಗ್ಯ ಲಭಿಸುವುದು ಕೇವಲ ರಾಜ ಪುತ್ರಿಯರಿಗೋ, ಸಾಮಂತ ಕುಮಾರಿಯರಿಗೋ ಮಾತ್ರ. ಉಳಿದವರಿಗೆಲ್ಲ ದಾಸಿಯರ ಸ್ಥಾನ. ಅಂತಃಪುರದಲ್ಲಿ ಸೇರಿ ಹೋದ ಇಂತಹ ಸಾವಿರಾರು ಮಂದಿಯಲ್ಲಿ ಅಧಿಕಾಂಶ ತರುಣಿಯರಿಗೆ ಒಂದಿರುಳಿಗಿಂತ ಹೆಚ್ಚು ರಾಜನ ಅಥವಾ ಸಾಮಂತನ ಸಂಗ ದೊರೆತುದಿಲ್ಲ. ಈಗ ಹೇಳಿರಿ ಅವರ ತಾರುಣ್ಯ ಏನೆನ್ನಬಹುದು?"[೩] ಇಂತಹ ಇನ್ನೂ ಹಲವಾರು ವಿಷಯಗಳು ಗುಪ್ತರ ಕಾಲದಲ್ಲಿ ಸಿಗುತ್ತವೆ. ಗಾನ, ನೃತ್ಯ, ಕಾಮ, ಅನ್ನಪಾನದಂತೆ ಅಗತ್ಯಗಳಾಗಿದ್ದವು. ಹೆಣ್ಣು ಮಕ್ಕಳನ್ನು ಸೆಳೆಯಲು ಆಮಿಷಗಳನ್ನು ತೋರಿಸಲಾಗುತ್ತಿತ್ತು. ಅಂತಃಪುರದ ಕಷ್ಟಗಳನ್ನು ಮರೆಮಾಚಿ ಉಚ್ಚಸ್ಥಾನ ಸಿಗುವುದೆಂದು ನಂಬಿಸಿ ವಂಚಿಸಲಾಯಿತು. ಹೆಣ್ಣು ಭೋಗದ ವಸ್ತುವಾಗಿ, ಕೊಳುಕೊಡುವ ವಸ್ತುವಾಗಿ ಬೇರೆ ಅರಸರಿಗೆ ಕೊಡುವ ಪದ್ಧತಿಯಿತ್ತು. ಯುದ್ಧ ಸಂದರ್ಭಗಳಲ್ಲಿ ಸೈನಿಕರ ಕಾಮ ತೃಷೆ ತೀರಿಸಲು ದೇವದಾಸಿಯರನ್ನು ಬಳಸಿಕೊಳ್ಳುತ್ತಿದ್ದರು.

ಕ್ರಮೇಣ ರಾಜಪ್ರಭುತ್ವ ವ್ಯವಸ್ಥೆ ಮರೆಯಾಗುತ್ತಿದ್ದಂತೆ ಇವರನ್ನು ಧರ್ಮ ಹಾಗೂ ದೇವರ ಹೆಸರಿನಲ್ಲಿ ಬಳಸಿಕೊಳ್ಳುವ ಕ್ರಿಯೆ ಆರಂಭವಾಯಿತು. ರಾಜಪ್ರಭುತ್ವಕ್ಕೂ ದೇವಾಲಯ ಸಂಸ್ಕೃತಿಗೂ ಅನ್ಯೋನ್ಯ ಸಂಬಂಧವಿತ್ತು. ಹೀಗಾಗಿ ಧಾರ್ಮಿಕ ಆವರಣದಲ್ಲಿಯೇ ಹೆಣ್ಣನ್ನು ಲೈಂಗಿಕ ಶೋಷಣೆಗೆ ಒಳಗು ಮಾಡುವ ದೇವದಾಸಿ ಪದ್ಧತಿ ಇನ್ನಷ್ಟು ಗಟ್ಟಿಗೊಂಡಿತು. ದೇವರ ಹೆಸರಲ್ಲಿ ಏನೆಲ್ಲಾ ನಡೆಯಬಹುದು ಎಂಬುದಕ್ಕೆ ದೇವದಾಸಿಯಂಥ ಕ್ರೂರ ಪದ್ಧತಿಯೇ ಸಾಕ್ಷಿಯಾಗಿದೆ. ಇದನ್ನು ಯಾರೂ ಪ್ರಶ್ನಿಸದಂತೆ ದೇವರ ಹೆಸರಿನ ಬೇಲಿ ಕಟ್ಟಿ ಅದನ್ನು ಮುರಿಯದಂತೆ ಮಾಡಿದರು. ಭಾರತದಂಥ ದೇಶದಲ್ಲಿ ದೇವರ ಹೆಸರಿನಲ್ಲಿ ಏನೆಲ್ಲಾ ನಡೆಯಬಹುದು.

ಯಾಕೆಂದರೆ ಧರ್ಮದ ಹೆಸರಲ್ಲಿ ಜಾತಿಯ, ಹೆಸರಲ್ಲಿ, ಉಳ್ಳವರ ಹೆಸರಲ್ಲಿ ಜನರ ಮೇಲೆ ನಿಯಂತ್ರಣ ಹೇರುವ ಅನೇಕ ಹುನ್ನಾರಗಳು ಆಧುನಿಕ ಯುಗದಲ್ಲಿಯೂ ಹುಟ್ಟಿಕೊಂಡವು. ಹೀಗಾಗಿ ದೇವದಾಸಿ ಸಮಸ್ಯೆ ಧಾರ್ಮಿಕ ಆವರಣದಲ್ಲಿಯೇ ಸುತ್ತುವರೆದು ಜನ ಪ್ರಶ್ನಿಸದಂತೆ ಮಾಡಿತು. ದೇವದಾಸಿಯರೆಂದರೆ ದೇವಸ್ಥಾನಗಳಿಗೆ ತಮ್ಮನ್ನು ಅರ್ಪಿಸಿಕೊಂಡವರು. ದೇವರೊಂದಿಗೆ ಮದುವೆಯಾದವರು. ನಮ್ಮ ಶಾಸ್ತ್ರಗಳನ್ನು ಒಪ್ಪುವುದಾದರೆ ಮಹಿಳೆ ಒಮ್ಮೆ ಮದುವೆಯಾದರೆ ಮತ್ತೊಮ್ಮೆ ಮದುವೆಯಾಗುವಂತಿಲ್ಲ. ಯಾವುದಕ್ಕೂ ಶಾಸ್ತ್ರದ ನೆಪವೊಡ್ಡಿ ಬದುಕು ನಡೆಸುವ ನಾವು ಇಲ್ಲಿ ದೇವರ ಹೆಣ್ಣನ್ನು ಯಾರೋ ಭೋಗಿಸುವಾಗ ಯಾವ ಶಾಸ್ತ್ರಗಳೂ ಅಡ್ಡ ಬರಲಿಲ್ಲವೇ? ದೇವರೊಂದಿಗೆ ಮದುವೆಯಾದ ಇವಳನ್ನು ಪೂಜಾರಿಯೋ, ಭೂಮಾಲೀಕನೋ, ಶ್ರೀಮಂತನೋ, ಯಾರೊಬ್ಬರು ಅವಳಿಂದ ಲೈಂಗಿಕ ತೃಪ್ತಿಯನ್ನು ಪಡೆದುಕೊಳ್ಳಬಹುದು. ಅವಳು ಜೀವಮಾನ ಪೂರ್ತಿ ದೇವಸ್ಥಾನಗಳಲ್ಲಿ ದೇವರಿಗೆ ಆನಂದ ಉಂಟಾಗುವಂತೆ ನರ್ತನ ಮಾಡುತ್ತಾ, ಹಾಡುತ್ತಾ ಜೀವನ ನವೆಸುವ ಇವರನ್ನು ಭೋಗಿಸುವವರು ಮಾತ್ರ ಭೂಲೋಕದ ದೇವತೆಗಳು (ಮಾನವರು).

ಹೀಗೆ ಪ್ರಭುತ್ವದೊಂದಿಗೆ ಕೈಜೋಡಿಸಿದ ಪಾಳೇಗಾರಿ ಶಕ್ತಿಗಳು, ಪುರೋಹಿತ ಶಾಹಿಗಳು, ಭೂಮಾಲೀಕರು, ಬಂಡವಾಳಗಾರರು, ಅರ್ಚಕರು, ಮೇಲ್ವರ್ಗದವರು ಇವರೆಲ್ಲರ ಸಂಚಿನಿಂದ ದೇವದಾಸಿ ಪದ್ಧತಿ ಇನ್ನೂ ಭದ್ರವಾಗಿ ನೆಲೆಯೂರುವಂತೆ ಮಾಡಿದ್ದು ಕಂಡು ಬರುತ್ತದೆ. ಭೂಮಿಯಲ್ಲಿ ಕೆಲಸ ಮಾಡುವವರು ಕೃಷಿ ಕೂಲಿಕಾರ್ಮಿಕರು. ಭೂಮಿಯ ಒಡೆತನ ಯಜಮಾನನದು. ದುಡಿದವನಿಗೆ ಭೂಮಿ ಹಕ್ಕು ಸಿಗಬೇಕಾದುದು ನ್ಯಾಯಸಮ್ಮತವಾದುದು. ಆದರೆ ಬಡತನದಿಂದ ಬಂದ ದಲಿತರಿಗೆ ಕರ್ಮದ ಫಲ ಎಂದೆಲ್ಲಾ ಹೇಳಿ ಭೂಮಿ ಕೇಳದಂತೆ ಮಾಡಿದರು. ಮನೆಯ ಉದ್ಧಾರಕ್ಕಾಗಿ ಎಂದು ಹೇಳಿ ಅವರ ಮನೆಯ ಹೆಂಗಸರನ್ನೇ ದೇವದಾಸಿಯರನ್ನಾಗಿ ಮಾಡಿದರು. ಜನರ ಅಜ್ಞಾನ, ಮೌಢ್ಯ, ಅನಕ್ಷರತೆ, ಭಯ ಇವನ್ನು ಬಳಸಿಕೊಂಡು ಒಂದೇ ಕಲ್ಲಿಗೆ ಎರಡು ಹಕ್ಕಿಗಳನ್ನು ಹೊಡೆದರು. ಒಂದು ಭೂಮಿ ಕೇಳದಂತೆ ಮಾಡಿದುದು ಇನ್ನೊಂದು ಧರ್ಮದ ಚೌಕಟ್ಟಿನಿಂದ ಹೊರಬರದಂತೆ ಸಂಪ್ರದಾಯದ ಸರಪಳಿಯಲ್ಲಿ ಅವರನ್ನು ಬಿಗಿದದ್ದು. ಹೀಗೆ ಚಕಾರವೆತ್ತದಂತೆ ಮೌನವಾಗಿ ಅವಳು ದೇವರ ಹೆಸರಲ್ಲಿ ದೇವದಾಸಿಯಾಗುವಂತೆ ಒಪ್ಪಿಸಿದರು. ಇದೊಂದು ಸಹಜಕ್ರಿಯೆ ಎಂಬಂತೆ ಈ ಪದ್ಧತಿಗೆ ಬಲಿಯಾದಳು. ಇಂದಿಗೂ ತನ್ನ ಅಸ್ತಿತ್ವದ ಹುಡುಕಾಟಕ್ಕಾಗಿ ಅವಳು ಪ್ರಯತ್ನಿಸದಂತೆ ಬೋಧನೆ ಮಾಡಿ ಮೌಲ್ಯಗಳ ಹೆಸರಲ್ಲಿ ಸಮಾಜ ಒಪ್ಪುವಂತೆ ಮಾಡಿದರು.

### ದೇವದಾಸಿ ಪದ್ಧತಿ : ಸಂಪ್ರದಾಯ-ಆಚರಣೆಗಳು

'ದೇವದಾಸಿ' ಪದ್ಧತಿ ಹೆಣ್ಣನ್ನು ಧಾರ್ಮಿಕವಾಗಿ ಶೋಷಣೆ ಮಾಡುವ ಒಂದು ಸಂಪ್ರದಾಯ. ಹೆಣ್ಣಿನ ಲೈಂಗಿಕ ಸುಲಿಗೆಗೆ ದೇವರು-ಧರ್ಮ ಒಟ್ಟಾಗಿ ಕೈಜೋಡಿಸಿ ಅವಳ ಅಸ್ತಿತ್ವವನ್ನೇ ನಾಶ

ಮಾಡುವ ಪದ್ಧತಿ ಇದಾಗಿದೆ. ದೇವದಾಸಿಯರು ಅಂದರೆ ಗಂಡು ದೇವರನ್ನೇ ಮದುವೆಯಾದವರು. ಎಲ್ಲಮ್ಮನ ದೇವದಾಸಿಯಾಗುವವಳು ಜಮದಗ್ನಿಗೆ ದೇವದಾಸಿಯಾಗಬೇಕು ಮತ್ತು ಹೀಗೆ ದೇವದಾಸಿಯರಾದ ಇವರೆಲ್ಲರೂ ಎಲ್ಲಮ್ಮ ರೂಪದ ಜೋಗತಿಯರು ಎಂಬ ನಂಬಿಕೆ ಇದೆ. ಒಬ್ಬ ದೇವದಾಸಿ ಯೌವ್ವನವನ್ನು ಕಳೆದು ವೃದ್ಧಾಪ್ಯಕ್ಕೆ ಬಂದಾಗ ಪಡೆದ ಹೆಸರು ಜೋಗತಿ. ಜೋಗತಿಗೂ ದೇವದಾಸಿಯರಿಗೂ ಇರುವ ಅಂತರವೆಂದರೆ ಜೋಗತಿಯರು ರೇಣುಕಾ ಎಲ್ಲಮ್ಮನ ಪಂಥದ ಪ್ರಚಾರಕರು.

ರೇಣುಕಾ ಪರಂಪರೆಯ ಇನ್ನೊಂದು ಪದ್ಧತಿಯಲ್ಲಿ ಬಸವಿ ಪದ್ಧತಿಯೂ ಒಂದಾಗಿದೆ. ಇವರನ್ನೂ ದೇವದಾಸಿಯರಿಗೆ ಹೋಲಿಸಬಹುದಾದರೂ ಈ ಎರಡೂ ಸಂಪ್ರದಾಯಗಳು ಬೇರೆ ಬೇರೆ ಬಗೆಯ ಉದ್ದೇಶದ ದೇವದಾಸಿ ಪದ್ಧತಿಯಾಗಿದ್ದು 'ಬಸವಿ'ಯರು ಗುಡಿಯ ಚೌಕಟ್ಟಿಗೆ ಮಾತ್ರ ಸೀಮಿತವಾಗಿದ್ದು ಇವರು ಕನ್ಯೆಯರಾಗಿಯೇ ಉಳಿಯಬೇಕೆಂಬ ನಿಯಮವಿತ್ತು. 'ಮನೆ ಬಸವಿ' ಎಂಬ ಇನ್ನೊಂದು ಪದ್ಧತಿಯೂ ಚಾಲ್ತಿಯಲ್ಲಿತ್ತು. ಅದೇನೆಂದರೆ ಗಂಡು ಮಕ್ಕಳಿಲ್ಲದ ಕುಟುಂಬವೊಂದು ತನ್ನ ವಂಶ ಬೆಳೆಯಲು ತಮ್ಮಲ್ಲಿ ದತ್ತು ತೆಗೆದುಕೊಳ್ಳುವ ಪದ್ಧತಿ ಇಲ್ಲದಾಗ, ಒಬ್ಬ ಮಗಳನ್ನು ಮದುವೆ ಮಾಡಿಕೊಡದೆ ಉಳಿಸಿಕೊಂಡು 'ಬಸವಿ' ಅಥವಾ 'ಹೆಂಗೂಳಿ' ಮಾಡಿ ತನಗೆ ಬೇಕಾದವರೊಡನೆ ಅಥವಾ ಹಿರಿಯರು ನಿರ್ಧರಿಸಿದವರೊಡನೆ ದೇಹ ಸಂಬಂಧ ಬೆಳೆಸಿ ಗಂಡು ಸಂತಾನ ಪಡೆದು ಕುಟುಂಬಕ್ಕೆ ನೀಡುವುದು. ಇಂತಹ ಬಸವಿಯರನ್ನು ಬಳಗದ ಬಸವಿ, ಜಾತಿ ಬಸವಿ, ಊರ ಬಸವಿ ಎಂದು ಕರೆಯುತ್ತಾರೆ. ಎಲ್ಲಮ್ಮನನ್ನು ವಿವಿಧ ರೂಪಗಳಲ್ಲಿ ಕೊಡದ ಮೇಲೆ, ಬುಟ್ಟಿಯ ಮೇಲೆ ಹೊತ್ತುಕೊಂಡು ಮನೆ ಮನೆಗೆ ಅಡ್ಡಾಡಿ ದೇವಿಯ ಮಹಿಮೆಯನ್ನು ಹಾಡಿ ಹೊಗಳಿ ಜೋಗಾಡುವುದು. ಇವರನ್ನು ಎಲ್ಲಮ್ಮನ ಸಂಪ್ರದಾಯದಂತೆ 'ಜೋಗತಿ ಮುತ್ತು' ಕಟ್ಟಿಸಿಕೊಂಡವರು ಎನ್ನುತ್ತಾರೆ. ಜೋಗಿತಿ ಸಂಪ್ರದಾಯ ಹೆಣ್ಣಾಗಲಿ-ಗಂಡಾಗಲಿ ಎಲ್ಲಮ್ಮನ ಸೇವೆಗೆ ತಮ್ಮನ್ನು ಸಮರ್ಪಿಸಿಕೊಳ್ಳಬಹುದು. ಹೆಣ್ಣನ್ನು ಜೋಗಿತಿ ಎಂದು ಕರೆದರೆ ಗಂಡನ್ನು ಜೋಗಪ್ಪ ಎಂದು ಕರೆಯುತ್ತಾರೆ. ಗಂಡಸಿಗೆ ಹೆಣ್ಣುಡುಗೆಯನ್ನು ಧರಿಸಿ ನಪುಂಸಕರಾಗಿ ಮಾಡುವ ಕ್ರಿಯೆ ಇದಾಗಿದೆ.

ಕೆಲವರು ಮದುವೆಯಾದ ಮೇಲೂ ಜೋಗತಿಯರಾಗಿರುವ ಉದಾಹರಣೆಗಳೂ ಉಂಟು. ಏನಾದರೂ ಜಡ್ಡು ಆಪತ್ತು ಒದಗಿದಾಗ, ಸಂಸಾರದಲ್ಲಿ ನಿರಾಸಕ್ತಿ ಹುಟ್ಟಿ ಮಲಗಿದರೆ ಎಲ್ಲಮ್ಮನ ಕಾಡಾಟ ತಮ್ಮ ಮೇಲಾಗಿದೆ ಎಂದು ನಂಬಿ ನೆಲಕಚ್ಚಿ ಮಲಗಿದವರನ್ನು ಜೋಗಿತಿ ಮಾಡುವುದಾಗಿ ಹರಕೆ ಹೊರುತ್ತಾರೆ. ಇಲ್ಲಿ ಗಂಡು-ಹೆಣ್ಣು ಭೇದವಿಲ್ಲ. ಕ್ರಮೇಣ ರೋಗದಿಂದ ಚೇತರಿಸಿಕೊಂಡರೆ ಗಂಡ-ಹೆಂಡತಿ ಸಂಬಂಧ ದೂರವಾಗಿ ಜೋಗತಿ ಅಥವಾ ಜೋಗಪ್ಪಗಳಾಗುತ್ತಾರೆ. ಇದಕ್ಕೆಲ್ಲ ಆ ಎಲ್ಲಮ್ಮನ ಪ್ರಭಾವವೇ ಕಾರಣವೆಂದು ಇಂದಿಗೂ ನಂಬುತ್ತಾರೆ. ಎಲ್ಲಮ್ಮಳ ಸಿಟ್ಟು, ಆಕ್ರೋಶ, ಎದುರು ಬಿದ್ದವರನ್ನು ಬಗ್ಗು ಬಡಿಯುವ, ಮಾತಿನಂತೆ ನಡೆದುಕೊಳ್ಳದೆ ಇರುವವರನ್ನು ಪೀಡಿಸುತ್ತಾಳೆ ಎಂಬ ನಂಬಿಕೆಯಿದೆ. ಹೀಗಾಗಿ ಇವಳ ಮಹಿಮೆಯನ್ನು ಸಾರುತ್ತಾ ಹೋಗುತ್ತಾರೆ. ಕೆಲವರು ಕೂದಲು ಜಿಗುಟಾಗಿ, ಅಂಟಂಟಾಗಿ

ಮೆತ್ತಲು ಸುರುಮಾಡಿದಾಗ ಎಲ್ಲಮ್ಮನ ಮೂರ್ತಿ ನೋಡಿದರೆ ಮೈ ತುಂಬಿ ಬಂದಾಗ ಅವರು ಎಲ್ಲಮ್ಮನ ನನ್ನ ಮೇಲೆ ಆಹ್ವಾನಿಸಿದ್ದಾಳೆ ಎಂದು ಜೋಗತಿ ಪಟ್ಟ, ಅಥವಾ ಜೋಗತಿ ಮುತ್ತು ಕಟ್ಟಿಕೊಂಡವರುಂಟು. ಇವರಲ್ಲಿ ಕೊಡದ ಜೋಗತಿ, ಹಡಲಕದ ಜೋಗತಿ, ಜಗಹೊತ್ತ ಜೋಗತಿ ಪಡಲಕದ ಜೋಗತಿ, ಚೌಡಕಿ ಜೋಗತಿ, ಎಣ್ಣೆಜೋಗಿ, ಜಡೆ ಜೋಗಿ, ಜೋಳಿಗೆ ಜೋಗಿ ಎಂದು ಮುಂತಾಗಿ ಕರೆಸಿಕೊಳ್ಳುವ ಇವರು ಎಲ್ಲಮ್ಮನ ಹಾಡುಗಳನ್ನು ಹಾಡುತ್ತಾ ಚೌಡಿಕಿ ಬಾರಿಸುತ್ತಾ ಜನರನ್ನು ಧಾರ್ಮಿಕವಾಗಿ ಜಾಗೃತಗೊಳಿಸಿ ಎಲ್ಲಮ್ಮನಿಗೆ ನಡೆದುಕೊಂಡು ಹರಕೆ ಹೊರುವಂತೆ ಪ್ರೇರೇಪಿಸುವರು. ಕ್ಷೇತ್ರಕ್ಕೆ ಬರುವಂತೆ ಮಾಡಿ ಭಕ್ತರನ್ನು ಕರೆತರುವುದು ಇವರ ಮುಖ್ಯ ಕಾಯಕ.

ಒಟ್ಟಾರೆಯಾಗಿ ಎಲ್ಲಮ್ಮನ ಜೋಗತಿ ಜೋಗಪ್ಪರಾಗಲು ಮಾನವನ ಮಾನಸಿಕ ದೌರ್ಬಲ್ಯ, ಸಪುಂಸಕತೆ, ಕುಟುಂಬ ಜೀವನದ ಭ್ರಮನಿರಸನ ಹರಕೆ, ಸುಖ ಶಾಂತಿಗಳ ಹಂಬಲ, ಮೂಢನಂಬಿಕೆ, ಮನೆತನದ ರೀತಿ ರಿವಾಜುಗಳು, ಬಡತನ ದಾರಿದ್ರ್ಯ ಇವೆಲ್ಲವೂ ಇಲ್ಲಿ ಕೆಲಸ ಮಾಡಿವೆ.

ಇನ್ನೊಂದು ಬಗೆಯ ಪಟ್ಟ ಅಥವಾ ಮುತ್ತು ಕಟ್ಟಿಕೊಳ್ಳುವ ಗುಂಪುಗಳೆಂದರೆ ಗರತಿ ಪಟ್ಟ (ಮತ್ತು) ಅಥವಾ ದೇವದಾಸಿ ಪಟ್ಟ, ಸವದತ್ತಿ ಎಲ್ಲಮ್ಮನ ಭಕ್ತರು ಮುತ್ತು ಕಟ್ಟಿಸಿ ಕೊಳ್ಳುವುದು ಎಂದರೆ ಕಲಬುರ್ಗಿಯ ಮಾಪುರ ತಾಯಿ ಭಕ್ತರು ಅಂದರೆ ದೇವಿ ಆರಾಧಕರು ಪಟ್ಟಾ ಹಾಕಿಕೊಳ್ಳುವುದು ಎನ್ನುತ್ತಾರೆ. ಸಾಂಸಾರಿಕ ಜೀವನ ನಡೆಸುತ್ತಲೇ ದೇವಿಯ ಆರಾಧಕರಾಗಿರುವ ಯಾರೂ 'ಗರತಿ ಪಟ್ಟ' ಹಾಕಿಕೊಳ್ಳಬಹುದು. ಇದರ ಕುರುಹಾಗಿ ತಮ್ಮ ಕೊರಳಲ್ಲಿ ಗರತಿ ಮುತ್ತನ್ನು ಧರಿಸುತ್ತಾರೆ. ಯಾವುದೇ ಮುತ್ತು ಅಥವಾ ಪಟ್ಟಾ ಹಾಕಿಕೊಂಡರೂ ನಿಯಮದಂತೆ ಆಯಾ ಆರಾಧನಾ ಕೇಂದ್ರಗಳಲ್ಲಿ ಧಾರ್ಮಿಕ ಆಚರಣೆಗಳೊಂದಿಗೆ ಪಟ್ಟಾ ಹಾಕಿಕೊಳ್ಳಬೇಕು. ಮಂಗಳವಾರ, ಶುಕ್ರವಾರ ಪರಡಿ ಹಿಡಿದು ಐದು ಮನೆಗಾದರೂ ಹೋಗಿ ಜೋಗ ಬೇಡಿ ಉಣಬೇಕು ಎಂಬ ನಿಯಮ ಇಂದಿಗೂ ಪಾಲಿಸುತ್ತಾರೆ.

## ದೇವದಾಸಿ ಬಿಡುವ ಕೆಲವು ನಿಯಮಗಳು

ಧಾರ್ಮಿಕ ಪರಂಪರೆಯಲ್ಲಿ ಹರಕೆ ತೀರಿಸುವಲ್ಲಿಯೂ ಅನೇಕ ವಿಧಾನಗಳನ್ನು ಅನುಸರಿಸಿ ಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಮನೆತನಕ್ಕೆ ಸಾಲಾಗಿ ಕಷ್ಟಗಳು ಒದಗಿ ಬಂದರೆ, ಗಂಡು ಸಂತಾನ ಇಲ್ಲದಿದ್ದರೆ, ರೋಗ ಪರಿಹಾರವಾಗದೆ ಇದ್ದರೆ, ಬೆಳೆ ಸರಿಯಾಗಿ ಬರದೆ ಇದ್ದರೆ ಇಂಥ ಹತ್ತು ಹಲವು ಕಾರಣಗಳಿಗಾಗಿ ದೇವದಾಸಿ ಬಿಡುವ ಹರಕೆಗಳು ಚಾಲ್ತಿಯಲ್ಲಿವೆ. ತನ್ನದಲ್ಲದ ತಪ್ಪಿಗೆ ಒಂದು ಹೆಣ್ಣು ಬದುಕಿನುದ್ದಕ್ಕೂ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು, ಒಬ್ಬನಿಗೆ ಅಥವಾ ಅನೇಕರಿಗೆ ತನ್ನ ಶರೀರವನ್ನು ಒಪ್ಪಿಸುತ್ತಾ ಯೌವ್ವನ ಕಳೆದು ಮುಪ್ಪು ಆವರಿಸಿದಾಗ ಜೋಗತಿಯಾಗಿ ಅಡ್ಡಾಡಿ ಕೊನೆಗೆ ಜೀವ ಕಳೆದುಕೊಳ್ಳುವವರೆಗೆ ನಿರಾಶ್ರಿತಳಾಗಿ ಬದುಕುವ ದೇವದಾಸಿ ಮಹಿಳೆಯ ದಾರುಣ ಚಿತ್ರ ಕಣ್ಣೀರು ತರಿಸುತ್ತದೆ. ಅದರಲ್ಲೂ ವಿಧಿ ವತ್ತಾಗಿ ನಡೆಯುವ ಈ ಕ್ರಿಯೆಯಲ್ಲಿ ಅವಳನ್ನು ಮಾನಸಿಕವಾಗಿ ಭದ್ರ ಮಾಡುವ ಅನೇಕ

ಹುನ್ನಾರಗಳು ಇಲ್ಲಿ ಕಂಡುಬರುತ್ತವೆ. ಬದುಕಿನುದ್ದಕ್ಕೂ ನಡೆಯುವ ಅದರ ಕೆಲವು ವಿವರಗಳು ಈ ರೀತಿಯಲ್ಲಿವೆ.

ದೇವದಾಸಿ ಬಿಡುವ ಹರಕೆ ಬಹುದೊಡ್ಡ ವಿಧಿ ಕಾರ್ಯವಾಗಿದೆ. ಹುಟ್ಟುವ ಮೊದಲೇ ಅಥವಾ ಹುಟ್ಟಿದ ನಂತರ ಹರಕೆ ಹೊತ್ತು ತೀರಿಸುವವರಿದ್ದಾರೆ. ಬಹಳ ವಿಚಿತ್ರವೆಂದರೆ ೫ ರಿಂದ ೯ ವರ್ಷದ ಒಳಗಾಗಿ ದೇವದಾಸಿ ಬಿಡುವ ಸಮಾರಂಭ ನಡೆಯುತ್ತದೆ. ಕೆಲವೊಬ್ಬರು ತಿಂಗಳ ಕೂಸಿಗೂ ಭಂಡಾರ ಹಾಕಿ ಬಿಡುತ್ತಾರೆ. ಜೋಗತಿಯ ಸಮ್ಮುಖದಲ್ಲಿ ಆಕೆಗೆ ಹಣೆಗೆ ಅರಿಶಿಣ ಹಚ್ಚಿ, ಜಡೆಗೆ ಪೂಜೆ ಮಾಡಿ, ಹಸಿರು ಬಳೆ ತೊಡಿಸಿ, ಕೊರಳಲ್ಲಿ ಹಾಲು ಮುತ್ತುಗಳ ತಾಳಿ ಕಟ್ಟಿ, ಕಾಣಿಕೆ ನೀಡುವರು. ಮುತ್ತು ಕಟ್ಟುವುದು ಅಥವಾ ಪಟ್ಟಾ ಹಾಕಿಕೊಳ್ಳುವುದು ಎಂದು ಕರೆಸಿಕೊಳ್ಳುವ ಈ ಸಮಾರಂಭವನ್ನು ಪವಿತ್ರ ಕಾರ್ಯ ಎಂದು ನಂಬಿದ್ದಾರೆ. ಮಂಗಳವಾರ ಅಥವಾ ಶುಕ್ರವಾರದಂದು ಈ ಸಮಾರಂಭ ಏರ್ಪಡಿಸುತ್ತಾರೆ.

ಆದಿನ ಹುಡುಗಿಯ ತಾಯಿ-ತಂದೆಯರು, ಸಂಬಂಧಿಕರು, ಹಿರಿಯ ದೇವದಾಸಿಯರು ಒತ್ತಟ್ಟಿಗೆ ಸೇರುತ್ತಾರೆ. ತಮ್ಮ ಮಗಳನ್ನು ದೇವರಿಗೆ ಬಿಡಲು ಅಪೇಕ್ಷಿಸಿದವರು ಮದುವೆ ಮಾಡುವುದಕ್ಕೆ ಮಾಡಿಕೊಳ್ಳುವ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಒಂಬತ್ತು ಬಗೆಯ ಬಣ್ಣದ ಕುಂಕುಮ ಮತ್ತು ಅರಿಶಿಣ ಪುಡಿಗಳು, ಐದು ಚಿಪ್ಪು ಬಾಳೆಹಣ್ಣು, ಇಪ್ಪತ್ತೈದು ವೀಳ್ಯದೆಲೆ, ಗಂಧದ ಕಡ್ಡಿ, ಇಪ್ಪತ್ತೈದು ಅಡಿಕೆ, ವಿಭೂತಿ, ಶ್ರೀಗಂಧ, ನಾಣ್ಯಗಳು, ಕಳಸ, ನಾಲ್ಕು ಅಚ್ಚು ಬೆಲ್ಲ ಮತ್ತು ಮುತ್ತು ಕಟ್ಟಿದ ತಾಳಿ ಇವಿಷ್ಟು ವಸ್ತುಗಳನ್ನು ಹೊಂದಿಸುತ್ತಾರೆ. ದೇವದಾಸಿ ಬಿಡುವ ಕನ್ನೆಯನ್ನು ಕ್ಷೇತ್ರಕ್ಕೆ ಕರೆತಂದು ಸ್ನಾನ ಮಾಡಿಸುತ್ತಾರೆ. ದೇವರ ಎದುರು ನಾಲ್ಕು ತಂಬಿಗೆಗಳಿಂದ ಕಳಸ ಮಾಡಿ ಕಲಾತ್ಮಕ ರಂಗೋಲಿ ಬಿಡಿಸಿ ಅಲಂಕರಿಸಿದ ಕಳಸಗಳ ಮಧ್ಯೆ ಇವಳನ್ನು ಕೂಡಿಸುತ್ತಾರೆ. ಪ್ರತಿಯೊಂದು ಕಳಸವನ್ನೂ ಎಲೆ, ಅಡಿಕೆ, ಬಾಳೆಹಣ್ಣು, ಬೆಲ್ಲದ ಅಚ್ಚುಗಳಿಂದ ಅಲಂಕರಿಸಿರುತ್ತಾರೆ. ಸಾಂಕೇತಿಕವಾಗಿ ಐದನೆಯ ಕುಂಭವಾಗಿ ಇವಳನ್ನು ಪರಿಗಣಿಸುತ್ತಾರೆ. ನಂತರ ಹೊಸ ನೂಲನ್ನು ಒಂದು ಕುಂಭದಿಂದ ಪ್ರಾರಂಭಿಸಿ ಒಂದು ವಿಶಿಷ್ಟ ರೀತಿಯಲ್ಲಿ ಎಲ್ಲಾ ಕುಂಭಗಳಿಗೂ ಅವುಗಳ ಕಂಠಕ್ಕೆ ಸುತ್ತುತ್ತಾ ಹೋಗುತ್ತಾರೆ. ಹೀಗೆ ಪ್ರತಿಯೊಂದು ಸುತ್ತಿಗೂ ಅದರ ತುದಿಯನ್ನು ದೇವರ ವಿಗ್ರಹದ ಕೈಗೆ ನೀಡುತ್ತಾರೆ. ಇದು ಸಾಂಕೇತಿಕವಾಗಿ ದೇವರು ತನಗೆ ಹರಕೆಯಾಗಿ ನೀಡುವ ವ್ಯಕ್ತಿಯಲ್ಲಿಯ ಮಾನವತ್ವವನ್ನು ಹೀರಿ ದೈವತ್ವದ ವಸ್ತುವಾಗಿ ಪರಿವರ್ತಿಸುತ್ತಾನೆ ಎಂಬ ನಂಬಿಕೆ ಅವರಲ್ಲಿದೆ. ಹೀಗೆ ಕ್ರಮವಾಗಿ ದೇವದಾಸಿಯಾಗುವವಳು ಸೇರಿದಂತೆ ಪ್ರತಿಯೊಂದು ಕುಂಭವನ್ನು ಪೂಜಾರಿಯೊಂದಿಗೆ ಪೂಜೆ ಮಾಡಿ ನೈವೇದ್ಯ ಮಾಡಿ ನಂತರ ದೇವರ ಮುಂದೆ ಆರತಕ್ಷತೆ ಅರಿಶಿಣ, ಕುಂಕುಮಗಳ ನಡುವೆ ತಾಳಿಯನ್ನು ತಟ್ಟೆಯಲ್ಲಿಟ್ಟ ಆಕೆ ದೇವರೊಂದಿಗೆ ಮದುವೆಯಾದುದರ ಸಂಕೇತವಾಗಿ ಪೂಜಾರಿಯು ದೇವರ ಹೆಸರಿನಲ್ಲಿ ತಾಳಿಯನ್ನು ಆಕೆಯ ಕೊರಳಿಗೆ ಕಟ್ಟುವನು. ಹಿರಿಯ ದೇವದಾಸಿಯರು ಚೌಡಿಕೆ, ತಂಬೂರಿ, ಜಾಗಟೆಗಳ ಹಿನ್ನೆಲೆಯ ಸಂಗೀತದೊಂದಿಗೆ ಎಲ್ಲಮ್ಮನನ್ನು ಪ್ರಶಂಸಿಸುವ ಹಾಡುಗಳನ್ನು ಹಾಡುತ್ತಾರೆ.

ಸ್ತುತಿಗೀತೆಗಳನ್ನು ಹಾಡುತ್ತಾ ನಾಲ್ಕು ಕಳಸಗಳ ಮೂಲಕ ಹಾದು ಹೋಗಿರುವ ದಾರವನ್ನು ನಾಲ್ಕು ಜನ ದೇವದಾಸಿಯರು ಎತ್ತಿಕೊಂಡು ನಾಲ್ಕು ಬಾರಿ ಮಡಚಿ ನಂತರ ಅದಕ್ಕೆ ಅರಿಶಿಣ ಹಚ್ಚುವರು. ನಂತರ ಉಳಿದ ದೇವದಾಸಿಯರು 'ತಾಯಿ ಎಲ್ಲಮ್ಮ ಉಧೋ ಉಧೋ ಎಂದು ಒಟ್ಟಾಗಿ ಹಾಡುತ್ತಿರುವಾಗಲೇ ಆ ದಾರವನ್ನು ಹುಡುಗಿಯ ಕತ್ತಿಗೆ ಕಟ್ಟುತ್ತಾರೆ. ಸಾಂಪ್ರದಾಯಿಕ ಮದುವೆಯಲ್ಲಿ ಅಕ್ಷತೆ ಹಾಕುವಂತೆ ಹಿರಿಯ ಜೋಗತಿಯರು ವಿಧಿವತ್ತಾಗಿ ಮಂಗಳಾಕ್ಷತೆ ಹಾಕುತ್ತಾರೆ. ಅಲ್ಲಿ ನೆರೆದ ಹಿರಿಯರು, ಸಂಬಂಧಿಕರು, ಸ್ನೇಹಿತರು ಮಂಗಳಾಕ್ಷತೆ ಹಾಕಿ ಉಡುಗೊರೆ ನೀಡಿ ಮಂಗಳಾರತಿ ಮಾಡಿ ಎಲ್ಲರೂ ಊಟದಲ್ಲಿ ಭಾಗಿಯಾಗಿ ಹೊರಟು ಹೋಗು ತ್ತಾರೆ. ನಂತರ ಐದು ಜನ ಜೋಗಿತಿಯರು ಕೂಡಿ ಕಣಕದ (ಗೋಧಿ ಹಿಟ್ಟಿನ) ದೀಪ ಮಾಡಿ ಎಣ್ಣೆ ಬತ್ತಿ ಹಾಕಿ ಹೊತ್ತಿಸುತ್ತಾರೆ. ಆಮೇಲೆ ಕಣಕದಾರತಿ ಬತ್ತಿ ಎಲ್ಲವನ್ನು ಒತ್ತಾಯಪೂರ್ವಕ ವಾಗಿ ನುಂಗಿಸುತ್ತಾರೆ. ಇದು ಎಲ್ಲಕ್ಕಿಂತಲೂ ಹಿಂಸೆಯ ಕ್ರಮ ಎಂದು ದೇವದಾಸಿಯೊಬ್ಬಳು ಕ್ಷೇತ್ರಕಾರ್ಯಕ್ಕೆ ಹೋದಾಗ ತಿಳಿಸಿದಳು. ಆ ಮೇಲೆ ಅವಳಿಂದ ಪ್ರಮಾಣ ವಚನಗಳನ್ನು ಪಡೆಯುವರು. ಅವುಗಳೆಂದರೆ,

೧. ಹಸಿವೆಯಾದವರಿಗೆ ಉಣಬಡಿಸುವುದು.
೨. ಬಿಸಿಲಿನಲ್ಲಿದ್ದವರನ್ನು ನೆರಳಿಗೆ ಕರೆಯುವುದು.
೩. ಮಿಲನದಲ್ಲಿರುವ ಜೋಡಿಯನ್ನು ನೋಡಕೂಡದು. ನೋಡಿದರೂ ಇದನ್ನು ಯಾರಿಗೂ ಹೇಳಬಾರದು.
೪. ಸುಳ್ಳು ಹೇಳಕೂಡದು.
೫. ಯಾವಾಗಲೂ ಬರಿಗಾಲಲ್ಲಿ ನಡೆಯುವುದು.
೬. ಸತ್ತ ಸುದ್ದಿ ಕೇಳಿದ ಮೇಲೆ ಅವರ ಶವಸಂಸ್ಕಾರ ಮಾಡಿದ ನಂತರವೇ ಮಡಿಯಾಗಿ ದೇವರಿಗೆ ಹೋಗಿಬಂದು ಊಟ ಮಾಡಬೇಕು.
೭. ಅಪವಿತ್ರವಾದ ಆಹಾರವನ್ನು ತಿನ್ನಕೂಡದು.
೮. ಯಾರ ಮೇಲೂ ಸೇಡು ತೀರಿಸಿಕೊಳ್ಳಕೂಡದು.

ಇವಲ್ಲದೆ ಇನ್ನು ಅನೇಕ ಪ್ರಮಾಣಗಳನ್ನು ಮಾಡಿಸುತ್ತಾರೆ. ಇವುಗಳಲ್ಲಿ ಯಾವುದನ್ನು ತಪ್ಪಿದರೂ ಕೂಡಲೇ ತನ್ನ ಕೊರಳಲ್ಲಿಯ ದೇವರು ಕಟ್ಟಿದ ತಾಳಿಯನ್ನು ಹರಿದು ಹಾಕಿ ನಂತರ ಇಂಥದ್ದೇ ವಿಧಿಯನ್ನು ಆಚರಿಸಿದ ನಂತರವೇ ಮತ್ತೆ ಇದನ್ನು ಧರಿಸಬೇಕು. ಹೀಗೆ ಅವಳಿಂದ ಪ್ರತಿಜ್ಞೆ ಮಾಡಿಸಿ ಎಲ್ಲರೂ ದೇವಾಲಯದಿಂದ ಹೊರಗೆ ನಿರ್ಗಮಿಸಿ ಹಿರಿಯ ಜೋಗತಿಯೊಬ್ಬ ಳಿಂದ ದೇವದಾಸಿ ಹುಡುಗಿಯ ಕತ್ತಿಗೆ ಮಣಿಸರ ಕಟ್ಟಿಸುತ್ತಾರೆ. ಅನಂತರ ಹುಡುಗಿ ಊರಿಗೆ ಬಂದು ಜೋಗ ಭಿಕ್ಷೆಗೆ ಮನೆಮನೆಗೆ ಹೋಗುತ್ತಾಳೆ. ಆಗ ಊರವರಿಗೆ ಇವಳನ್ನು ಎಲ್ಲಮ್ಮ ನಿಗೆ ಬಿಟ್ಟ ಸಂಗತಿ ತಿಳಿಯುತ್ತದೆ. ದಿನಾಲೂ ಹಿರಿಯ ಜೋಗತಿಯರ ತರಬೇತಿಯಲ್ಲಿ ಹುಡುಗಿಗೆ ದೇವಾಲಯದ ಕಾರ್ಯಗಳನ್ನು ಮಾಡುವುದು, ಎಲ್ಲಮ್ಮನನ್ನು ಹೊಗಳುವ

ಹಾಡುಗಳನ್ನು ಹಾಡುತ್ತಾ ಶುಕ್ರವಾರ, ಮಂಗಳವಾರ ಕವಡೆಸರ ಹಾಕಿಕೊಂಡು ಹಡ್ಲಗಿ ಹಿಡಿದು ಜೋಗ ಬೇಡುವುದು ಇವಳ ಕಾಯಕವಾಗುತ್ತದೆ.

ಹುಡುಗಿ ಋತುಮತಿಯಾದ ಮೇಲೆ ವಿಧಿವತ್ತಾಗಿ 'ಕನ್ಯತ್ವ ಒಡೆಯುವ' ಅಥವಾ 'ಮೀಸಲು ಮುರಿಯುವ' ಅಥವಾ 'ಹೆಣ್ಣು ಮಾಡುವ' ಕಾರ್ಯವನ್ನು ವಿಧಿವತ್ತಾಗಿ ನಡೆಸುತ್ತಾರೆ. ಜೋಗತಿಯರ ಪೂಜಾರಿಗಳ ಮಧ್ಯಸ್ಥಿಕೆಯಲ್ಲಿ ಊರಿನ ಯಾವನೊಬ್ಬ ಶ್ರೀಮಂತನೋ, ಭೂಮಾಲೀಕನೋ, ವ್ಯಾಪಾರಿಯೋ, ಮೇಲುಜಾತಿಯವರೋ ಕನ್ಯತ್ವ ಮುರಿಯಲು ಸಿದ್ಧನಾಗುತ್ತಾನೆ. ಹುಡುಗಿಯ ತಂದೆ-ತಾಯಿಯರೊಂದಿಗೆ ಹಣ ಕೊಟ್ಟು ವ್ಯವಹಾರ ಕುದುರಿಸು ತ್ತಾರೆ. ಇಲ್ಲಿ ಇಷ್ಟೇ ಹಣ ಎಂದು ನಿಗದಿಯಿರುವುದಿಲ್ಲ. ದೇವದಾಸಿಯ ಪಾಲಕರೆಲ್ಲರೂ ಶ್ರೀಮಂತನೊಬ್ಬನು ತಮ್ಮ ಮಗಳ ಮೀಸಲು ಮುರಿಯಲು ಬಯಸುತ್ತಾರೆ. ಏಕೆಂದರೆ ಕೆಲವರು ಹಣ, ಒಡವೆ, ವಸ್ತ್ರಗಳನ್ನು ಕೊಡುತ್ತಾರೆ ಮತ್ತು ಈ ದಿನದ ಖರ್ಚೆಲ್ಲಾ ಅವರೇ ನೋಡಿ ಕೊಳ್ಳುತ್ತಾರೆ. ಒಂದು ವೇಳೆ ಕನ್ಯತ್ವ ಮುರಿಯಲು ಯಾರೂ ಮುಂದೆ ಬರದಿದ್ದರೆ ಅವಳ ಸೋದರ ಮಾವನಿಂದ ಈ ಕಾರ್ಯ ನೆರವೇರಿಸುತ್ತಾರೆ. ಹೀಗೆ 'ಮೀಸಲು ಮುರಿಯುವ' ಕಾರ್ಯ ಏರ್ಪಡಿ ಸುವ ಕೋಣೆ ದೇವತೆಯ ದೇವಸ್ಥಾನವಾಗುತ್ತದೆ. ಅಲ್ಲಿ ಜೋಗತಿಯರ ದೇವರನ್ನು ಸ್ಥಾಪಿಸಿ ಈ ಕಾರ್ಯಕ್ಕೆ ವ್ಯವಸ್ಥೆ ಮಾಡುವರು. ಇಲ್ಲಿ ನಡೆಯುವ ಪೂಜಾಕಾರ್ಯದ ನೇತೃತ್ವವನ್ನು ಹಿರಿಯ ಜೋಗತಿಯರು ವಹಿಸಿಕೊಳ್ಳುತ್ತಾರೆ.

ಈ ರೀತಿ ಶಾಸ್ತ್ರೋಕ್ತವಾಗಿ ದೇವರ ಸೇವೆಗೆ ಅರ್ಪಿತಳಾದ ಹೆಣ್ಣು ದೇವಸ್ಥಾನದ ಆವರಣ ದಲ್ಲಿ ಉಳಿದು, ದೇವರ ಪೂಜೆಯ ಸಮಯದಲ್ಲಿ ತನಗೆ ನಿರ್ವಹಿಸಿದ ಕೆಲಸಗಳನ್ನು ಮಾಡುತ್ತಾ, ಲೈಂಗಿಕ ಸಂಬಂಧ ಬಯಸಿ ಬಂದವರಿಗೆ ತನ್ನ ಶರೀರವನ್ನು ಒಪ್ಪಿಸುತ್ತಾ ಕಾಲ ದೂಡುತ್ತಾಳೆ. ಇಲ್ಲಿ ಅವಳ ಬೇಕು ಬೇಡಗಳಿಗೆ ಆಸ್ಪದವಿರುವುದಿಲ್ಲ. ಕ್ಷೇತ್ರಕಾರ್ಯಕ್ಕೆ ಹೋದಾಗ ದೇವದಾಸಿ ಯೊಬ್ಬಳು ತನ್ನ ನೋವನ್ನು ತೋಡಿಕೊಂಡದ್ದು ಹೀಗೆ "ನಾವು ದೇವರ ಹೆಣಮಕ್ಕಳು ಆಗಿದ್ದಕ್ಕೆ ಲೈಂಗಿಕ ಸುಖ ಬಯಸಿ ಯಾರು ಬಂದರೂ ಇಲ್ಲೆನಲುಬಾರದು. ನಮಗೆ ಹುಟ್ಟಿದ ಮಕ್ಕಳು ಯಾರದೆಂಬುದು ತಿಳಿಯುವುದೇ ಇಲ್ಲ. ಹೀಗಾಗಿ ಬಂದವರು ಸುಖ ಅನುಭವಿಸಿ ಹೋಗುತ್ತಾರೆ ವಿನಃ ಮಕ್ಕಳ ರೇಖ ದೇಖಿಯೆಲ್ಲ ನಮ್ಮದೆ. ಯಾರೋ ತಿಳಿದವರು ನಾಲ್ಕು ದುಡ್ಡು ಕೊಡ್ತಾರೆ. ಕೆಲವೊಬ್ಬರು ವರ್ಷಕ್ಕೆ ಎರಡು ಸೀರೆ ಕೊಡ್ತಾರೆ. ಒಮ್ಮೆ ಬಂದವ ಕೆಲವೊಮ್ಮೆ ಹೊರಳಿ ಬರುವುದೂ ಇಲ್ಲ. ಕೆಲವರು ಜೀವಮಾನಪೂರ್ತಿ ಇನ್ನೊಂದು ಸಂಸಾರ ಇಟಗೊಂಡೂ ನಮ್ಮೊಂದಿಗೂ ಕಡೆತನಕ ಉಳಿದವರೂ ಇದ್ದಾರೆ. ಒಟ್ಟಿನಲ್ಲಿ ನಮ್ಮ ಜೀವನ ಹಿಂಗೇ ಅಂತ ಹೇಳಲು ಬರುವುದಿಲ್ಲ. ಬಾಜಾರ ಇದ್ದಂಗ ನೋಡ್ರಿ. ಮಾಲ ಇರಾತನ ಗಿರಾಕಿ ಇದ್ದಂಗ ನಮ್ಮ ವೈಯನ ಕಸುವು ಇರೋತನ ನಮ್ಮ ಹತ್ತಿರ ಬರತಾರ ಯೌವ್ವನ ಕಳೆದರೆ ನಮ್ಮ ಸನ್ಯಾಕ ಯಾರೂ ಮುಸಿನೋಡಲ್ಲ" ಎಂದು ಹೇಳುತ್ತಾ ಕಣ್ಣೀರೊರೆಸಿಕೊಂಡಳು.

ಇಷ್ಟೆಲ್ಲಾ ಕಷ್ಟಗಳಿದ್ದರೂ ವಾಸ್ತವ ಜೀವನದ ಕಷ್ಟಕ್ಕೆ ಹೆದರಿ. ದೇವಿ ಕೋಪಕ್ಕೆ ತುತ್ತಾಗು ತ್ತೇವೆಂಬ ಭಯದಿಂದ ಮನಸ್ಸಿರದಿದ್ದರೂ ತಮ್ಮ ಕುಟುಂಬದ ಮತ್ತೊಬ್ಬ ಹುಡುಗಿಯನ್ನು

ಸಂಪ್ರದಾಯ ಮುಂದುವರೆಸಿಕೊಂಡು ಹೋಗಲು ದೇವದಾಸಿ ಬಿಡುತ್ತಾರೆ. ಭಾವುಕ ಭಕ್ತಿ ಇವರ ವೈಚಾರಿಕ ಶಕ್ತಿಯನ್ನೇ ಕಿತ್ತುಕೊಂಡಿದೆ. ಹಬ್ಬಹರಿದಿನಗಳಲ್ಲಿ. ಹೊಲದ ರಾಶಿಯ ಸಂದರ್ಭದಲ್ಲಿ. ಊರ ಜಾತ್ರಿಗಳಲ್ಲಿ ಇವರ ಪರಡಿಗಳನ್ನು ತುಂಬುವ ಜಾಜ ಮಾಡುತ್ತಾರೆ. ಇವರನ್ನು ನಿತ್ಯಸುಮಂಗಲಿಯರು ಎಂದು ಕರೆದು ಮನ್ನಣೆ ನೀಡಿದ್ದಾರೆ. ದೇವರ ಮಕ್ಕಳು ಎಂದು ದೇವದಾಸಿಯರ ಮಕ್ಕಳಿಗೆ ಮದುವೆ ಮಾಡಿಕೊಂಡಿದ್ದಾರೆ. ಹೀಗೆ ಇವರನ್ನು ಭಕ್ತಿಯ ಅಮಲಿನಲ್ಲಿ ಮುಳುಗಿಸಿ ಈ ಪದ್ಧತಿಯನ್ನು ವಿರೋಧಿಸದಂತೆ ಮಾಡಿದ್ದಾರೆ. ಯಾವತ್ತೂ ಮಡಿಮೈಲಿಗೆ ಪೂಜೆ, ಮೈಮೇಲೆ ದೇವಿ ಆವಾಹನೆ, ಜೋಗ ಬೇಡುವುದು, ಹಬ್ಬ ಹುಣ್ಣಿಮೆ ಗಳಲ್ಲಿ ಆಯಾ ಸ್ಥಳೀಯ ಪದ್ಧತಿಗಳನ್ನಾಚರಿಸಿಕೊಂಡು ಹೋಗುವುದು ಹೀಗೆ ಅವಳ ಜೀವನ ಸಾಗುತ್ತಾ ಯೌವ್ವನ ಕಳೆದು ಮುಪ್ಪಾಗುತ್ತಾಳೆ. ಆಗ ಕಂಗೆಟ್ಟು ಬಡತನದಿಂದ ಕಂಗಾಲಾಗಿ ಕೃಶಳಾಗಿ ಜೀವನದ ಅಂತ್ಯ ಕಾಣುತ್ತಾಳೆ.

ಇವಳ ಅಂತ್ಯ ಸಂಸ್ಕಾರವನ್ನೂ ವಿಧಿವತ್ತಾಗಿ ಮಾಡುತ್ತಾರೆ. ಕೆಲವೆಡೆ ದೇವದಾಸಿಯರನ್ನು ಕಟ್ಟಿಗೆಯಲ್ಲಿ ಸುಟ್ಟರೆ, ಕೆಲವೆಡೆ ದೇವಾಲಯದ ಹಿಂಭಾಗದಲ್ಲಿ ಹೂಳುತ್ತಾರೆ. ದೇವದಾಸಿ ಬಿಡುವಾಗಿನ ಪೂಜಾಕಾರ್ಯದಂತೆ ನೆಲಸಾರಿಸಿ ಬಣ್ಣಗಳಿಂದ ರಂಗವಲ್ಲಿ ಬರೆದು ಹೆಣಕ್ಕೆ ಮೈ ತೊಳೆದು ನಡುವೆ ತಂದು ಕುಳ್ಳಿಸುತ್ತಾರೆ. ಆಕೆಯ ಕೊರಳಲ್ಲಿದ್ದ ಮಣಿಗಳನ್ನು ತೆಗೆಯುತ್ತಾರೆ. ಅಲ್ಲಿದ್ದ ನಾಲ್ಕು ಕಲಶಗಳಿಂದ ಆಕೆಯನ್ನು ಶುದ್ಧಗೊಳಿಸಿ ಬಾಳೆಹಣ್ಣು, ಕೊಬ್ಬರಿ, ಉತ್ತತ್ತಿ ಮುಂತಾದ ಪೂಜಾವಸ್ತುಗಳನ್ನು ಹೆಣದೊಂದಿಗೆ ಹೂಳುತ್ತಾರೆ. ಅವಳು ಬಳಸುವ ಪರಡಿಯನ್ನು ಒಯ್ದು ತುಳಜಾಪುರದಲ್ಲಿ ಬಿಟ್ಟು ಬರುತ್ತಾರೆ. ನಿತ್ಯ ಸುಮಂಗಲಿಯರು ಎಂದು ಅವಳಿಗೆ ಹೊಸ ಸೀರೆ, ಕುಪ್ಪಸ, ದಂಡೆ, ಕುಂಕುಮ, ಬುಕ್ಕೀಟು, ಧೂಪದೀಪಗಳಿಂದ ಅಲಂಕರಿಸಿ ಡೊಳ್ಳು, ಹಲಗೆ ಬಾರಿಸುತ್ತಾ ವೈಭವದಿಂದ ಮೆರವಣಿಗೆ ಮಾಡುತ್ತಾ ಅವಳ ತಾಳಿಯೊಂದಿಗೆ ಅವಳನ್ನು ಸಿಂಗರಿಸಿದ ಕುಣಿಯೊಳಗೆ ಹೂಳುತ್ತಾರೆ.

ಹೀಗೆ ಜೀವನದ ಅಂತ್ಯ ಕಾಣುವ ದೇವದಾಸಿಯ ಬದುಕು ಅತಂತ್ರವಾದುದು. ಅನಿರ್ದಿಷ್ಟ ವಾದುದು. ಯೌವ್ವನದಲ್ಲಿ ದೇವರ ಹೆಸರಲ್ಲಿ ತವರು ಮನೆಯ ಆರ್ಥಿಕ ಸ್ಥಿತಿಯ ಆಧಾರ ಸ್ತಂಭವಾಗಿ, ಮುಪ್ಪಾದಂತೆ ದೇವಿಯ ಧಾರ್ಮಿಕ ಪ್ರಚಾರಕಳಾಗಿ. ಜೋಗತಿಯಾಗಿ ಮನೆಮನೆಗೆ ತಿರುಗುತ್ತಾ ಕೊನೇ ಘಳಿಗೆಯವರೆಗೂ ಕಷ್ಟದ ಜೀವನವನ್ನೇ ಹಾಸುಹೊದ್ದು ಅಂತ್ಯ ಕಾಣುವ ಇವಳ ಜೀವನವನ್ನು ನಾವಿಂದು ಬಗಿದು ನೋಡಿ ಸಮಸ್ಯೆಗೆ ಪರಿಹಾರಗಳನ್ನು ಹುಡುಕಬೇಕಿದೆ.

## ದೇವದಾಸಿಯರ ಸಾಮಾಜಿಕ ಸ್ಥಿತಿಗತಿ

ಆರ್ಥಿಕ, ರಾಜಕೀಯ ಕಾರಣಗಳಿಗಾಗಿ ಹುಟ್ಟಿಕೊಂಡ ಧಾರ್ಮಿಕ ನಂಬಿಕೆಗಳು ಸಮಾಜದ ಭಾಗವಾಗಿ ಇಂದಿಗೂ ಬಂದು ಬಿಟ್ಟಿವೆ. ಅಂತೆಯೇ ದೇವದಾಸಿ ಪದ್ಧತಿ ಸಹ ಈಗಲೂ ರಾಜ್ಯ ದಲ್ಲಿ ಜಾಲ್ತಿಯಲ್ಲಿದೆ. ದೇವರ ಸೇವೆ ಮಾಡುವಾಗ, ನೃತ್ಯದ ಮೂಲಕ ಮನರಂಜನೆಯಲ್ಲಿ ತೊಡಗಿರುವಾಗ ದೇವದಾಸಿಯರ ಬದುಕು ಬೇರೆ ರೀತಿಯ ಸಾಂಸ್ಕೃತಿಕ ಆಯಾಮ ಹೊಂದಿತ್ತು ಮತ್ತು ಸಮಾಜದ ದೃಷ್ಟಿ ಧೋರಣೆಯಲ್ಲಿ ವ್ಯತ್ಯಾಸವಿತ್ತು. ಆದರೆ ಬದಲಾದ ಪರಿಸ್ಥಿತಿಯಲ್ಲಿ

ದೇವದಾಸಿ ಪದ್ಧತಿಗೆ ಕೇವಲ ದಲಿತ ಸಮುದಾಯದ ಮಹಿಳೆಯರನ್ನೇ ಪಕ್ಕಾಗಿಸಲಾಯಿತು. ಗಣಿಕಾ ಸ್ತ್ರೀಯರು ಮತ್ತು ಅಂಗಭೋಗ-ರಂಗಭೋಗ ಸೇವಕಿಯರನ್ನು ಸಮಾಜವು ಅದೊಂದು ವೃತ್ತಿಯಾಗಿ, ಧಾರ್ಮಿಕ ನಂಬಿಕೆಯಾಗಿ ಪರಿಗಣಿಸಿ ಕಿಂಚಿತ್ತಾದರೂ ಗೌರವದಿಂದ ಕಾಣಲಾಗುತ್ತಿತ್ತು. ಆದರೆ ಕಾಲಕ್ರಮೇಣ ದೇವದಾಸಿ ಪದ್ಧತಿಯ ಹೆಸರಲ್ಲಿ ದೇವರಿಗೆ ಬಿಡಲ್ಪಟ್ಟ ಮಹಿಳೆಯರನ್ನು ಸಮಾಜವು ನೋಡುವ ದೃಷ್ಟಿಕೋನದಲ್ಲಿ ಅಗಾಧ ಬದಲಾವಣೆಯಾಗಿದೆ. ಈ ಬದಲಾವಣೆಯ ಹಿಂದೆ ಆರ್ಥಿಕ ರಾಜಕೀಯ ಕಾರಣಗಳಿವೆ.

ಕರ್ನಾಟಕದ ೧೪ ಜಿಲ್ಲೆಗಳಲ್ಲಿ ೬೦ ಸಾವಿರಕ್ಕೂ ಹೆಚ್ಚು ದೇವದಾಸಿ ಮಹಿಳೆಯರಿರುವರು. ಇವರೆಲ್ಲ ತಮ್ಮ ಅತ್ಯಂತ ಸಣ್ಣ ವಯಸ್ಸಿನಲ್ಲಿ, ಕೂಸಿದ್ದಾಗ ದೇವದಾಸಿಯಾಗಿಸಲ್ಪಟ್ಟವರು. ಯಲ್ಲಮ್ಮ, ರೇಣುಕ, ಮಾಪುರತಾಯಿ ಇತ್ಯಾದಿ ದೇವತೆಗಳನ್ನು ಆರಾಧಿಸಿ ಕೆಲವು ಆಚರಣೆಗಳನ್ನು ಮಾಡುವಲ್ಲಿ ಮೇಲ್ಸಮುದಾಯದ ಜನರೂ ಇರುವರು. ಹರಕೆ ಹೊತ್ತಾಗ ಬೇವಿನ ತಪ್ಪಲು ಬಾಯಲ್ಲಿ ಹಿಡಿದು ಒಂದು ದಿನ ಭಕ್ತಿ ಮಾಡುವವರು ಇರುವರು. ಮನೆಯಲ್ಲಿಯೇ ಬತ್ತಲೇ ಅಥವಾ ಬೇವಿನುಟಗೆಯುನ್ನುಟ್ಟು ಸೇವೆ ಮಾಡುವ ಪ್ರಕರಣಗಳೂ ಇವೆ. ಆದರೆ ಇವೆಲ್ಲ ಮೇಲ್ಜಾತಿ ಮತ್ತು ಮೇಲ್ಸಮುದಾಯದ ಭಕ್ತಾದಿಗಳು ವ್ಯಕ್ತ ಮಾಡಿದ ಭಕ್ತಿಯ ಪ್ರಕಾರಗಳು. ಇವರು ಯಾರೂ ದೇವದಾಸಿಯರಾಗಿ ಮುತ್ತು ಕಟ್ಟಿಸಿಕೊಂಡವರಲ್ಲ. ಆದರೆ ದಲಿತ ಸಮುದಾಯದ ಮಹಿಳೆಯರನ್ನು ಮಾತ್ರ ದೇವದಾಸಿಯರನ್ನಾಗಿಸಲಾಗಿದೆ. ಈಗಾಗಲೇ ವಿವರಿಸಿದಂತೆ ಇವರೆಲ್ಲರನ್ನು ಸಮಾಜದ ಲೈಂಗಿಕ ತೃಷೆಗಾಗಿ ಬಳಸಿಕೊಳ್ಳಲಾಗುತ್ತಿದೆ. ಪ್ರತಿಯೊಬ್ಬ ದೇವದಾಸಿಯ ಜೀವನದ ಒಳಹೊಕ್ಕು ನೋಡಿದಾಗ ಗೋಚರಿಸುವ ಸತ್ಯಗಳು ಬೇರೆಯೇ ಆಗಿವೆ.

ಅನಕ್ಷರತೆ, ಬಡತನದಲ್ಲಿರುವ ದಲಿತ ಸಮುದಾಯದಲ್ಲಿ ಯಾರಿಗಾದರೂ ರೋಗ-ರುಜಿನಗಳು ಬಂದಾಗ ಅವಕ್ಕೆಲ್ಲ ಕಂದಾಚಾರ ಮೂಢನಂಬಿಕೆಯ ಕಾರಣಗಳನ್ನು ಕೊಡಲಾಗಿದೆ. ಯಾವುದೇ ವೈಜ್ಞಾನಿಕ ವಿಚಾರಧಾರೆಗೆ ಅಸ್ಪದವೇ ಇಲ್ಲದಂತೆ ಅವರ ದಿನಚರಿಯನ್ನು ಹೆಣೆಯಲಾಗಿದೆ. ಇಂದಿಗೂ ದಲಿತ ಸಮುದಾಯದ ಬಹುಸಂಖ್ಯಾತ ಜನರು ಕೃಷಿ ಕೂಲಿಕಾರ್ಮಿಕರೇ ಆಗಿರುವರು. ಏಕೆಂದರೆ ಅವರೆಲ್ಲ ಭೂಹೀನರೇ ಆಗಿರುವರು. ಜೀವನ ಸಾಗಿಸಲು ಹೊಟ್ಟೆ ತುಂಬಿಸಿಕೊಳ್ಳಲು ಕೂಲಿ ಬಿಟ್ಟರೆ ಬೇರೆ ಮಾರ್ಗವೇ ಇಲ್ಲವಾದ್ದರಿಂದ ಅತ್ಯಂತ ಕಡಿಮೆ ಕೂಲಿಗೆ ದುಡಿಮೆ ಮಾಡುತ್ತಿರುವರು. ಧಾರ್ಮಿಕ ಮತ್ತು ಆರ್ಥಿಕ ಹಿಡಿತವಿರುವ ಪಾಳೇಗಾರರು ದಲಿತ ಸಮುದಾಯವನ್ನು ನಿರಂತರವಾಗಿ ಮೌಢ್ಯ ಹಾಗೂ ಬಡತನದಲ್ಲಿರುವ ದೇವರು ಮತ್ತು ಭಕ್ತಿಯನ್ನು ಬಳಸಿದರು. ಈಗಾಗಲೇ ಚಾಲ್ತಿಯಲ್ಲಿರುವ ಮತ್ತು ಫಲಾಪೇಕ್ಷೆಯಂಥ ನಂಬಿಕೆಯನ್ನು ಮತ್ತಷ್ಟು ಪೋಷಿಸಲಾಯಿತು. ಜೀವನದಲ್ಲಿ ಘಟಿಸುವ ಯಾವೆಲ್ಲ ಅವಘಡಗಳಿಗೆ ದೈವ ಮತ್ತು ದೇವರ ಕಾರಣಗಳನ್ನು ಕೊಡಲಾಯಿತು. ಮನುಷ್ಯ ನಿರ್ಮಿತ ಮತ್ತು ನೈಸರ್ಗಿಕ ಕಷ್ಟಗಳೆಲ್ಲಕ್ಕೂ ದೇವರ ಕೋಪ ಶಾಪದ ಆಶ್ರಯ ಪಡೆದು, ಜನರನ್ನು ನಂಬಿಸಲಾಯಿತು. ಆದ್ದರಿಂದಲೇ ದೇವದಾಸಿಯರ ಮನೆಯಲ್ಲಿನ ಪರಿಸ್ಥಿತಿ ಮತ್ತು ಕಾರಣಗಳನ್ನು ಹುಡುಕಿ ಹೊರಟರೆ ಆರ್ಥಿಕ ಮತ್ತು ಧಾರ್ಮಿಕ ನಂಬಿಕೆಯ ಕಾರಣಗಳು ಪ್ರಧಾನವಾಗುತ್ತವೆ.

ಗಂಡು ಮಗ ಹುಟ್ಟಲು ಅಕ್ಕನನ್ನು ದೇವದಾಸಿಯಾಗಿಸಲಾಗಿದೆ ಅಥವಾ ಹುಟ್ಟಿದ ಮಕ್ಕಳೆಲ್ಲ ಹೆಣ್ಣೇ ಆಗಿದ್ದಾಗಲೂ ಒಬ್ಬಳನ್ನು ದೇವದಾಸಿ ಮಾಡಲಾಗಿದೆ. ಚರ್ಮ ರೋಗ ಅಥವಾ ಮತ್ತಿತರ ರೋಗಗಳು ಕಾಡಿದ್ದೂ ನೆಪವಾಗಿ ಮನೆಯ ಹೆಂಗಸನ್ನು ದೇವರಿಗೆ ಬಿಡಲಾಗಿದೆ. ಮುಪ್ಪಾವಸ್ಥೆಯಲ್ಲಿ ನೋಡಿಕೊಳ್ಳಲೆಂದು ಒಬ್ಬ ಮಗಳಿಗೆ ಮುತ್ತು ಕಟ್ಟಲಾಗಿದೆ. ದನಕರುಗಳು ಹುಟ್ಟಿ ಸತ್ತರೂ ಅದನ್ನುಳಿಸಲು ಹೆಣ್ಣು ಮಗುವಿಗೆ ಭಂಡಾರ ಹಾಕಲಾಗಿದೆ. ಹೀಗೆ ನಾನಾ ಕಾರಣಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಈ ಸಮುದಾಯದ ಸುತ್ತ-ಮುತ್ತ ಮೌಢ್ಯದ ಆಚರಣೆ ಮಾಡಲೇಬೇಕಾದ ವ್ಯವಸ್ಥೆಯೊಂದು ಜೀವಂತವಾಗಿರುವಂತೆ ನೋಡಿಕೊಳ್ಳಲಾಗಿದೆ. ಇಂಥ ಕೆಲಸಕ್ಕೆ ಹಿರಿಯ ಜೋಗತಿಯರನ್ನು ಬಳಸಲಾಗಿದೆ. ಹಿರಿಯ ಜೋಗತಿಯರ ಮೇಲೆ ನಿಯಂತ್ರಣ ಹೊಂದಿರುವುದರಿಂದ ಅವರ ಸಂಪರ್ಕದಿಂದ ದೇವದಾಸಿ ಪದ್ಧತಿಯನ್ನು ಅನೂಚಾನವಾಗಿ ಮುಂದುವರೆಯುವಂತೆ ನೋಡಿಕೊಳ್ಳಲಾಗುತ್ತಿದೆ. ಅತ್ಯಂತ ದುರಂತವೆಂದರೆ ಮೌಢ್ಯಾಚರಣೆ, ದೇವರ ಭಕ್ತಿ ಆಚೆಗೆ ದೇವದಾಸಿಯರನ್ನು ಬಳಸುವ ಕ್ರೌರ್ಯದ ವ್ಯವಸ್ಥೆಯೊಂದು ನಿರ್ಮಾಣವಾಗಿದೆ. ಇದೇ ಜೋಗತಿಯರ ಸಹಾಯದಿಂದ ಹರೆಯದ ದೇವದಾಸಿಯರನ್ನು ವೇಶ್ಯಾವೃತ್ತಿಗೆ ನೂಕಲಾಗುತ್ತಿದೆ.

ಹೀಗೆ ದೇವದಾಸಿ ಪದ್ಧತಿಯ ಹೆಸರಿನಲ್ಲಿ ಮಹಿಳೆಯರನ್ನು ಧಾರ್ಮಿಕ ಮೌಢ್ಯಕ್ಕೆ ಬಲಿ ಮಾಡುವುದರೊಂದಿಗೆ ದಲಿತ ಮಹಿಳೆಯರನ್ನು ಎಲ್ಲಾ ರೀತಿಯಿಂದ ಶೋಷಿಸಲು ಸಾಮಾಜಿಕ ಮೌಲ್ಯಗಳನ್ನು ರೂಪಿಸಲಾಯಿತು. ಈ ಮೌಲ್ಯದ ಆಳದ ಗುರಿಯಿರುವುದು ದಲಿತ ಮಹಿಳೆಯರನ್ನು ಮಾರುಕಟ್ಟೆಯ ವಸ್ತುಗಳಾಗಿಸುವುದು. ಅಂದರೆ ವೇಶ್ಯಾವೃತ್ತಿಯಲ್ಲಿ ತೊಡಗಿಸುವುದು ಮತ್ತು ಈ ಅಪಮಾನಜನಕ ಪ್ರಕ್ರಿಯೆ ನಡೆಯುವಾಗ ಸಮಾಜವು ಭಕ್ತಿ-ಭಯದ ಪರದೆ ಹೊದ್ದು ಸಮ್ಮತಿಸುವಂತೆ ಮಾಡುವುದು. ಆದ್ದರಿಂದಲೇ ದೇವದಾಸಿ ಪದ್ಧತಿ ಆಳ-ಹರಹು-ವಿಸ್ತಾರವು ವಿಷದ ನೆಲೆಯನ್ನು ಹೊಂದಿದೆ. ಅಮಾಯಕ ಮಹಿಳೆಯರ ಬದುಕಿನ ಹಾಳೆಯ ಮೇಲೆ ರಕ್ತ-ಸಿಕ್ತ ಗಾಯಗಳ ಗೆರೆ ಕೊರೆಯಲಾಗಿದೆ.

ದೇವದಾಸಿ ಮಹಿಳೆಯರ ಮಕ್ಕಳನ್ನು ಶಾಲೆಯಲ್ಲಿ ಹೆಸರು ನೋಂದಾಯಿಸುವಾಗ ತಂದೆಯ ಹೆಸರು ದಕ್ಕದ ಕಾರಣ ಅವಮಾನವಾಗಬಾರದೆಂದು ಗಂಡು ದೇವರುಗಳ ಹೆಸರನ್ನು ಸೇರಿಸಲಾಗಿದೆ. ಅಂಬಾಬಾಯಿಗೆ ನಡಕೊಳ್ಳುವವರು ತಂದೆ ಹೆಸರು ಅಪ್ಪಣ ಮಾಪುರತಾಯಿಗೆ ನಡಕೊಳ್ಳುವವರು ಮಾಪಣ್ಣ, ಎಲ್ಲಮ್ಮನಿಗೆ ನಡಕೊಳ್ಳುವವರು ಪರಶುರಾಮ, ಪರಸಪ್ಪ ಇತ್ಯಾದಿಯಾಗಿ ಹೆಸರುಗಳನ್ನು ನೋಂದಾಯಿಸಿಕೊಂಡು ಮಕ್ಕಳಿಗೆ ಸಮಾಧಾನಿಸಿದುಂಟು. ತಾಯಿಯ ಹೆಸರನ್ನು ಕೆಲವು ಕಡೆ ನೋಂದಾಯಿಸಿದ್ದಿದೆ. ಆದರೆ ಪುರುಷ ಪ್ರಧಾನ ನಂಬಿಕೆಯಿರುವ ಈ ಸಮಾಜವು ದೇವದಾಸಿ ಮಕ್ಕಳನ್ನು ಕೀಳಾಗಿ ಕಾಣುತ್ತಿರುವುದರಿಂದ ಗಂಡು ದೇವರ ಹೆಸರು ಅಥವಾ ಅನಾಮಿಕ ಹೆಸರನ್ನು ಸೇರಿಸುತ್ತಿರುವರು.

ಅರವತ್ತು ಸಾವಿರಕ್ಕೂ ಹೆಚ್ಚಿರುವ ದೇವದಾಸಿಯರು ಬೆರಳೆಣಿಕೆಯಷ್ಟು ಯುವತಿಯರು ಅಕ್ಷರಸ್ಥರಿರುವರು. ಉಳಿದೆಲ್ಲರೂ ಅನಕ್ಷರಸ್ಥರು. ಗುಲಬರ್ಗಾ ಜಿಲ್ಲೆಯ ಒಟ್ಟು ಮಹಿಳಾ ಸಾಕ್ಷರತೆ

ಇನ್ನೂ ಕಡಿಮೆ. ದೇವದಾಸಿ ಮಹಿಳಾ ಸಾಕ್ಷರತೆಯಂತೂ ಕೇವಲ ಶೇಕಡ ೨%, ೩% ಮಾತ್ರ ಇರುವ ಸಾಧ್ಯತೆಗಳಿವೆ. ಹಿರಿಯ ದೇವದಾಸಿಯರಂತೂ ಸಂಪೂರ್ಣ ಅನಕ್ಷರಸ್ಥರು.ದೇವದಾಸಿಯರ ಮಕ್ಕಳು ಇತ್ತೀಚೆಗೆ ಹೈಸ್ಕೂಲು ಕಾಲೇಜಿನ ಮೆಟ್ಟಿಲೇರಿರುವರು. ವಿದ್ಯಾವಂತರಾಗಿ ಮುನ್ನಡೆದು ಅಲ್ಲೊಬ್ಬ ಇಲ್ಲೊಬ್ಬರು ಉನ್ನತ ಹುದ್ದೆಯಲ್ಲಿರುವರು. ಆದರೆ ಅವರಲ್ಲಿ ಬಹುತೇಕ ಜನ ತಾವು ದೇವದಾಸಿಯ ಮಕ್ಕಳೆಂದು ಹೇಳಿಕೊಳ್ಳಲು ಹಿಂಜರಿಯುವರು. ಇದಕ್ಕೆ ಮಾನಸಿಕ ತೊಳಲಾಟವೂ ಕಾರಣವಿರಬಹುದು.

ದೇವದಾಸಿ ಮಹಿಳೆಯರೆಲ್ಲರೂ ಕೃಷಿ ಕೂಲಿ ಕಾರ್ಮಿಕರೇ ಆಗಿರುವರು. ಏಕೆಂದರೆ ಭೂಹೀನರೇ ಗರಿಷ್ಠ ಸಂಖ್ಯೆಯಲ್ಲಿರುವರು. ಕೆಲವರಿಗೆ ಮಾತ್ರ ಅರ್ಧ ಎಕರೆ ಒಂದೆಕರೆ ಎರಡೆಕರ ಭೂಮಿ ಇರುವುದು. ಆದರೆ ಆ ಭೂಮಿಯಲ್ಲಿ ಏನನ್ನೂ ಬೆಳೆಯಲು ಸಾಧ್ಯವಿಲ್ಲದ ಪರಿಸ್ಥಿತಿ ಇದೆ. ಏಕೆಂದರೆ ಕೃಷಿ ಮುಂದುವರೆಸಲು ನಿಭಾಯಿಸಲು ಹಣದ ಬಂಡವಾಳ ಬೇಕು. ದೇವದಾಸಿಯರು ಅತ್ಯಂತ ಕಡುಬಡವರು. ಇವರು ಕೃಷಿ ಅಥವಾ ಇನ್ನಿತರ ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿದರೆ 'ದೇವದಾಸಿ ಪದ್ಧತಿ' ಮುಳುಗಬಹುದೆಂಬ ಭೀತಿಯಿಂದ ಪುರೋಹಿತಶಾಹಿಯ ಧಾರ್ಮಿಕ ಕಂದಾಚಾರಣೆಯನ್ನು ಹೇರಿದೆ. ದೇವದಾಸಿಯಾದವರು ದೇವರ ಸೇವೆ ಅಥವಾ ಗಂಡಸಿನ ಶರೀರ ಸೇವೆ ಮಾತ್ರ ಮಾಡಬೇಕು ಎಂಬಂತೆ ನೀತಿ ನಿಯಮಗಳನ್ನು ಹೇರಿದೆ. ಶುಕ್ರವಾರ-ಮಂಗಳವಾರ ಆರಾಧ್ಯ ದೇವತೆಯ ಗುಡಿಯಲ್ಲಿ ಹಾಡು ಭಕ್ತಿ ಸೇವೆ ಇತರ ಕಾರ್ಯಗಳಲ್ಲಿ ನಿರತರಾಗಿರುವವರು ಕೆಲವು ಕೆಲಸಗಳನ್ನು ಮಾಡಬಾರದು. ಮಾಡಿದರೆ ಮೈಲಿಗೆ ಎಂಬ ನಂಬಿಕೆ ಹುಟ್ಟಿಸಲಾಗಿದೆ. ಹೀಗಾಗಿ ದೇವರ ಹೆಸರಲ್ಲಿ ಭಿಕ್ಷಾಟನೆಗೆ ದೂಡಲಾಗಿದೆ. ಆದರೆ ಭಿಕ್ಷಾಟನೆಯಿಂದಾಗಲಿ, ಲೈಂಗಿಕ ಸೇವೆಯಿಂದಾಗಲಿ ದೇವದಾಸಿಯರ ಆರ್ಥಿಕ ಪರಿಸ್ಥಿತಿ ಸುಧಾರಿಸಿಲ್ಲ. ಬದಲಿಗೆ ಮತ್ತಷ್ಟು ಬಡತನಕ್ಕೆ ಬಲಿಯಾಗಿರುವರು. ಆದ್ದರಿಂದ ಹೊಟ್ಟೆ ತುಂಬಿಸಿಕೊಳ್ಳಲು ಕೃಷಿ ಕೂಲಿಕಾರ್ಮಿಕರಾಗಿ ಕೆಲಸ ಮಾಡುತ್ತಿರುವರು. ದೊಡ್ಡ ಪಟ್ಟಣಗಳಿಗೆ ಗುಳೆ ಹೋಗಿರುವರು. ಹಾಗೆ ಹೋದವರು ಇನ್ನೂ ಸಮೀಕ್ಷಾ ಪಟ್ಟಿಯಲ್ಲಿ ಸೇರ್ಪಡೆಯಾಗಿಲ್ಲ.

ದೇವದಾಸಿಯರನ್ನು ಎಲ್ಲ ದೃಷ್ಟಿಯಿಂದಲೂ ಶೋಷಿಸಲೆಂದೇ ಜಮೀನ್ದಾರಿ ಮತ್ತು ಪುರೋಹಿತ ವರ್ಗವು ಅವರನ್ನು ಆರ್ಥಿಕ ಉತ್ಪಾದನಾ ಚಟುವಟಿಕೆಯಲ್ಲಿ ಅತ್ಯಂತ ಕಡಿಮೆ ಕೂಲಿಗೆ ಅಥವಾ ಬಿಟ್ಟಿ ದುಡಿಮೆಗೆ ಬಳಸಿದೆ. ಆರ್ಥಿಕ ಉತ್ಪಾದನೆಯ ಲಾಭದಲ್ಲಿ ಅವರಿಗೆ ಪಾಲಿಲ್ಲದಂತೆ ಮಾಡಲಾಗಿದೆ. ಆದ್ದರಿಂದ ದೇವದಾಸಿಯರು ಮೈಯಲ್ಲಿ ಶಕ್ತಿಯಿದ್ದಾಗ ದುಡಿದರೂ ಅವರ ಜೀವನದ ಸಂಧ್ಯಾಕಾಲದಲ್ಲಿ, ಮುಪ್ಪಾವಸ್ಥೆಯಲ್ಲಿ ಹಸಿವಿನಿಂದ ನರಳುವ ಸ್ಥಿತಿ ಎದುರಿಸುತ್ತಿದ್ದಾರೆ. ಆರೋಗ್ಯ ಕ್ಷೀಣಿಸಿ ಕನಿಷ್ಠ ಶುಶ್ರೂಷೆ ಇಲ್ಲದೆ, ಒಂದು ಹೊತ್ತಿನ ಅನ್ನವೂ ಸಿಗದೆ ದಯನೀಯ ಸ್ಥಿತಿಯಲ್ಲಿ ಅಸಂಖ್ಯಾತ ದೇವದಾಸಿಯರು ಇರುವರು. ಕ್ಷೇತ್ರ ಕಾರ್ಯದಲ್ಲಿ ಚುಂಚೂರು, ಯಳಸಂಗಿ, ನೀಲೂರು ಮುಂತಾದ ಗ್ರಾಮಗಳಲ್ಲಿ ಅನೇಕ ಜನ ವೃದ್ಧ ದೇವದಾಸಿಯರು ಹೊಟ್ಟೆಗೆ ಊಟವಿಲ್ಲದೆ, ಅನಾರೋಗ್ಯದಿಂದ ನರಳುತ್ತಾ ಬಿದ್ದಿರುವುದನ್ನು ಕಂಡಾಗ ಮನ ಕಲಕುತ್ತದೆ.

ಹೀಗಾಗಿ ದೇವದಾಸಿ ಪದ್ಧತಿಗೆ ಪಕ್ಕಾಗಿ ಅನಿವಾರ್ಯವಾಗಿ ಒಪ್ಪಿಕೊಂಡ ದೇವದಾಸಿಯರು ತಮ್ಮನ್ನು ಮುಪ್ಪಾವಸ್ಥೆಯಲ್ಲಿ ನೋಡಿಕೊಳ್ಳಲು ತನ್ನ ಒಬ್ಬ ಮಗಳನ್ನು ದೇವದಾಸಿಯಾಗಿಸಿ ಮನೆಯಲ್ಲಿ ಇಟ್ಟುಕೊಳ್ಳುವ ತೀರ್ಮಾನ ಮಾಡಿದ ಪ್ರಕರಣಗಳಿವೆ. ಅನಿವಾರ್ಯವಾಗಿ ಈ ಪದ್ಧತಿ ಉಳಿಯುವಂತೆ ಮಾಡುವ ಷಡ್ಯಂತ್ರವೆಂದರೆ ದೇವದಾಸಿಯಾದವಳು ಮದುವೆ ಮಾಡಿಕೊಂಡು ಸಂಸಾರಸ್ಥೆಯಾಗುವಂತಿಲ್ಲ. ಹಾಗೇನಾದರೂ ಆದರೆ ಯಲ್ಲಮ್ಮ ಶಾಪ ಕೊಡು ವಳು ಎಂಬ ನಂಬಿಕೆ ಗಟ್ಟಿಕೊಳಿಸಲಾಗಿದೆ. ದೇವದಾಸಿಯೊಬ್ಬಳ ಮನೆಯಲ್ಲಿ ವಿದ್ಯಾವಂತ ತಮ್ಮಂದಿರರು ಅವಳನ್ನು ದೇವದಾಸಿಯಾಗಿಸಿದ್ದನ್ನು ತೀವ್ರ ವಿರೋಧಿಸಿರುವರು. ಹೀಗಾಗಿ ಅವಳು ಇತರೆ ದೇವದಾಸಿಯರಂತೆ ಹೊರಗೆ ಲೈಂಗಿಕ ಸಂಬಂಧ ಬೆಳೆಸುವಂತಿಲ್ಲ. ಮದುವೆಯಾದರೆ ದೇವಿ ಶಾಪ ಕೊಡುವಳು ಎಂದು ಮನೆಯ ಹಿರಿಯರು ಜಿದ್ದು ಮಾಡುತ್ತಿರುವುದರಿಂದ ಮದುವೆಯೂ ಆಗುವಂತಿಲ್ಲ. ಈ ಎರಡರ ನಡುವೆ ಆ ಹರೆಯದ ದೇವದಾಸಿ ಒಂಟಿಯಾಗಿಯೇ ಮಧ್ಯವಯಸ್ಸಿಗೆ ತಲುಪಿರುವಳು. ಆಗೀಗ ಕೂಲಿ ಕೆಲಸದಿಂದ ದೊರೆಯುವ ಅಲ್ಪ ಹಣವೇ ಅವಳ ಸ್ವತಂತ್ರ ಆದಾಯ ಉಳಿದೆಲ್ಲದಕ್ಕೂ ಕುಟುಂಬದವರ ಮೇಲೆ ನಿರ್ಧಾರವಾಗುವ ಪರಿಸ್ಥಿತಿ ಇದೆ. ಜೀವನಕ್ಕೆ ಯಾವ ಆಧಾರವೂ ಇಲ್ಲದೆ ಕಣ್ಣೀರಿನಲ್ಲಿ ದಿನ ದೂಡುತ್ತಿರುವ ಇಂಥ ಅನೇಕ ಮಹಿಳೆಯರು ಇರುವರು. ಆಸ್ತಿಯಲ್ಲಿ ಪಾಲು ಇಲ್ಲದೆ, ಖಾತ್ರಿಯ ಆದಾಯವಿಲ್ಲದೆ, ನಿತ್ಯ ನಿರಂತರ ಮೌಢ್ಯದಲ್ಲಿ ಶೋಷಣೆಗೆ ಒಳಗಾಗುತ್ತ ಬದುಕುತ್ತಿದ್ದಾರೆ ದೇವದಾಸಿಯರು.

ಇನ್ನು ಮೇಲ್ವರ್ಗ ಅಥವಾ ಸಮಾಜದ ಇತರೆ ಸಮುದಾಯ ಇವರನ್ನು ಹೇಗೆ ಕಾಣು ವುದು...? ದೇವರು ಭಕ್ತಿಯ ನಂಬಿಕೆಯನ್ನು ಉಳಿಯಲು ಇಂಥ ಪದ್ಧತಿಯನ್ನು ಹುಟ್ಟಿಸಿ ಪೋಷಿಸಿದ ಜಮೀನ್ದಾರಿ ಮತ್ತು ಪುರೋಹಿತಶಾಹಿ ಸಮಾಜವು ಇದೇ ಹೊತ್ತಿನಲ್ಲಿ ದೇವದಾಸಿ ಯರನ್ನು ಅತ್ಯಂತ ಕೀಳಾಗಿ ಕಾಣುತ್ತಿದೆ. ಅವರು ವೇಶ್ಯೆಯರೇ ಎನ್ನುವಂತೆ ಮೇಲ್ವರ್ಗದವರು ಬಿಂಬಿಸಿರುವರು. ಅವರನ್ನು ವಿರೋಧಿಸಿ ಹಾಗೂ ಗೇಲಿ ಮಾಡಿ ಅನೇಕ ಹಾಡುಗಳನ್ನು ಬರೆದು ಹಾಡಿರುವ ಉದಾಹರಣೆಗಳು ಸಿಗುತ್ತವೆ.

ಬಾಜಾರ ಬಾಜಾರ ತಿರುಗ್ಯಾರ
ಈ ಬೀದಿ ಬಸವೇರು
ಭಂಡಾರ ಬಡಕೊಂಡು ಹೊಂಟಾರ...

ಎನ್ನುವಂತೆ ಹಾಡುಗಳ ಮೂಲಕ ದೇವದಾಸಿಯರನ್ನು 'ಬೀದಿ ಬಸವಿ' ಎಂದು ಹೀಗಳೆಯ ಲಾಗಿದೆ. ಅಂದರೆ ಒಂದು ಕಡೆ ಈ ದಲಿತ ಹೆಣ್ಣು ಮಕ್ಕಳನ್ನು ಮೌಢ್ಯಕ್ಕೆ ತಾನೇ ಬಲಿ ಮಾಡಿದ ಈ ಸಮಾಜ ಇನ್ನೊಂದು ಕಡೆ ಅವರನ್ನು ತುಚ್ಛೀಕರಿಸುತ್ತದೆ, ಹೀಗಳೆಯುತ್ತದೆ, ಅಪಮಾನ ಮಾಡುತ್ತದೆ, ಅವರ ಬಗ್ಗೆ ಕಿಂಚಿತ್ತೂ ಗೌರವ ತೋರಿಸದೆ ಹೋಗುತ್ತದೆ. ಇದು ಈ ವ್ಯವಸ್ಥೆಯ ವಿಕೃತ ಮತ್ತು ಕ್ರೂರ ಮುಖ. ಅಲ್ಲದೆ ದೇವದಾಸಿಯರೊಂದಿಗೆ ಜಾತಿ ಹೆಸರಿನ ಅಸ್ಪೃಶ್ಯ ಆಚರಣೆ ಎಲ್ಲೆಡೆಯೂ ಇದೆ. ಆದ್ದರಿಂದಲೇ ದೇವದಾಸಿಯರು ತಾವೇ ರಚಿಸಿ ಹಾಡುವ ಹಾಡುಗಳನ್ನು ಗಂಭೀರವಾಗಿ ಅಧ್ಯಯನ ಮಾಡಿದಲ್ಲಿ ಅವುಗಳೊಳಗೆ ದೇವದಾಸಿ

ಮಹಿಳೆಯರ ಜೀವನದ ನೋವು-ನಲಿವು, ದುಃಖ, ದುಮ್ಮಾನ, ಮೌಢ್ಯ ಕಂದಾಚಾರ, ಹೀಗೆ ಎಲ್ಲವೂ ಅನಾವರಣಗೊಂಡಿದ್ದು ಕಾಣುತ್ತೇವೆ.

ತೆಲಿಯಬ್ಯಾನಿ ಘನವನಾಗ್ಯಾವೇs ಎಲ್ಲಮ್ಮ ತಾಯಿ
ತೆಲಿಯಬ್ಯಾನಿ ಘನವನಾಗ್ಯಾವೇ ಎಲ್ಲಮ್ಮ ತಾಯಿ

ತೆಲಿಯ ಮ್ಯಾಲೆ ಕೊಡವ ಹೊರಸ್ಯಾರೆ ಎಲ್ಲಮ್ಮ ತಾಯಿ
ಹಣೆಯಬ್ಯಾನಿ ಘನವನಾಗ್ಯಾವೇ ಎಲ್ಲಮ್ಮ ತಾಯಿ

ಎಂಬ ಹಾಡು ಅತ್ಯಂತ ವಿಷಾದದಿಂದ ಕೊನೆಗೊಳ್ಳುತ್ತದೆ. ಹಾಗೆಯೇ ಸಾಮಾಜಿಕ ಹಾಗೂ ಕೌಟುಂಬಿಕ ಒತ್ತಡಗಳಿಗೆ ನೀಲಗಂಗಾ ಎಂಬ ಯುವತಿ ಹೇಗೆ ಬಲಿಯಾಗುತ್ತಾಳೆ ಎಂಬುದನ್ನು ಈ ಕೆಳಗಿನ ಹಾಡಿನ ಮೂಲಕ ನೋಡಬಹುದು.

ರಾಮಸ್ವಾಮಿ ನೀಲಗಂಗಾ ಹುಟ್ಟಿದಾಳ ಗುಡ್ನಕಾದರು ಬಿಡಬೇಕೊ ತಂಗಿ ರೂಪೇನ
ಊಟವಾದರು ಮಾಡವಲ್ಲಳು ಜಳಕಾಸಾದರು ಮಾಡವಲ್ಲಳು ರಾಮಸ್ವಾಮೇನ
ಬಲ್ಲೆ ಮನಗ್ಯಾಳೊ ರಾಮಸಾಲಿದಾಗೇನ

ರಾಮಸ್ವಾಮಿ ಮರಳಸ್ವಾಮಿ ಓಡಿ ಹೋಗ್ಯಾನ ಭಲ್ಲೆ
ಯಾರೇನಾಡ್ಯಾರವ್ವ ತಂಗಿ ನೀಲಗಂಗೇನ
ಯಾರೇನಂದಿಲ್ಲಣ್ಣ ಯಾರಿಗೇನ ಆಡಿಲ್ಲಣ್ಣ
ಭಲೇ ಗಂಡ ಬೇಕೋ ನನ ಜನುಮಕೇನ

ಬಿಳಿಸೀರಿ ಉಡುವ ತಂಗಿ ಸೀರಿ ಕುಬಸ ಉಡು ತಂಗಿ
ಕೂಡು ಬಾರೆ ಗದಗಿ ಮ್ಯಾಲೇನ
ಭಲ್ಲೆ ಭಂಡಾರ ಕುಡುಬಾರೆ ಭಗತರಿಗೇನೆ
ಬಿಳಿಸೀರಿ ಒಲ್ಲೆವಣ್ಣ ಬಿಳಿ ಕುಬಸ ಒಲ್ಲೆವಣ್ಣ
ಭಲೆ ಗಂಡ ಬೇಕೋ ನನ ಜನುಮಕೇನ
ಗಂಡ ಬೇಡಿದರ ತಂಗಿ ರುಂಡ ಮಾಡಿ ಕೆಡುವೇನ
ಅಲ್ಲೇ ಏನ ದಂಡ ಕೊಡುಲೇನ ರಾಮಸ್ವಾಮೀನ

ಕೇಳಿದೆನು ರಾಮಸ್ವಾಮಿ ತಂಗಿ ಆಡಿದ ಮಾತಗೋಳು
ಗುಂಡು ಬಡಿದಾಂಗಾಯ್ತು ಎದೆಯಲ್ಲೇನ
ರಾಮರ ಬಾಣ ಬಡಿದಾಂಗಾಯ್ತು ಎದೆಯಲ್ಲೇನ

ಆಚೀಗದ ಆ ಹೋಳಿ ಈಚಿಗದ ಈ ಹೊಳಿ
ಅಲ್ಲೇ ನಟ್ಟನಡುಬರಕ ಹಳ ನೀಲಗಂಗೇನ
ಹಿಡಿ ಭಂಡಾರ ಚೆಲ್ಲಣ್ಣ ಹಾಕಣ್ಣ ಮುತ್ತೀನ ಖಡೇನ
ಭಲ್ಲೇ ಹಾಕಣ್ಣ ಮುತ್ತಿನ ಖಡೇನ

ಹ್ಯಾಂಗ ಹೋಗಲೇನಣ್ಣಾ ಜೋಗಕ
ಹಸರಟ್ಟಿ ಎಲೆಮ್ಯಾಲೆ ಹಂದರಾಕೇನ
ನಿಂತ ಒಗದಾರೊ ಅಕ್ಕಿಕಾಳೇನ
ಅವರ ಬಂದ ಒಗದಾರೋ ಅಕ್ಕಿಕಾಳೇನ

ಆಚೀಗದ ಆ ಹೊಳೆ ಈಚಿಗದ ಈ ಹೊಳೆ
ಅಲ್ಲೇ ನಟ್ಟನಡುಬರಕ ಹಳ ನೀಲಗಂಗೇನ
ಅಲ್ಲೇ ಗುಡ್ನಕ ಬಿಟ್ಟರೋ ತಂಗಿ ರೂಪೇನ

ಈ ಸಮಾಜವು ಮಹಿಳೆಯು ದಲಿತಳಾದರೇನು, ದೇವದಾಸಿಯಾದರೇನು, ಮೇಲ್ಜಾತಿ-ಮೇಲ್ವರ್ಗವಾದರೇನು ಎಲ್ಲರನ್ನೂ ಕಾಡಿ ನೋಡಿದೆ ಎಂಬುದು ದೇವದಾಸಿಯರ ಹಾಡುಗಳಲ್ಲಿ ವ್ಯಕ್ತವಾಗಿವೆ. ಬಂಜೆ ಹೊಂಟಾಳೆಂದು ಹಾಡು ಮಕ್ಕಳನ್ನು (ಮಗುವನ್ನು) ಪಡೆಯಲು ಎಲ್ಲಮ್ಮ ಪಟ್ಟ ಪಾಡು. ಶಿವನನ್ನು ಕಾಡಿ-ಬೇಡಿ, ಸಪ್ತ ಸಮುದ್ರ ದಾಟಿ, ಕಡೆಗೂ ಫಲವೊಂದನ್ನು ಪಡೆಯುತ್ತಾಳೆ. ಬಂಜಿ ಹೊಂಟಾಳಂತ ಬಾಗಿಲು ಹಾಕಿದ್ದು, ಬಾಜಾರದಾನ ಮಂದಿ ಬಂಜಿ ಹೊಂಟಾಳಂತ ಬಯಲಾಗಿ ದೂರ ಸರಿದಿದ್ದು ಎಲ್ಲಮ್ಮನ ಎದೆಯಲ್ಲಿ ನೋವಿನ ಕಡಲು ತರುತ್ತದೆ. ಬಂಜೆಂಬ ಅವಮಾನ ಎಂಥ ಕ್ರೌರ್ಯದ್ದು ಎಂದರೆ. ಬಂಜೆಂಬ ಪಟ್ಟ ಬಂಧನದ ಬಿಡುಗಡೆಗೆ ಅವಳು ತಹ ತಹಿಸುತ್ತಾಳೆ. ಕರುಳಿನ ಕುಡಿಯೊಮ್ಮೆ "ಮುಂಜಾನೆ ಹುಟ್ಟಿ ಸಂಜಿಗಿ ಸಾಯಲಿ, ಬಂಜೆಂಬ ಶಬುದ ಬಿಡಿಸಯ್ಯ ಶಿವನೆ" ಎಂದು ಕರುಳು ಕಲ್ಲಾಗಿ ದಯನೀಯವಾಗಿ ಸೆರಗೊಡ್ಡಿ ಬೇಡುತ್ತಾಳೆ. ಅಂದರೆ ದೇವದಾಸಿಯಾದರೇನು ಅವಳಿಗೆ ಬಂಜೆತನದ ಹೆಸರಲ್ಲಿ ಅವಮಾನಿಸುವ ಸಮಾಜದ ನಂಬಿಕೆಯು ಅನೇಕ ಹಾಡುಗಳಲ್ಲಿ ಅನುರಣನಗೊಂಡಿದೆ. ಮಕ್ಕಳಾಗದ ದೇವದಾಸಿಯರ ಜೀವನ ಈಗಲೂ ಅತ್ಯಂತ ಅಸಹನೀಯವಾಗಿದೆ.

ಹೀಗೆ ಅನಕ್ಷರತೆ, ಅಜ್ಞಾನ, ಮೌಢ್ಯ, ಕಂದಾಚಾರ, ಭಕ್ತಿಯ ಹೆಸರಿನ ಭಯಗಳ ನಡುವೆ ದೇವದಾಸಿಯರು ರೌರವ ನರಕದ ಬದುಕನ್ನು ಬಾಳುತ್ತಿದ್ದಾರೆ. ಈ ಎಲ್ಲಾ ಷಡ್ಯಂತ್ರಗಳನ್ನು ಅರಿಯಲು ಬೇಕಾದ ಅರಿವು, ಆರ್ಥಿಕ ಉತ್ಪಾದನೆಯಲ್ಲಿನ ಅವಳ ಪಾಲು ಅವಳಿಗಿಲ್ಲ. ಉತ್ಪಾದನೆಯಲ್ಲಿ ಅವಳ ಶ್ರಮ ಇದೆ. ಅದಕ್ಕೆ ಪ್ರತಿಫಲ ಬಡತನ, ಭೂಹೀನತೆ ಅವಳ ಜೊತೆಯಾಗಿವೆ.

## ಕರ್ನಾಟಕದಲ್ಲಿ ದೇವದಾಸಿ ಪದ್ಧತಿ

ಕರ್ನಾಟಕದಲ್ಲಿಯೂ ಅತ್ಯಂತ ಪ್ರಾಚೀನ ಕಾಲದಿಂದಲೂ ವ್ಯಾಪಕವಾಗಿ ದೇವದಾಸಿ ಪದ್ಧತಿ ಚಾಲ್ತಿಯಲ್ಲಿರುವುದಕ್ಕೆ ಅನೇಕ ಉಲ್ಲೇಖಗಳು ಸಿಗುತ್ತವೆ. ಇದೊಂದು ಜಾಗತಿಕ ಸಮಸ್ಯೆಯಾಗಿ ಬೆಳೆದು ನಿಂತಿದೆ. ಕರ್ನಾಟಕದಲ್ಲಿ ಅನಾದಿ ಕಾಲದಿಂದಲೂ ವೇಶ್ಯಾವೃತ್ತಿ ಅಸ್ತಿತ್ವದಲ್ಲಿದೆ. ದೇವದಾಸಿಯರು ಈ ವೃತ್ತಿಯ ಒಂದು ಭಾಗವಾಗಿದ್ದಾರೆ. "ಆಲನಹಳ್ಳಿಯಲ್ಲಿ ದೊರೆತ ಕ್ರಿ.ಶ. ೧೧೧೩ರ ಶಾಸನದಲ್ಲಿ 'ದೇವದಾಸಿ' ಪದದ ಉಲ್ಲೇಖವಿದೆ. ಈ ಪದದ ಉಲ್ಲೇಖವಿರುವ

ಅತ್ಯಂತ ಪ್ರಾಚೀನ ಶಾಸನ ಇದಾಗಿದೆ."[9] ಅದಕ್ಕಿಂತ ಹಿಂದಿನ ಶಾಸನಗಳಲ್ಲಿ ವೇಶ್ಯೆಯರನ್ನು 'ಸೂಳೆ' ಎಂದು ಹೇಳಲಾಗಿದೆ. ಅನೇಕ ಕನ್ನಡ ಕಾವ್ಯಗಳಲ್ಲಿ 'ರಾಣಿವಾಸ', 'ಪೆಂಡವಾಸ', 'ಪೆಂಡ ವಾಸದ ಸೂಳೆಯರು', 'ವರವಧು', 'ಗಣಿಕೆ' ಮುಂತಾದ ಶಬ್ದಗಳು ಸೂಳೆ ಪದಕ್ಕೆ ಪರ್ಯಾಯ ವಾಗಿ ದೊರೆಯುತ್ತವೆ.

ದೇವತೆಗಳಿಗೆ ಸೇವೆ ಸಲ್ಲಿಸುವ ಅಂಗಭೋಗ ಹಾಗೂ ರಂಗಭೋಗದ ಕುರಿತು ಕರ್ನಾಟಕದ ಶಾಸನಗಳಲ್ಲಿ ದಾಖಲೆಗಳಿವೆ. ದೇವಾಲಯದಲ್ಲಿಯ ಪ್ರತಿಮೆಗಳಿಗೆ ಸ್ನಾನ ಮಾಡಿಸಿ, ಸುಗಂಧ ದ್ರವ್ಯ ಸಿಂಪಡಿಸಿ, ಹೂ ಹಾರಗಳಿಂದ ಅಲಂಕರಿಸಿ, ಜ್ಯೋತಿ ಕರ್ಪೂರಗಳನ್ನು ಬೆಳಗಿಸಿ, ನೈವೇದ್ಯ ಹಿಡಿದು ಸಮರ್ಪಿಸಿ ಮಾಡುವ ದೇವರ ಕ್ರಿಯೆಯೇ ಅಂಗಭೋಗವೆಂದಾಯಿತು. ನೃತ್ಯ ಹಾಗೂ ಸಂಗೀತಗಳಿಂದ ದೇವತೆಗೆ ತೃಪ್ತಿಪಡಿಸುವುದು ರಂಗಭೋಗವಾಯಿತು. ಒಟ್ಟಾರೆಯಾಗಿ ದೇವಾಲಯದ ಸೇವಕಿಯನ್ನು ದೇವದಾಸಿ ಎಂದು ಗುರುತಿಸಲ್ಪಟ್ಟಿತು. 'ದೇವದಾಸಿ' ಎಂದರೆ ಸಾಮಾನ್ಯ ಅರ್ಥದಲ್ಲಿ ದೇವರ ಸೇವೆಗೆ ತನ್ನನ್ನು ತಾನು ಅರ್ಪಿಸಿಕೊಂಡವಳು ಎಂಬರ್ಥ ಬರುತ್ತದೆ. ಆದರೆ ದೇವರ ಸೇವೆಯ ನೆಪದಲ್ಲಿ ದೇವದಾಸಿಯರನ್ನು ಭೋಗಿಸಲು ಅನುಕೂಲ ವಾಗುವಂತೆ ನಿಯಮಗಳನ್ನು ಮಾಡಿದ "ಗ್ರಾಮದ ಮುಖಂಡನೇ ಗಾವುಂಡ. ಆತನೇ ಗೌಡ ನಾದದ್ದು ಗೌಡನ ಆದೇಶದಂತೆ ಅವನ ಸುಖಕ್ಕಾಗಿ ಗ್ರಾಮದೇವತೆಯ ಪೂಜಾರಿ, ಬಡಹೆಣ್ಣು ಮಕ್ಕಳನ್ನು ಬಸವಿಯನ್ನಾಗಿ ಬಿಡುವಂತೆ, ನಗರ ಜೀವನ ಬಂದಾಗ ಅಲ್ಲಿಯ ಪೂಜಾರಿ. ಆಡಳಿತಾ ಧಿಕಾರಿಗಳ, ಊಳಿಗಮಾನ್ಯದವರ ಪ್ರೀತ್ಯರ್ಥವಾಗಿ ದೇವರ ಹೆಸರಿನಲ್ಲಿ ದೇವದಾಸಿಯರನ್ನು ಹುಟ್ಟು ಹಾಕಲಾಗಿದೆ."[10]

ಈ ಹಿನ್ನೆಲೆಯಲ್ಲಿ ಗ್ರಾಮದೇವತೆಗಳಿಗೂ ದೇವದಾಸಿ ಪದ್ಧತಿಗೂ ಇರುವ ನಂಟನ್ನು ಅರಿತು ಕೊಂಡಾಗ ಇದರ ಹಿಂದಿರುವ ಸಮಸ್ಯೆಯ ಎಳೆಗಳನ್ನು ಬಿಡಿಸಲು ಸಾಧ್ಯವಾಗುತ್ತದೆ. ಗ್ರಾಮ ದೇವತೆಗಳಲ್ಲಿ ಒಬ್ಬಳಾದ ಎಲ್ಲಮ್ಮನ ಹೆಸರಿನಲ್ಲಿ ಹುಟ್ಟಿಕೊಂಡ ಈ ದೇವದಾಸಿ ಪದ್ಧತಿಯ ಮೇಲೆ ಹುಟ್ಟಿಕೊಂಡಿರುವ ಅನೇಕ ಮೌಢ್ಯಗಳ ಹಿಂದಿರುವ ಆತಂಕಕಾರಿ ಸಂಗತಿಗಳನ್ನು ಹೊರಹಾಕಿ ಅಂಧಶ್ರದ್ಧೆಯಿಂದ ಜನರನ್ನು ಹೊರತರಬೇಕಿದೆ.

## ಕರ್ನಾಟಕದಲ್ಲಿ ಎಲ್ಲಮ್ಮ ಸಂಪ್ರದಾಯದ ದೇವತೆಗಳು

ಮಾನವ ಮೂಲತಃ ನಿಸರ್ಗದ ಕೂಸು. ಗೆಡ್ಡೆ ಗೆಣಸು ತಿಂದು ಅಲ್ಲಿಯೇ ಹರಿಯುವ ಹೊಳೆ, ಹಳ್ಳಗಳ ನೀರು ಕುಡಿದು ಪ್ರಕೃತಿಯ ವೈಚಿತ್ರ್ಯಗಳಾದ ಮಳೆ, ಚಳಿ, ಬಿಸಿಲು, ಬಿರುಗಾಳಿ, ಭೂಕಂಪ, ಸಿಡಿಲು, ಗುಡುಗು, ಮಿಂಚು ಇವುಗಳೊಂದಿಗೆ ಹೋರಾಡುತ್ತಾ ಬದುಕುತ್ತಿದ್ದ. ಆಗ ಮಾನವನಿಗೆ ಯಾವುದೇ ಸಂಸ್ಕೃತಿ, ಧರ್ಮ ಇರಲಿಲ್ಲ. ಕಾಲಾನುಕ್ರಮದಲ್ಲಿ ಅಲೆಮಾರಿ ಯಾದ ಮಾನವ ಒಂದೆಡೆ ನೆಲೆನಿಲ್ಲಲು ಆರಂಭಿಸಿದ. ತನ್ನ ರಕ್ಷಣೆಗಾಗಿ ಪೊಟರೆಗಳನ್ನು ಆಶ್ರಯಿಸಿದ. ಕ್ರಮೇಣ ದನ, ಕುರಿ ಸಾಕಿ ವ್ಯವಸಾಯ ಆರಂಭಿಸಿದ. ಹೀಗೆ ನಿಸರ್ಗದ ಏರುಪೇರು ಗಳಿಗೆ ಹೆದರುತ್ತಾ ಭಕ್ತಿಯಿಂದ ಕೈಮುಗಿದು ಅದಕ್ಕೆ ಶರಣಾಗತನಾದ. ಪ್ರಕೃತಿಯಲ್ಲಿ ತನಗಿಲ್ಲದ ಯಾವುದೋ ಒಂದು ಅದ್ಭುತ ಶಕ್ತಿ ಅಡಗಿದೆ ಎಂದು ಭಯದಿಂದ ಆ ಶಕ್ತಿಯನ್ನು ಆರಾಧಿಸಲು

ಮತ್ತು ಅದನ್ನು ಒಲಿಸಿಕೊಳ್ಳಲು ಹವಣಿಸಿದ. ಹೀಗೆ ಭಯವೇ ದೈವದ ಮೂಲವಾಯಿತು. ಪ್ರಕೃತಿ ವಿಕೋಪ ಉಂಟಾದಾಗ ತನ್ನಲ್ಲಿರುವುದನ್ನು ದೈವಕ್ಕೆ ಕೊಟ್ಟು, ಸಂತೃಪ್ತಿಪಡಿಸಲು ಪ್ರಯತ್ನಿಸಿದ. ಹೀಗೆ ಪ್ರಕೃತಿಯೊಂದಿಗಿನ ಸಂಘರ್ಷ ನಿರಂತರವಾಗಿ ಸಾಗುತ್ತಾ ಮಾನವ ನಂಬಿಕೆಗಳೇ ದೇವರು-ಧರ್ಮದ ಉಗಮಕ್ಕೆ ಕಾರಣವಾದವು. ಸಂಸ್ಕೃತಿಯ ಬೆಳವಣಿಗೆಯೊಂದಿಗೆ ಅನೇಕ ದೇವತೆಗಳು ಉದ್ಭವವಾದರು. ಸೂರ್ಯ, ಚಂದ್ರ, ನದಿ, ಆಕಾಶ, ತಾರೆ, ಗಿಡ, ಮರ, ಬಳ್ಳಿ, ಪ್ರಾಣಿ, ಪಕ್ಷಿ ಎಲ್ಲವುಗಳಲ್ಲಿ ದೈವತ್ವವನ್ನು ಕಾಣಲು ಆರಂಭಿಸಿದ. ಅದರೊಂದಿಗೆ ನಂಬಿಕೆ ಎನ್ನುವುದು ಪ್ರಬಲವಾಗಿ ಬೆಳೆಯುತ್ತಾ ಲಾಭ-ನಷ್ಟಗಳಿಗೆ ತಮ್ಮದೇ ಆದ ಕಾರಣಗಳನ್ನು ಕೊಡುತ್ತಾ ದೇವತಾರಾಧನೆಯನ್ನು ಆರಂಭಿಸಿದ.

ಪ್ರಕೃತಿ ಪೂಜಕರಾಗಿದ್ದ ಅಲೆಮಾರಿ ಮಾನವರು ಒಂದೆಡೆ ನೆಲೆನಿಂತಾಗ ಗ್ರಾಮಗಳು ರಚನೆಯಾದವು. ಸಾಂಘಿಕ ಬದುಕು ಆರಂಭಿಸಿದರು. ಈ ಸಂದರ್ಭದಲ್ಲಿಯೇ ಮೂಲ ನಿವಾಸಿಗಳಲ್ಲಿಯೇ ಆಸ್ತಿ ಮತ್ತು ಸಂಪತ್ತಿನ ಮೇಲೆ ಹಿಡಿತವನ್ನು ಹೊಂದುವ ಆಕಾಂಕ್ಷೆ ಇರುವ ಒಂದು ಸಣ್ಣ ಸಮುದಾಯ ಹುಟ್ಟಿಕೊಂಡಿತು. ಜನರ ಮೇಲೆ ಹಿಡಿತ ಸಾಧಿಸಲು ಇವರು ಧರ್ಮವನ್ನು ಬಳಸಿಕೊಂಡರು. ಭಯ ಭಕ್ತಿಯಿಂದ ಶಕ್ತಿದೇವತೆಗಳನ್ನು ಸೃಷ್ಟಿಸಿಕೊಂಡಂತೆ ತನ್ನ ಲಾಭಕ್ಕಾಗಿ ಗ್ರಾಮದೇವತೆಗಳನ್ನು ಸೃಷ್ಟಿಸಿಕೊಂಡರು. ಸಮಾಜ ಹೊಸ ಹೊಸ ಅವಸ್ಥೆಗಳನ್ನು ಕಂಡುಕೊಂಡಿತು. ಊಳಿಗಮಾನ್ಯ ಪದ್ಧತಿಯ ಯಜಮಾನನೊಬ್ಬ ಅವರ ಮಧ್ಯದಿಂದಲೇ ಹುಟ್ಟಿ ಬೆಳೆದು ಧರ್ಮಾಧಿಪತಿಯ ಸ್ವರೂಪ ಪಡೆದ. ಗ್ರಾಮಜೀವನದಲ್ಲಿ ಒಂದೆಡೆ ಇವನು ಪೂಜಾರಿಯಾದ. ಮತ್ತೊಂದೆಡೆ ಆರ್ಥಿಕ ಸಮೃದ್ಧಿ ಪಡೆದು ಉನ್ನತ ಮಟ್ಟಕ್ಕೇರಿ ಊರನ್ನಾಳುವ ಪ್ರಭುವಾದ. ಯಾವುದೇ ವಿಜ್ಞಾನ ತಂತ್ರಜ್ಞಾನ, ಅಕ್ಷರ ಜ್ಞಾನ ಇಲ್ಲದ ಆ ಹೊತ್ತಿನಲ್ಲಿ ಆಸ್ತಿ ಮತ್ತು ಸಂಪತ್ತಿನ ಮೇಲೆ ಹಿಡಿತವಿರುವವರ ಷಡ್ಯಂತ್ರಗಳನ್ನು ಅರಿಯಲು ಸಾಮಾನ್ಯ ಜನರಿಗೆ ಸಾಧ್ಯವಾಗಲಿಲ್ಲ. ಆರ್ಥಿಕ ಸಮೃದ್ಧಿ ಹೊಂದಿದ ವ್ಯಕ್ತಿ ಸಾಮಾನ್ಯ ಜನತೆಯ ಮುಗ್ಧತೆಯನ್ನೇ ಬಳಸಿಕೊಳ್ಳುವ ಹುನ್ನಾರಗಳು ಇವತ್ತಿಗೂ ಕಾಣುತ್ತೇವೆ. ಆ ದಿನಗಳಲ್ಲಂತೂ ಅವನ ಯೋಜನೆಗೆ ಪೂರಕವಾಗಿ ಒದಗಿ ಬಂದದ್ದು ನಿಸರ್ಗ ಸಹಜವಾದಿ ಅತಿವೃಷ್ಟಿ. ಅನಾವೃಷ್ಟಿ ಮುಂತಾದ ಅವಘಡಗಳು. ಅಂದರೆ ಬಿರುಗಾಳಿ, ಆಲಿಕಲ್ಲುಮಳೆ, ಭೂಕಂಪ, ಜ್ವಾಲಾಮುಖಿ ಮುಂತಾದವುಗಳಿಂದ ಆತ ಜರ್ಜರಿತನಾದ. ಅಲ್ಲದೆ ಮೃತ್ಯುಕೂಪಕ್ಕೆ ಒಯ್ಯುವ ರೋಗರುಜಿನಗಳು ಸಿಡುಬು, ಮಾರಿಬೇನೆ, ಪ್ಲೇಗು, ಕಾಲರಾ ಮುಂತಾದ ರೋಗಗಳಿಗೆ, ಘಟನಾವಳಿಗಳಿಗೆ ಅರ್ಥೈಸಿಕೊಳ್ಳುವಂಥ ಶಕ್ತಿ ಇವನಲ್ಲಿರಲಿಲ್ಲ. ಜನತೆ ಭಯ, ಗಾಬರಿ, ಮೌಢ್ಯ, ಮುಗ್ಧತೆಗಳಿಂದಲೇ ಇವುಗಳನ್ನು ಎದುರಿಸಬೇಕಾಗಿತ್ತು. ಈ ಸ್ಥಿತಿಯನ್ನು ಬಳಸಿಕೊಂಡು ಪಾಳೇಗಾರರು ಅರ್ಥಾತ್ ಸಂಪತ್ತಿನ ಒಡೆಯರು ಕಾಣದ ಶಕ್ತಿಯ ಅಸ್ತಿತ್ವವನ್ನು ಕುರಿತು ನಂಬಿಸಿದರು. ಆ ನಂಬಿಕೆಯನ್ನು ಮತ್ತಷ್ಟು ಸ್ಫುಟಗೊಳಿಸಿ ದೇವರ ಸ್ವರೂಪ ಕೊಟ್ಟರು. ಈಗಾಗಲೇ ತಮ್ಮ ಬದುಕಿಗೆ ಅದರಲ್ಲಿಯೂ ಹೊಟ್ಟೆ ತುಂಬಿಸಿಕೊಳ್ಳಲು ನೆರವಾದ ಪಶು, ಪಕ್ಷಿ, ಗಿಡ, ಮರ ಸಸ್ಯಗಳನ್ನು ಆರಾಧಿಸುತ್ತಿದ್ದರು. ವರ್ಷಕ್ಕೊಂದಾವರ್ತಿ ಅದರ ಪ್ರತಿರೂಪವನ್ನು ಮಾಡಿ ಪೂಜಿಸುತ್ತಿ

ದ್ದರು. ನಂತರ ಬಲಿಕೊಡುವ ಸಂಪ್ರದಾಯ ಬೆಳೆಯಲು ಅನೇಕ ಬುಡಕಟ್ಟು ಸಮುದಾಯದವರು ತಮ್ಮ ಹೊಟ್ಟೆ ತುಂಬಿಸುವ ಜೀವರಾಶಿಗಳಲ್ಲೊಂದನ್ನು ಕುಲದೇವತೆ ಅಥವಾ ಮನೆದೇವತೆಯನ್ನಾಗಿ ಮಾಡಿಕೊಂಡರು. ಈ ಹೊತ್ತಿನಲ್ಲಿ ಆಸ್ತಿಗೆ ಒಡೆಯರಾಗಬೇಕೆಂಬ ಗುಂಪು ಜನರ ದೇವತೆಯ ನಂಬಿಕೆಯನ್ನು ಇನ್ನಷ್ಟು ಗಟ್ಟಿಗೊಳಿಸಿತು ಮತ್ತು ಈ ನೈಸರ್ಗಿಕ ಅವಘಡಗಳೆಲ್ಲದಕ್ಕೂ ಆ ನಂಬಿಕೆಯ ಭಾಗವಾಗಿರುವ ದೇವರು ಕಾರಣ ಎಂಬುದನ್ನು ನಂಬಿಸಿ ಅಂತರ್‌ಸಂಬಂಧ ಕಲ್ಪಿಸಿದರು. ಇದನ್ನೇ ಮುಂದುವರೆಸಿಕೊಂಡು ಸ್ಥಳೀಯ ದೇವರು ಹಾಗೂ ದೇವಾಲಯ ನಿರ್ಮಾಣ ಆರಂಭವಾಯಿತು. ಭಯ ಭಕ್ತಿಯನ್ನು ಜನತೆಯಲ್ಲಿ ಮೂಡಿಸಿ ಅವರನ್ನು ದೇವಾಲಯದತ್ತ ಸೆಳೆಯಲಾಯಿತು.

ಈ ಹಿನ್ನೆಲೆಯಲ್ಲಿಯೇ ಊರು ಬೆಳೆದಂತೆ ತನ್ನ ಸುಖ-ಶಾಂತಿ-ಸಮೃದ್ಧಿಗಳಿಗಾಗಿ ಮರಗಮ್ಮ, ದುರಗಮ್ಮ, ಕಾಳಮ್ಮ, ಚೌಡಮ್ಮ, ಪಾಲಕಮ್ಮ, ದ್ಯಾಮವ್ವ, ಎಲ್ಲಮ್ಮರನ್ನು ಸ್ಥಾಪಿಸಿದರು. ಇವರನ್ನು ಜನಪದರು ಏಳು ಮಂದಿ ಅಕ್ಕತಂಗಿಯರೆಂದೇ ಕರೆಯುತ್ತಾರೆ. ಶಿಷ್ಟರು ಇವರನ್ನು ಬ್ರಹ್ಮಿ, ಮಹೇಶ್ವರಿ, ವೈಷ್ಣವಿ, ಕುಮಾರಿ, ಇಂದ್ರಾಣಿ, ವರಾಹಿ ಮತ್ತು ಚಾಮುಂಡಿ ಎಂಬ ಸಪ್ತಮಾತೃಕೆಯರು ಎಂದು ಕರೆದಿದ್ದಾರೆ.

**೧. ಮರಗಮ್ಮ ಅಥವಾ ಮಾರಮ್ಮ**: ಈಕೆಯು ರೋಗರುಜಿನ, ಸಾವುನೋವುಗಳುಂಟಾದಾಗ ಜನರನ್ನು ರಕ್ಷಿಸಲೆಂದೇ ಹುಟ್ಟಿದ ದೇವತೆ. ಆದಿಮಾನವ ಪೂಜಿಸುತ್ತಿದ್ದ ಮರವೇ ಮರದಮ್ಮನಾಗಿ ನಂತರ ಮರಗಮ್ಮನಾದಳು. ಇವತ್ತಿಗೂ ಹಳ್ಳಿಗರು ಮರಗಮ್ಮನನ್ನು ಮೃತ್ಯು ದೇವತೆಯೆಂದು ಕರೆದು ಹೆದರಿ ಅವಳನ್ನು ರೋಗರುಜಿನ ಬಂದಾಗ ವಿಶೇಷವಾಗಿ ನೈವೇದ್ಯ ಕೊಟ್ಟು ಪೂಜಿಸುತ್ತಾರೆ.

**೨. ದುರಗಮ್ಮ** : ಆಳುವ ವರ್ಗದವರು ಹಲವು ಊರು ಗ್ರಾಮಗಳನ್ನು ಸೇರಿಸಿ ಒಂದು ಪಟ್ಟಣವನ್ನಾಗಿಸಿ ಅದರ ರಕ್ಷಣೆಗಾಗಿ ಸುತ್ತಲೂ ಕೋಟೆಯನ್ನು ನಿರ್ಮಿಸುತ್ತಿದ್ದರು. ಆ ದುರ್ಗದ ದೇವತೆಯಾಗಿ ಇರುವವಳೇ ದುರಗಮ್ಮ. ಈಕೆ ಹೆಚ್ಚಾಗಿ ಕೋಟೆಗಳಿರುವ ಊರುಗಳಲ್ಲಿ ಮಾತ್ರ ಇರುತ್ತಾಳೆ. ಆದರೆ ಇಂದು ಕೋಟೆಗಳು ಹಾಳಾಗಿ ಬಿದ್ದು ಹೋದರೂ ದುರಗಮ್ಮನ ಪೂಜೆ ಮಾತ್ರ ಆಚರಣೆಯಲ್ಲಿದೆ.

**೩. ಕಾಳಮ್ಮ** : ಶಕ್ತಿಯ ಅವತಾರವೆಂದು ಇವಳನ್ನು ಆರಾಧಿಸುತ್ತಾರೆ. ಈಕೆ ಮೂಲತಃ ಬುಡಕಟ್ಟು ಜನಾಂಗದ ದೇವತೆಯಾಗಿದ್ದಾಳೆ. ಗ್ರಾಮದ ರಚನೆಯಾದ ನಂತರ ದುಷ್ಟಶಕ್ತಿಗಳ ನಿರ್ಬಂಧಕ್ಕಾಗಿ ಈಕೆಯನ್ನು ಹುಟ್ಟು ಹಾಕಲಾಯಿತು. ಇಂದು ವಿಶ್ವಕರ್ಮ ಎಂದು ಕರೆಸಿಕೊಳ್ಳುತ್ತಿರುವ ಪಾಂಚಾಳದವರು ಈಕೆಯನ್ನು ಆರಾಧಿಸುತ್ತಾರೆ.

**೪. ಚೌಡಮ್ಮ** : ಈಕೆಯನ್ನು ಪುರಾಣದಲ್ಲಿ ಬರುವ ವೀರಭದ್ರನ ತಂಗಿ ಎನ್ನುತ್ತಾರೆ. ಬುಡಕಟ್ಟಿನ ಜನರು ಚೇಳಿನಿಂದ ಪಾರಾಗಲು ಚೋಳಮ್ಮನೆಂಬ ದೇವತೆಯನ್ನು ಆರಾಧಿಸುತ್ತಾ ಬಂದರು. ದೇವಾಂಗದವರು ಇವಳನ್ನು ಪೂಜಿಸುತ್ತಾರೆ. ಜನಪದರ ಬದುಕಿನಲ್ಲಿ ಪ್ರತಿ ಬಾದಾಮಿ ಅಮಾವಾಸ್ಯೆಗೆ ಇವಳ ಉತ್ಸವ ನಡೆಯುತ್ತದೆ.

**೫. ಪಾಲಕಮ್ಮ ಅಥವಾ ಪೋಚಮ್ಮ :** ಕೃಷಿಕ ದಂಪತಿಗಳು ಹೊಲದ ಕೆಲಸಕ್ಕೆ ಹೋದಾಗ ಅವರ ಮಕ್ಕಳನ್ನು ಸಾಕುತ್ತಾಳೆಂಬ ನಂಬಿಕೆಯಿಂದ ಪಾಲಕಮ್ಮ ದೇವತೆಯ ಸೃಷ್ಟಿಯಾಯಿತು. "ಗ್ರೀಕರೂ ರೋಮನ್ನರೂ 'Godess Children' ಹೊಂದಿದ್ದರೆಂದು,"[೬] ವಿದ್ವಾಂಸರ ಹೇಳಿಕೆಗಳಿಂದ ತಿಳಿದು ಬರುತ್ತದೆ. "ಅಕ್ಕ ದ್ಯಾವಮ್ಮ ತಂಗಿ ಪಾಲಕಮ್ಮನನ್ನು ಕಾಣಲು ಬಂದಾಗ ಬಂಜೆ ಅಕ್ಕನ ಕಣ್ಣಿಗೆ ತನ್ನ ಮಕ್ಕಳು ಬೀಳಬಾರದೆಂದು ಪಾಲಕಮ್ಮ ಬಚ್ಚಿಟ್ಟಳು. ಆಗ ಸಿಟ್ಟಿಗೆದ್ದ ದ್ಯಾವಮ್ಮನು ಅವುಗಳಿಗೆ ಗಣಜಲು, ದೇವಿ, ಗೊಬ್ಬರ ಬಂದು ಸಾಯಲೆಂದು ಶಾಪಕೊಟ್ಟುದ್ದಕ್ಕಾಗಿ ಮಕ್ಕಳಿಗೆ ಈ ಬೇನೆ ಬರುವುದೆಂದು ಡಾ. ಚೆನ್ನಣ್ಣ ವಾಲೀಕಾರ ಅವರು ಉಲ್ಲೇಖಿಸಿದ್ದಾರೆ.

**೬. ದ್ಯಾವಮ್ಮ ಅಥವಾ ದ್ಯಾಮವ್ವ :** ಈಕೆ ಮೂಲತಃ ಕೃಷಿ ದೇವತೆ. ಅಗಸೆ ಮೂಲಕ ಊರು ಪ್ರವೇಶಿಸಿದಾಗ ಮೊದಲಿಗೆ ಕಾಣುವ ಊರ ಪ್ರಮುಖ ದೇವತೆ ದ್ಯಾವಮ್ಮ. ಸಮೃದ್ಧಿ, ಸಂತಾನದ ಆರೋಗ್ಯದಾಯಿನಿ ದೇವಿಯಾದ ಈಕೆಯ ಉತ್ಸವ ಬಿತ್ತುವಾಗ ಇಲ್ಲವೆ ಬೆಳೆ ಕೊಯಿಲಿಗೆ ಬರುವ ಸಮಯದಲ್ಲಿ ನಡೆಯುವುದು.

**೭. ಎಲ್ಲಮ್ಮ :** ಹೆಸರಿಗೆ ತಕ್ಕಂತೆ ಇವಳು ಮೂಲದಲ್ಲಿ ಸೀಮೆಯ ದೇವತೆ. ಇವಳೂ ಕೂಡ ಬುಡಕಟ್ಟು ಜನಾಂಗದಿಂದಲೇ ಹುಟ್ಟಿದವಳು. ಬುಡಕಟ್ಟು ಸಮುದಾಯಗಳು ತಮ್ಮ ತಮ್ಮ ಕ್ಷೇತ್ರದ ಎಲ್ಲೆಯನ್ನು ಗುರುತಿಸಲು ಎರಡು ಪ್ರದೇಶಗಳ ಮಧ್ಯೆ ಒಂದು ಕಲ್ಲನ್ನು ನೆಟ್ಟು, ಸೀಮೆಯನ್ನು ಗುರುತಿಸುತ್ತಿದ್ದರು. ಏಕೆಂದರೆ ಒಂದು ಬುಡಕಟ್ಟಿನವರು ಇನ್ನೊಂದು ಬುಡಕಟ್ಟಿನ ಪ್ರದೇಶದಲ್ಲಿ ಆಕ್ರಮಿಸಬಾರದು. ಬೇಟೆಯಾಡಬಾರದು ಎಂಬ ನಿಯಮಕ್ಕಾಗಿ ಕಲ್ಲನ್ನು ಹೂಳುತ್ತಿದ್ದರು. ಕ್ರಮೇಣ ಈ ಕಲ್ಲಿನ ಸುತ್ತಲೂ ಐತಿಹ್ಯ ಬೆಳೆದು ಗುಡಿ ನಿರ್ಮಾಣವಾಯಿತು. ಆರು ಜನ ಅಕ್ಕತಂಗಿಯರು ಊರಲ್ಲಿದ್ದು ಊರ ದೇವತೆಗಳಾದರೆ ಇವಳು ಊರ ಹೊರಗಿದ್ದು ಊರಿನ ಜನರ ಆರಾಧನೆಗೆ ಸಂದಳು. ಕ್ರಮೇಣ ಕೃಷಿಕನಾದ ಮಾನವ ನಾಗರಿಕ ಲೋಕಕ್ಕೆ ಬರುತ್ತಿದ್ದಂತೆ ಊರ ದೇವತೆಗಳ ಶಕ್ತಿ ಸಾಹಸಗಳನ್ನು ಈಕೆಗೂ ಆರೋಪಿಸಿ ತಮ್ಮ ಅಭಿಲಾಷೆಗಳು ಈಡೇರಿದಾಗ ಈಕೆಯ ಪೂಜೆಗಳನ್ನು ನಡೆಸುತ್ತಾ ಈಕೆಯ ಸುತ್ತಲೂ ಪುರಾಣಗಳನ್ನು ಸೃಷ್ಟಿಸಿದರು. ಬರುಬರುತ್ತಾ ಎಲ್ಲಮ್ಮ ಬರೀ ಸೀಮೆಯ ದೇವತೆಯಾಗಿ ಜನಪದರ ದೇವತೆಯಾಗಿ ಉಳಿಯಲಿಲ್ಲ. ಶಿಷ್ಟರೂ ಆಕೆಯನ್ನು ಪೂಜಿಸಲು ಆರಂಭಿಸಿ ಪೌರಾಣಿಕ ಮಟ್ಟಕ್ಕೇರಿಸಿ ಎಲ್ಲಮ್ಮನಿಗೂ ರೇಣುಕೆಗೂ ಅವಿಭಾಜ್ಯ ಸಂಬಂಧ ಕಲ್ಪಿಸಿದರು.

ಕೃತಯುಗದಲ್ಲಿ ರೇಣುಕಾ, ತ್ರೇತಾಯುಗದಲ್ಲಿ ಸೀತಾ, ದ್ವಾಪರದಲ್ಲಿ ದ್ರೌಪದಿ, ಕಲಿಯುಗದಲ್ಲಿ ಎಲ್ಲಮ್ಮಳಾಗಿರುವಳೆಂದು ಕಥೆ ಕಟ್ಟಿದರು. ಬ್ರಾಹ್ಮಣರು ರೇಣುಕಾ, ವೀರಶೈವರು ಸತ್ಯಕ್ಕ, ಜೈನರು ಪದ್ಮಾವತಿ, ಕೆಳವರ್ಗದವರು ಹುಲಿಗೆಮ್ಮ, ಸವಾರೆಮ್ಮ, ಮಾಪುರತಾಯಿ ಎಂದು ಎಲ್ಲಮ್ಮನನ್ನು ಭಿನ್ನ ಭಿನ್ನ ಹೆಸರುಗಳಿಂದ ಕರೆದು ಕಥೆಕಟ್ಟಿ, ತಮ್ಮ ಧರ್ಮದವಳೆಂಬಂತೆ ಹಾಡಿ ಹೊಗಳಿದರು. ಬಿಳಿ ಉಟಗಿ ಹಾಗೂ ಬೆತ್ತಲೆ ಸೇವೆಗಳು ಗುಲಬರ್ಗಾ ಜಿಲ್ಲೆಯ ಅಳಂದ

ತಾಲೂಕಿನ ಚುಂಚುರ ಮಾಪುರತಾಯಿಯಲ್ಲಿ. ರಾಯಚೂರ ಜಿಲ್ಲೆಯ ಮಾನ್ವಿ ತಾಲೂಕಿನ ಅರೋಲಿ ಗ್ರಾಮದ ಹುಲಿಗೆಮ್ಮನ ಉತ್ಸವದಲ್ಲಿ ಇಂದಿಗೂ ಕಾಣುತ್ತೇವೆ. ಈ ಆಧಾರಗಳಿಂದ ಎಲ್ಲಮ್ಮನು ಜೈನರ ಪದ್ಮಾವತಿ ಇರಬಹುದೆಂದು ವಿದ್ವಾಂಸರು ತರ್ಕಿಸಿದ್ದಾರೆ.

ಶೈವರು ಎಲ್ಲಮ್ಮನನ್ನು ಪಾರ್ವತಿಯ ಅಂಶದವಳೆನ್ನುತ್ತಾರೆ. ಅದಕ್ಕಾಗಿ ಆಕೆಯ ಕೊರಳಲ್ಲಿ ಲಿಂಗ, ರುದ್ರಾಕ್ಷಿ ಹಾಕಿ ಹಣೆಗೆ ವಿಭೂತಿ ಹಚ್ಚುತ್ತಾರೆ. ಅದಕ್ಕಾಗಿ ಸವದತ್ತಿ ಎಲ್ಲಮ್ಮ ಹಾಗೂ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ನಾಗಾವಿ ಎಲ್ಲಮ್ಮನ ಪೂಜಾರಿಗಳು ವೀರಶೈವ ರಾಗಿದ್ದಾರೆ.

ಬ್ರಾಹ್ಮಣರು ಎಲ್ಲಮ್ಮನ ಸಂಬಂಧ ರೇಣುಕಾದೇವಿ ಜಮದಗ್ನಿಯರ ಕಥೆ ಹೇಳುತ್ತಾ ಇವಳನ್ನು ವೈದಿಕ ಪರಂಪರೆಯ ದೇವತೆಯನ್ನಾಗಿ ಆರಾಧಿಸುತ್ತಾರೆ. ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಬಳವಡಗಿ ಎಲ್ಲಮ್ಮನ ಪೂಜಾರಿಗಳು ಬ್ರಾಹ್ಮಣರಾಗಿದ್ದಾರೆ. ಮಹಾಭಾರತ, ಭಾಗವತ, ಹರಿವಂಶ, ವಾಯುಪುರಾಣಗಳಲ್ಲಿ ರೇಣುಕೆಯ ಕುರಿತು ಕಥೆಗಳಿವೆ.

ಕರ್ನಾಟಕದಲ್ಲಿ ಎಲ್ಲಮ್ಮನ ಗುಡಿಗಳು ಪ್ರತಿ ಜಿಲ್ಲೆ ತಾಲೂಕು ಗ್ರಾಮಗಳಿಗೊಂದರಂತೆ ಇದ್ದರೂ ಪ್ರಮುಖವಾಗಿ ಎಂಟು ಆರಾಧನಾ ಕೇಂದ್ರಗಳನ್ನು ನೋಡಬಹುದು.

೧. ಸವದತ್ತಿ ಎಲ್ಲಮ್ಮ
೨. ಅರೋಲಿ ಹುಲಿಗೆಮ್ಮ
೩. ಹುಲಿಗಿ-ಮುನಿರಾಬಾದ ಹುಲಿಗೆಮ್ಮ
೪. ಚುಂಚೂರ ಮಾಪುರತಾಯಿ
೫. ಬಗದುರಿ ಎಲ್ಲಮ್ಮ
೬. ಚಂದ್ರಗುತ್ತಿಯ ರೇಣುಕಾ ಎಲ್ಲಮ್ಮ ಅಥವಾ ಗುತ್ತೆಮ್ಮ
೭. ಕೋಕಟನೂರು ಎಲ್ಲಮ್ಮ
೮. ಉಚ್ಚಂಗಿ ದುರ್ಗದ ಕೆಂಚಮ್ಮ ಅಥವಾ ಉಚ್ಚಂಗೆಮ್ಮ

ಕರ್ನಾಟಕದ ದೇವದಾಸಿ ಪದ್ಧತಿಗೆ ಕೇಂದ್ರ ಸ್ಥಾನವಾದ ಬೆಳಗಾವಿ ಜಿಲ್ಲೆಯ ಸವದತ್ತಿ ಎಲ್ಲಮ್ಮ ನಾಡಿನ ಸಮಸ್ತ ಗ್ರಾಮದೇವತೆಗಳಿಗೆ ಮೂಲವಾಗಿದ್ದಾಳೆ. ಈ ಎಲ್ಲರ ಕುರಿತಾದ ಪವಾಡ ಕಥೆಗಳು, ಆಚರಣೆ, ನಂಬಿಕೆಗಳು, ಐತಿಹ್ಯಗಳು ಬಹುಮಟ್ಟಿಗೆ ಸಮಾನವಾಗಿವೆ ಎಂಬುದನ್ನು ಇವತ್ತಿಗೂ ಪ್ರಚಲಿತದಲ್ಲಿರುವ ಎಲ್ಲಮ್ಮ ಸಂಪ್ರದಾಯದ ಹಾಡುಗಳಲ್ಲಿ ಅನೇಕ ನಿದರ್ಶನಗಳು ದೊರೆಯುತ್ತವೆ.

ಎಲ್ಲಮ್ಮ ಪುರಾಣಗಳಲ್ಲಿ ರೇಣುಕೆ ಎಂದೇ ಕರೆಯಲ್ಪಟ್ಟಿದ್ದಾಳೆ. ವಾಯು ಪುರಾಣ, ಹರಿವಂಶ, ಭಾಗವತ, ಸ್ಕಂದ ಪುರಾಣ ಮತ್ತು ಮಹಾಭಾರತಗಳಲ್ಲಿ ಈಕೆಯ ಉಲ್ಲೇಖವಿದೆ. ಇದಲ್ಲದೆ ಜನಪದ ಹಾಡುಗಳಲ್ಲಿ ಕೆಲವು ವಿಭಿನ್ನ ವಿಷಯಗಳು ದೊರೆಯುತ್ತವೆ. ಆದರೆ ಇಂದಿಗೂ ಪ್ರಚಲಿತದಲ್ಲಿ ಇರುವ ಬಹುಸಂಖ್ಯೆಯ ಎಲ್ಲಮ್ಮ ಪರಂಪರೆಯ ಹಾಡುಗಳಲ್ಲಿ ಬಂದಿರುವ ಕಥೆ ಈ ಕೆಳಗಿನಂತಿದೆ.

"ರೇಣುಕೆಯು ರೇಣುಕರಾಜನ ಮಗಳು. ಇಕ್ಷ್ವಾಕು ವಂಶದ ಅರಸನಾದ ಆತ ಭೃಗುವಂಶದ ಜಮದಗ್ನಿ ಮುನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡುತ್ತಾನೆ. ಜಮದಗ್ನಿ ಮುಂಗೋಪಿ ಹಾಗೂ ಆಕೆಗಿಂತ ವಯಸ್ಸಿನಲ್ಲಿ ತುಂಬಾ ದೊಡ್ಡವನು. ಒಂದು ದಿನ ರೇಣುಕೆಯು ಗಂಗಾ ನದಿಗೆ ನೀರು ತರಲು ಹೋಗಿ ಚಿತ್ರರಥನೆಂಬ ಗಂಧರ್ವನ ಜಲಕ್ರೀಡೆಯನ್ನು ಮೈಮರೆತು ನೋಡುತ್ತಾ ನಿಂತಾಗ ಬರುವುದು ತಡವಾಗುತ್ತದೆ. ಋಷಿ ಸಿಟ್ಟಾಗಿ ಪಾತಿವ್ರತ್ಯ ಭಂಗವಾಯಿತೆಂದು ತಲೆ ಕಡಿಯಲು ಮಕ್ಕಳಿಗೆ ಆಜ್ಞಾಪಿಸುತ್ತಾನೆ. ಅವರು ನಿರಾಕರಿಸಲು ಮಗ ಪರಶುರಾಮ ತಾಯಿಯ ತಲೆ ಕಡಿದು ಸಂತುಷ್ಟನಾದ ತಂದೆಯಿಂದ ನಾಲ್ವರು ಅಣ್ಣಂದಿರನ್ನೂ, ತಾಯಿಯನ್ನು ಬದುಕಿಸುವಂತೆ ಮಾಡುತ್ತಾನೆ". ಹೀಗೆ ದೀರ್ಘವಾಗಿ ಅವಳ ಚರಿತ್ರೆಯನ್ನು ಹೇಳುತ್ತಾ ಹೋಗುವ ಈ ಹಾಡಿನಲ್ಲಿ ಅನೇಕ ಆಧಾರಗಳು ದೊರೆಯುತ್ತವೆ.

ಹುಟ್ಟಿ ಬಂದೆ ಎಲ್ಲಮ್ಮನಾಗಿ
ನಿನ್ನ ಮದವಿ ಮಾಡಿ
ಕೊಟ್ಟಾರವ್ವ ಜಮದಗ್ನಿಗೆ
ನಿನ್ನ ತಂದೆ ರೇಣುಕರಾಜು
ನಿನ್ನ ತಾಯಿ ಭೋಗಾವತಿ
ಅವರ ಹೊಟ್ಟಿಲಿ ಹುಟ್ಟಿ ಬಂದಿ

ಎಂದು ಹಾಡು ಸಾಗುತ್ತದೆ. ಇದಲ್ಲದೆ ಎಲ್ಲಮ್ಮನನ್ನು ಆದಿಶಕ್ತಿಯ ಅವತಾರವೆಂದು ಅವಳ ಮಹಿಮೆಯನ್ನು ಸಾರುವ ಹಾಡುಗಳು ಸಾಕಷ್ಟು ಸಿಗುತ್ತವೆ.

## ಉಪಸಂಹಾರ

ದೇವದಾಸಿ ಪದ್ಧತಿಯು ಭಾರತದುದ್ದಕ್ಕೂ ಅತ್ಯಂತ ಪ್ರಾಚೀನ ಕಾಲದಿಂದಲೂ ಆಚರಿಸಿಕೊಂಡು ಬರಲಾಗುತ್ತಿದೆ ಎಂಬುದನ್ನು ಗುರುತಿಸಲಾಗಿದೆ. ಆಂಧ್ರಪ್ರದೇಶ, ತಮಿಳುನಾಡು, ಕರ್ನಾಟಕ, ಗೋವಾ, ಓಡಿಸ್ಸಾ, ಆಸ್ಸಾಂ, ಮಹಾರಾಷ್ಟ್ರ ಮುಂತಾದ ರಾಜ್ಯಗಳಲ್ಲಿ ಈ ಪದ್ಧತಿಯು ನಡೆದುಕೊಂಡು ಬರುತ್ತಿರುವುದನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆಯುತ್ತಿವೆ.

ದೇವದಾಸಿ ಪದ್ಧತಿಯ ಬಗೆಗೆ ಪಾವಿತ್ರ್ಯ, ಆಧ್ಯಾತ್ಮಿಕತೆಯನ್ನು ಶ್ರೇಷ್ಠತೆಯನ್ನು ಆರೋಪಿಸುವ ವಾದಗಳು ಇಲ್ಲದಿಲ್ಲ. ತೀರ ಪ್ರಾಚೀನ ಕಾಲದಲ್ಲಿ ಅವರಿಗೆ ಸಾಮಾಜಿಕವಾಗಿ ತುಂಬಾ ಉನ್ನತ ಸ್ಥಾನವಿತ್ತು. ಓಡಿಸ್ಸಾದ ಜಗನ್ನಾಥ ಪುರಿ ದೇವಸ್ಥಾನದಲ್ಲಿರುವ ನರ್ತಕಿಯರು, ಕೇರಳದ ಗುರುವಾಯೂರ ಕೃಷ್ಣನ ದೇವಸ್ಥಾನದ ದೇವದಾಸಿಯರು ಸಾಂಸ್ಕೃತಿಕ ರಾಯಭಾರಿತನವನ್ನು ಮೆರೆದಿದ್ದರು. ಓಡಿಸ್ಸಿ, ಕುಚುಪುಡಿ, ಭರತನಾಟ್ಯದಂಥ ಶಾಸ್ತ್ರೀಯ ನೃತ್ಯ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದರು. ಒಂದಾನೊಂದು ಕಾಲದಲ್ಲಿ ಇದೊಂದು ಉನ್ನತ ಹುದ್ದೆಯಾಗಿದ್ದು ಉನ್ನತ ವರ್ಗದ ಮಹಿಳೆಯರನ್ನು ದೇವದಾಸಿಯರನ್ನಾಗಿ ಮುಡುಪಿಡಲಾಗುತಿತ್ತು. ದೇವಸ್ಥಾನದ ರಂಗಸೇವೆಗಾಗಿ ನಿಯುಕ್ತರಾದ ಇವರು ರಾಜನರ್ತಕಿಯರಂಥ ಉನ್ನತ ಹುದ್ದೆಗಳನ್ನು ಅಲಂಕರಿಸುತ್ತಿದ್ದರು. ಇವರಿಗಾಗಿ ವಿಶೇಷ ಸೌಲಭ್ಯ, ಸ್ಥಾನಮಾನಗಳಿದ್ದವು. ಜನಸಾಮಾನ್ಯ

ರೊಂದಿಗೆ ಇವರು ಬೆರೆಯುತ್ತಿರಲಿಲ್ಲ. ಲೈಂಗಿಕ ವ್ಯವಹಾರದಿಂದ ದೂರವಿರುವ ಇವರು ದೇವರ ರಂಗಸೇವೆಗೆ ಅಂದರೆ ಹಾಡು, ನೃತ್ಯ, ಸಾಹಿತ್ಯಾದಿ ಸೃಜನ ಕಲೆಗಳಲ್ಲಿ ತೊಡಗಿರುತ್ತಿದ್ದರು. ಕನ್ನಡದ ಯುಗಪ್ರವರ್ತಕ ಕವಿಯಾದ ಹರಿಹರನ ನಂಬಿಯಣ್ಣನ ರಗಳೆಯಲ್ಲಿ ಕಾಣಸಿಕೊಳ್ಳುವ ಪರವೆನಾಚಿ, ಸಂಕಲೆನಾಚಿ ಎಂಬ ಸ್ತ್ರೀಯರನ್ನು ನೆನಪಿಸಿಕೊಳ್ಳಬಹುದು. ಈ ದೇವದಾಸಿಯರು ಧಾರ್ಮಿಕ ಮುಖಂಡರಾಗಿದ್ದು ರಾಜ್ಯಾಡಳಿತದಲ್ಲಿಯೂ ಪ್ರಧಾನ ಪಾತ್ರ ವಹಿಸುತ್ತಿದ್ದರು ಎಂಬ ಉಲ್ಲೇಖಗಳು ಇವೆ. ಶುದ್ಧ ಕಲೆಯ ಆರಾಧನಾ ಭಾಗವಾಗಿ ದೇವದಾಸಿ ಪದ್ಧತಿಯು ಇದ್ದಿರಬಹು ದಾದರೂ ದೇವಸ್ಥಾನಗಳ ಮೇಲೆ ಪುರೋಹಿತರ, ಆಳರಸರ ಹಿಡಿತ ಹೆಚ್ಚಾದಂತೆ ಈ ಸ್ತ್ರೀಯರ ಮೇಲೆ ಎಲ್ಲ ಬಗೆಯ ದೌರ್ಜನ್ಯಗಳು ಘಟಿಸಿವೆ. ದೇವಸ್ಥಾನಗಳ ಆದಾಯ ಹೆಚ್ಚಾದಂತೆ, ಭಕ್ತರ ಭಾವಾನಾತ್ಮಕ ಲೋಲುಪತೆ ತೀವ್ರವಾದಂತೆ ಆಳುವ ಪ್ರಭುಗಳು ಮತ್ತು ಪುರೋಹಿತರ ಒಪ್ಪಂದಗಳು ಏರ್ಪಟ್ಟು ದೇವದಾಸಿಯರನ್ನು ತಮ್ಮ ಲೈಂಗಿಕ ದಾಹಕ್ಕೆ ಬಲಿಯಾಗಿಸಿಕೊಳ್ಳುವುದು ಅನಾಯಾಸವಾಗಿ ನಡೆದುಕೊಂಡು ಬಂದಿದೆ. ಕಾಲ ಕಳೆದಂತೆ ವಾಸ್ತವದಲ್ಲಿ ದೇವದಾಸಿ ಎಂಬ ಪದ್ಧತಿಯೇ ಸ್ತ್ರೀಯರನ್ನು ದೇವರ ಹೆಸರಿನಲ್ಲಿ ಮುಕ್ತ ಲೈಂಗಿಕತೆಗಾಗಿ ಬಳಸಿಕೊಳ್ಳುತ್ತಿದ್ದದ್ದು ಕಂಡು ಬರುತ್ತದೆ. ದೇವದಾಸಿ ಸ್ಥಾನಮಾನ, ಅವರ ಕೈಂಕರ್ಯಗಳು ಕೀಳುಮಟ್ಟಕ್ಕೆ ಇಳಿದಂತೆ ಉನ್ನತ ವರ್ಗ, ವರ್ಣದ ಸ್ತ್ರೀಯರನ್ನು ಇದರಿಂದ ದೂರವಿಟ್ಟು ಕೇವಲ ಶೂದ್ರ, ದಲಿತ ಸ್ತ್ರೀಯ ರನ್ನು ಇದಕ್ಕಾಗಿ ಬಳಸಿಕೊಳ್ಳಲಾಯಿತು. ದೇವರು ಮತ್ತು ಧರ್ಮಗಳ ಹೆಸರಿನಿಂದಲೇ ಈ ಬಗೆಯಲ್ಲಿ ಸ್ತ್ರೀಯರನ್ನು ಇದಕ್ಕಾಗಿ ಬಳಸಿಕೊಳ್ಳುತ್ತಾ; ಅವರನ್ನು ಶೋಷಣೆಗೆ ಒಳಪಡಿಸಿದ್ದು ನಮ್ಮ ಸಾಂಸ್ಕೃತಿಕ ವಿಕೃತಿಯ ದ್ಯೋತಕವಾಗಿದೆ. ಸನಾತನ ಧರ್ಮದ ಚಾರಿತ್ರಿಕ ವ್ಯಂಗ್ಯವಾಗಿದೆ. ಪುರೋಹಿತ, ಪೂಜಾರಿ, ಆಳರಸು, ಜಮೀನ್ದಾರಿ ಪ್ರಭುಗಳು ಈ ಪದ್ಧತಿಯು ನಿಲ್ಲದಂತೆ ಮುಂದು ವರೆಸಿಕೊಂಡು ಬರಲು ಕಾರಣೀಭೂತರಾಗಿದ್ದಾರೆ. ಹೀಗಾಗಿ "ಧರ್ಮ" ಎಂಬ ಸಾಂಸ್ಥಿಕ ರಚನೆ ಗಳಲ್ಲಿಯೇ ಈ ಎಲ್ಲ ಅನಿಷ್ಠ ಬೀಜ ಅಡಕವಾಗಿರುವುದು ವಿಪರ್ಯಾಸವಲ್ಲದೆ ಮತ್ತೇನೂ ಅಲ್ಲ.

ಮೂಲತಃ ಅಲೆಮಾರಿಯಾಗಿದ್ದ ಜನಾಂಗವು ಹೊಟ್ಟೆ ತುಂಬಿಸಿಕೊಳ್ಳಲೆಂದು ಒಂದು ಕಡೆ ನೆಲೆನಿಂತದ್ದೇ ಹಲವು ಸಾಂಸ್ಥಿಕ ರಚನೆಗಳಿಗೆ ಕಾರಣವಾಯಿತು. ಉತ್ತು-ಬಿತ್ತು ಒಕ್ಕಲುತನ ಮಾಡುವುದನ್ನು ಕಂಡು ಹಿಡಿದ ಮಾನವರು ಭೂಮಿಯ ಮೇಲೆ ಒಡೆತನ ಸ್ಥಾಪಿಸಿದಂತೆ ದುಡಿಯುವ ಕೈಗಳನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ಹವಣಿಸಿದರು. ದುಡಿಯುವ ಮಾನವ ಸಂಪತ್ತಿನ ಪ್ರವರ್ತಕಳಾದ ಹೆಣ್ಣು ಕೂಡಾ ನಿಧಿಯಂತೆ ಕಾಣಿಸಿಕೊಂಡಿರಲು ಸಾಕು. ಹೀಗಾಗಿ ಭೂಮಿಯ ಮೇಲೆ ಅದಾವ ಘಳಿಗೆಯಲ್ಲಿ ಪುರುಷಲೋಕ ಹಕ್ಕು ಸಾಧಿಸಿತೋ? ಅದೇ ಹೊತ್ತಿನಿಂದಲೇ ಸ್ತ್ರೀಯರನ್ನು ತಮ್ಮ ಖಾಸಗಿ ಸಂಪತ್ತೆಂದು ಪರಿಗಣಿಸಿತು. ಉತ್ತು-ಬಿತ್ತಲು ಬೇಕಾಗುವ ಪಶು, ಪಕ್ಷಿ, ಸಲಕರಣೆಗಳು ಸ್ವತ್ತಾದಂತೆ ಸ್ತ್ರೀಯರೂ ಪುರುಷವರ್ಗದ ಅಧೀನ ಸಂಪತ್ತಾದರು. ಆದರೆ ಮಹಿಳೆಯರು ಭೂಮಿಯಂತೆ ನಿರ್ಜೀವರಲ್ಲ, ಪಶುಪ್ರಾಣಿ ಗಳಂತೆ ವಿವೇಕ ಶೂನ್ಯರಲ್ಲ. ಆದ್ದರಿಂದ ಅವರನ್ನು ಪ್ರಾಣಿಗಳಂತೆ ಹೊಡೆದು-ಬಡಿದು ಪಳಗಿಸು ವುದು ಸುಲಭವಾಗಿರಲಿಲ್ಲ. ಅಂತೆಯೇ ಸ್ತ್ರೀಯರನ್ನು ತಮ್ಮ ಮನ ಬಂದಂತೆ ದುಡಿಸಿಕೊಳ್ಳುವುದು

ಸಾಧ್ಯವಿರಲಿಲ್ಲ. ಹೀಗಾಗಿ ಅವರನ್ನು ಭಾವನಾತ್ಮಕವಾಗಿ, ಮಾನಸಿಕವಾಗಿ ನಿಯಂತ್ರಿಸುವುದು ಅನಿವಾರ್ಯವೆನಿಸಿತು. ಬೆವರು ಸುರಿಸಿ ದುಡಿಯುವ ಶ್ರಮಿಕರನ್ನು, ಮಕ್ಕಳನ್ನು ಹೊತ್ತು-ಹೆತ್ತು ಪೋಷಿಸುವ ಸ್ತ್ರೀಯರನ್ನು ಬೌದ್ಧಿಕವಾಗಿ ನಿಯಂತ್ರಿಸಲೆಂದೇ ದೇವರು, ಧರ್ಮ, ಪಾಪ-ಪುಣ್ಯ, ಸ್ವರ್ಗ-ನರಕ, ಪ್ರಾಯಶ್ಚಿತ, ಪುನರ್‌ಜನ್ಮ ಇತ್ಯಾದಿ ಭಾವಘಟಕಗಳನ್ನು ಅಭಿವೃದ್ಧಿ ಪಡಿಸಲಾಯಿತು. ಭಾರತೀಯ ಸನಾತನ ಧರ್ಮಗಳು ಲಿಂಗತಾರತಮ್ಯ ಧೋರಣೆಗೆ ಭದ್ರಬುನಾದಿ ಯನ್ನು ಹಾಕಿದವು. ವೈದಿಕ, ಜೈನ, ಬೌದ್ಧ, ಇಸ್ಲಾಂ, ಕ್ರೈಸ್ತ, ಸಿಖ್ ಮುಂತಾದ ಎಲ್ಲ ಧರ್ಮ ಗಳು ಸ್ತ್ರೀಯರನ್ನು ಒಂದಿಲ್ಲೊಂದು ಬಗೆಯಲ್ಲಿ ಪುರುಷರಿಗಿಂತ ಕಡಿಮೆ ಎಂದು ಪ್ರತಿಪಾದಿಸಿ ದವು. ತಾತ್ವಿಕ ನಿಲುವಿನಲ್ಲಿ ಸ್ತ್ರೀ-ಪುರುಷರಿಬ್ಬರನ್ನು ಸಮಾನವೆಂದು ಪರಿಗಣಿಸಿದ ಧರ್ಮಗಳು ಮತ್ತು ಅವುಗಳ ಅನುಯಾಯಿಗಳು ಆಚರಣೆಯಲ್ಲಿಯಾದರೂ ಭೇದವನ್ನು ಕಲ್ಪಿಸಿದವು. ಧರ್ಮಗಳ ತಾತ್ವಿಕತೆಗಿಂತ ಆಚರಣಾ ವಿಧಿಗಳ ಭದ್ರಬುನಾದಿಯ ಮೇಲೆ ನಿಂತಿರುವ ನಮ್ಮ ಸಾಮಾಜಿಕ ವ್ಯವಸ್ಥೆಯಂತೂ ಸ್ತ್ರೀಯರನ್ನು ತುಚ್ಛೀಕರಿಸಲೆಂದೇ ಕಟಿಬದ್ಧವಾಯಿತು. ವಿವಾಹ, ಕುಟುಂಬ, ಸಂತಾನೋತ್ಪತ್ತಿ ಇತ್ಯಾದಿ ಘಟಕಗಳನ್ನು ಸಾಮಾಜಿಕವಾಗಿ ಸಿಂಧುಕರಿಸಿ ಸ್ತ್ರೀ-ಪುರುಷರಿಬ್ಬರಿಗೂ ಬೇರೆ, ಬೇರೆ ಹಕ್ಕುಬಾಧ್ಯತೆಗಳನ್ನು ನೀಡಲಾಯಿತು. ವಿವಾಹವೆಂದರೆ ಪುರುಷನಿಗೆ ಧರ್ಮ, ಅರ್ಥ, ಕಾಮ ಮೋಕ್ಷಗಳನ್ನು ಪೂರೈಸಿಕೊಳ್ಳುವ ಸಾಧನವಾದರೆ, ಸ್ತ್ರೀ ಯರಿಗೆ ಪತಿಸೇವೆ, ಸಂತಾನೋತ್ಪತ್ತಿ, ಕೌಟುಂಬಿಕ ನಿರ್ವಹಣೆ ಇತ್ಯಾದಿಗಳನ್ನು ಪೂರೈಸುವ ಕರ್ತವ್ಯಗಳಾದವು. ಈ ಕರ್ತವ್ಯಗಳನ್ನು ಪಾಲಿಸುವುದೇ ಅವಳ ಪಾಲಿನ ಸೌಭಾಗ್ಯ. ಈ ಸೌಭಾಗ್ಯ ಕ್ಕಾಗಿಯೇ ತನ್ನನ್ನು ತಾನು ತೆಗೆದುಕೊಳ್ಳುವ ಸ್ತ್ರೀಯರು ಪೂಜ್ಯನೀಯರಾದರು.

ಸ್ತ್ರೀಯರಿಗೆ ವಿಧಿಸಲಾದ ಸಾಮಾಜಿಕ ಕರ್ತವ್ಯ ಮತ್ತು ಧಾರ್ಮಿಕ ನಂಬಿಕೆಗಳ ಕಾರಣ ವಾಗಿಯೇ ದೇವದಾಸಿ ಪದ್ಧತಿಯು ಅನೂಚಾನವಾಗಿ ಆಚರಿಸಿಕೊಂಡು ಬರಲಾಯಿತು. ರಾಜಾಧಿ ರಾಜರ ಮಹತ್ವಾಕಾಂಕ್ಷೆಯ ಮೋಹಕ್ಕೂ ಸ್ತ್ರೀಯರು ಹೆಗಲು ಕೊಡಬೇಕಾಯ್ತು. ಪುರೋಹಿತ ಪಟ್ಟಭದ್ರರ ಪಾರಮಾರ್ಥಿಕ ಸಾಧನೆಗಳಿಗೂ ಸ್ತ್ರೀಯರು ಮಾಯೆಯಾಗಿ ಬಿಂಬಿತವಾಗ ಬೇಕಾಯ್ತು. ಯುದ್ಧದಲ್ಲಿ ನಿರತರಾದ ಸೈನಿಕರಿಗೆ ದೇಹಸುಖವನ್ನು ಕೊಡಲೆಂದು ಗಣಿಕಾಸ್ತ್ರೀ ಯರು, ವಾರಾಂಗನೆಯರು, ವೇಶ್ಯೆಯರು ಬೇಕಾಯ್ತು. ಪುರಾತನ ಕಾವ್ಯ ಯುದ್ಧವರ್ಣನೆಗಳಲ್ಲಿ ವೇಶ್ಯೆಯರ ಉಪಸ್ಥಿತಿಯು ತಪ್ಪದೆ ಕಾಣಿಸಿಕೊಂಡಿರುವುದನ್ನು ಗಮನಿಸಬಹುದು. ವೇಶ್ಯಾವಾಟಿಕೆ ಗಳ ಪೂರೈಕೆಗಾಗಿ ದೇವದಾಸಿ ಪದ್ಧತಿಯು ಇನ್ನಷ್ಟು ಬಲಿಷ್ಠವಾಯಿತು. ಇದು ದೈವೀಶ್ರದ್ಧೆ ಯೊಂದಿಗೆ ತಳಕು ಹಾಕಿಕೊಂಡಿರುವುದರಿಂದ ಅದಕ್ಕೆ ಬಲಿಯಾಗುತ್ತಿರುವವರಲ್ಲಿ ಭಯ ಆವರಿಸಿಕೊಂಡಿದ್ದರೆ, ಅದನ್ನು ಪೋಷಿಸಿಕೊಂಡು ಬರುತ್ತಿರುವವರಲ್ಲಿ ಅಹಂ, ಸ್ವಯಂ ಪ್ರತಿಷ್ಠೆಯು ನೆಲೆಗೊಂಡಿತ್ತು. ಚಾತುರ್ವರ್ಣ ವ್ಯವಸ್ಥೆಯ ಉನ್ನತ ಹಂತದಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜನಾಂಗವು ಯಾವತ್ತೂ ತನ್ನ ಅಹಂ ಮತ್ತು ಪ್ರತಿಷ್ಠೆಯನ್ನು ಪೋಷಿಸಿಕೊಂಡು ಬಂದಿತು. ಹೀಗಾಗಿ ಈ ಮೇಲ್ವರ್ಗ ಸ್ತ್ರೀಯರನ್ನು ಆ ವರ್ಗದ ಪುರುಷರು ತಮ್ಮ ಸ್ವಂತಕ್ಕಾಗಿ ಮಾತ್ರ ಬಳಸಿಕೊಂಡರು. ಅವರು ಯುದ್ಧ, ಪ್ರಾಕೃತಿಕ ಅವಘಡಗಳ ಕಾರಣಗಳಿಂದ ಸಾವನ್ನಪ್ಪಿದಾಗ

ಅವರ ಹೆಂಡಂದಿರನ್ನು ಅಗ್ನಿಕುಂಡದಲ್ಲಿ ಹಾಕಿ ಸುಟ್ಟು ಸತಿಪದ್ಧತಿಯ ಪಾವಿತ್ರ್ಯ ಸಾರಿದರೆ ಹೊರತು ಉಚ್ಚ ವರ್ಣದ ಸ್ತ್ರೀಯರಿಗೆ ಪುನರ್‌ವಿವಾಹಕ್ಕೆ ಅವಕಾಶ ಕೊಡಲಿಲ್ಲ. ಮೇಲ್ವರ್ಗದ ಸ್ತ್ರೀಯರನ್ನು ವೈಧವ್ಯ. ಸತಿಪದ್ಧತಿ, ಬಹುಪತ್ನಿತ್ವಗಳಿಗೆ ಬಲಿಕೊಟ್ಟರು. ಆದರೆ ಶೂದ್ರ ಸ್ತ್ರೀಯರನ್ನು ದೈಹಿಕಸೇವೆ. ಲೈಂಗಿಕ ಕೈಂಕರ್ಯಗಳಿಗಾಗಿ ಬಳಸಿಕೊಂಡರು. ಆದ್ದರಿಂದಲೇ ಶೂದ್ರ ಸ್ತ್ರೀಯರಲ್ಲಿ ಅದರಲ್ಲೂ ದಲಿತರಲ್ಲಿ ಮಾತ್ರ ದೇವದಾಸಿ ಪದ್ಧತಿ ಕಂಡು ಬರುತ್ತದೆ. ಉನ್ನತ ವರ್ಣ ಮತ್ತು ವರ್ಗದ ಸ್ತ್ರೀಯರು ಮಧ್ಯಕಾಲೀನ ನಂತರ ದೇವದಾಸಿಯರಾದ ಉದಾಹರಣೆಗಳು ಕಂಡುಬರುವುದಿಲ್ಲ. ಒಂದಾನೊಂದು ಕಾಲದಲ್ಲಿ ಮೇಲ್ವರ್ಗದಲ್ಲಿ ದೇವದಾಸಿ ಪದ್ಧತಿಯು ಆಚರಣೆಯಲ್ಲಿದ್ದಿರಬಹುದಾದ ಸಾಧ್ಯತೆಗಳಿದ್ದರೂ ತದನಂತರದಲ್ಲಿ ಅದು ಸಂಪೂರ್ಣವಾಗಿ ನಿಮ್ನ ಜಾತಿಗಳಲ್ಲಿ ಕೇಂದ್ರೀಕೃತವಾಗಿದೆ. ಆದ್ದರಿಂದಲೇ ಮೇಲ್ವರ್ಗದ ಜನರು ದೇವದಾಸಿ ಪದ್ಧತಿಯ ಸಂಪ್ರದಾಯಕ್ಕೆ ಕಟ್ಟುಬಿದ್ದು ನಿಮ್ನ ಜಾತಿಯ ಹೆಣ್ಣು ಮಕ್ಕಳನ್ನು ಖರೀದಿಸಿ ದೇವರಿಗೆ ಬಿಟ್ಟು, ತಮ್ಮ ಹರಕೆ ತೀರಿಸಿಕೊಂಡ ಉದಾಹರಣೆಗಳು ದೊರೆಯುತ್ತವೆ. ಇವತ್ತಿಗೂ ಈ ಆಚರಣೆಯು ದಲಿತರಲ್ಲಿ ಅನುಲಂಘಿಸಲಾಗದ ವಿಧಿಯಂತೆ ಆಚರಿಸಿಕೊಂಡು ಬರಲಾಗುತ್ತಿರುವುದು ನಮ್ಮ ವ್ಯವಸ್ಥೆಯ ಬಹು ದೊಡ್ಡ ವ್ಯಂಗ್ಯವಾಗಿದೆ. ರಾಷ್ಟ್ರೀಯ ಮಹಿಳಾ ಆಯೋಗವು ತೀರ ಇತ್ತೀಚಿಗೆ ಜಂಟಿ ಮಹಿಳಾ ಸರ್ವೇಕ್ಷಣಾ ಬೆಂಗಳೂರಿನ ಅಧೀನದಲ್ಲಿ ೩೭೪ ದೇವದಾಸಿಯರನ್ನು ಸರ್ವೇ ಮಾಡಿದಾಗ ಅವರೆಲ್ಲರೂ ಹೊಲೆಯ, ಮಾದಿಗ ಮತ್ತು ಸಮಗಾರ ಜಾತಿಯಿಂದ ಬಂದವರೇ ಆಗಿದ್ದರು.

ಆಧುನಿಕೋತ್ತರ ಈ ಸಂದರ್ಭದಲ್ಲಿಯೂ ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಭಾಗಗಳಲ್ಲಿ ಈ ಸಂಪ್ರದಾಯವು ಅನೂಚಾನವಾಗಿ ಆಚರಿಸಿಕೊಂಡು ಬರಲಾಗುತ್ತಿದೆ. ಅದರಲ್ಲಿಯೂ ಉತ್ತರ ಕರ್ನಾಟಕದ ಸವದತ್ತಿ, ಚುಂಚೂರು, ಆರೋಲಿ, ಹಡಲಗಿ, ಚಂದ್ರಗುತ್ತಿ ಮತ್ತು ಮಹಾರಾಷ್ಟ್ರದ ಖಿಜುರಿ, ತುಳಜಾಪೂರಗಳಲ್ಲಿ ಈ ಪದ್ಧತಿಯನ್ನು ಕದ್ದು ಮುಚ್ಚಿ ಆಚರಿಸಿಕೊಂಡು ಬರಲಾಗುತ್ತಿದೆ. ದೇವದಾಸಿ ಸಂಪ್ರದಾಯಕ್ಕೂ ವೇಶ್ಯಾವಾಟಿಕೆಗೂ ನೇರ ಸಂಪರ್ಕ ಏರ್ಪಟ್ಟಿರುವ ಕಾರಣವಾಗಿಯೂ ಈ ಪದ್ಧತಿಯನ್ನು ಸಂಪೂರ್ಣ ನಿಲ್ಲಿಸುವುದು ಸಾಧ್ಯವಾಗುತ್ತಿಲ್ಲ. ಸ್ತ್ರೀಯರ ದೇಹ ವ್ಯಾಪಾರವು ಮುಕ್ತಮಾರುಕಟ್ಟೆಯ ಪ್ರಾಂಪ್ಟ್ ಬಂಡವಾಳವಾಗುತ್ತಿರುವ ಈ ಸಂದರ್ಭದಲ್ಲಿ ವೇಶ್ಯಾವಾಟಿಕೆಯು ನಿಯಂತ್ರಿಸಲಾಗದ ದಂಧೆಯಾಗಿದೆ.

ರಾಜಕೀಯ ಮತ್ತು ಆರ್ಥಿಕ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಮತ್ತು ಸಮಾಜದ ಮೇಲೆ ತನ್ನದೇ ನಿಲುವುಗಳ ಪಡಿಮಾಣ ಹೊಂದಲು ದೇವದಾಸಿ ಪದ್ಧತಿಯನ್ನು ಕಾಪಾಡಿಕೊಂಡು ಬಂದಿದ್ದು ಈ ನಾಡಿನ ಜಮೀನ್ದಾರಿ ಮತ್ತು ಪಾಳೇಗಾರಿ ಪಟ್ಟಭದ್ರ ಶಕ್ತಿ. ಈ ಪದ್ಧತಿಯನ್ನು ಯಾವುದೇ ಹೆಣ್ಣು ತನ್ನ ಮನಸ್ಸಿನಿಂದ ಒಪ್ಪಲಿಲ್ಲ, ತಿರಸ್ಕರಿಸುವ ಅವಳ ಬಯಕೆಯನ್ನು ನೀಲಗಂಗಾ ಹಾಡಿನಲ್ಲಿ ನೋಡಬಹುದು. ಇತರ ಗೃಹಿಣಿಯರಂತೆ ತನಗೂ ಒಬ್ಬ ಗಂಡ ಬೇಕು ಭಂಡಾರ ಬಡಕೊಂಡು, ಬಿಳಿ ಸೀರೆ ಉಟಕೊಂಡು, ಜೋಗ ಬೇಡಲು ತಾನು ಹೋಗುವುದಿಲ್ಲ ಎಂದು ಜಿದ್ದು ಮಾಡಿದ ತಂಗಿ ನೀಲಗಂಗಾಳನ್ನು ಆಕೆಯ ಅಣ್ಣ "ಗಂಡ ಬೇಡಿದರೆ

ತಂಗಿ ರುಂಡ ಕೆಡುಚೀವೇನ ಎಂದು ಹೆದರಿಸಿ ಅವಳನ್ನು ದೇವದಾಸಿಯಾಗಿಸಿದ್ದು ಹಾಡಿನಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ.

ಆಚೀಗದ ಆ ಹೊಳೆ, ಈಚೀಗದ ಈ ಹೊಳೆ
ಅಲ್ಲೇ ನಟ್ಟ ನಡುಬರಕ ಹಳ ನೀಲಗಂಗೇನ
ಅಲ್ಲೇ ಗುಡ್ಡಕ ಬಿಟ್ಟರೋ ತಂಗಿ ರೂಪೇನ

ಎಂಬ ಹಾಡು ದೇವದಾಸಿಯರ ದಾರುಣ ಬದುಕಿನ ದುರಂತವನ್ನು ಧ್ವನಿಸುತ್ತದೆ.

ಈ ತೆರನಾಗಿ ದಲಿತ ಮಹಿಳೆಯರನ್ನು ದೇವದಾಸಿ ಪದ್ಧತಿಗೆ ಬಲಿ ಮಾಡುತ್ತಿರುವ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿತ್ತು. ಆದರೆ ಜನರ ನಡುವೆ ಅಕ್ಷರದ ಅರಿವು ಹೆಚ್ಚುತ್ತ ಹೋದಂತೆ ತಮ್ಮ ಹಕ್ಕುಗಳಿಗಾಗಿ ಹೋರಾಡಲು ಸಂಘಟನೆ ಶಕ್ತಿಯನ್ನು ಬೆಳೆಸುತ್ತಿದ್ದಂತೆ ದೇವದಾಸಿ ಹಕ್ಕಿನ ಪ್ರಶ್ನೆಯೂ ಮುಂಚೂಣಿಗೆ ಬರತೊಡಗಿತು. ರಾಜ್ಯದಾದ್ಯಂತ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಲೋಕದಲ್ಲಿ ಒಂದು ಅಲೆಯು ಪ್ರವೇಶ ಪಡೆಯಿತು. ದಲಿತ ಮಹಿಳೆಯರ ಹಾಗೂ ಒಟ್ಟು ದಮನಿತರ ಅಭಿವ್ಯಕ್ತಿಯಾಗಿ ಎಂಬತ್ತರ ಸುತ್ತಮುತ್ತಲಲ್ಲಿ ದಲಿತ-ಬಂಡಾಯ, ಸಾಹಿತ್ಯ-ಸಾಂಸ್ಕೃತಿಕ ಚಳುವಳಿ ಹೊರಹೊಮ್ಮಿತು. ಚಂದ್ರಗುತ್ತಿಯ ಬೆತ್ತಲೆ ಸೇವೆ, ಪ್ರಾಣಿ ಬಲಿ ಪದ್ಧತಿ, ದೇವದಾಸಿ ಪದ್ಧತಿಯನ್ನು ತಡೆಗಟ್ಟಲು ಧ್ವನಿಯೆತ್ತತೊಡಗಿದರು. ಇದೇ ಹೊತ್ತಿನಲ್ಲಿ ರಾಜ್ಯದ ಅನೇಕ ಕಡೆ ರೈತ-ಕಾರ್ಮಿಕ ಚಳುವಳಿಗಳು ಕಾವು ಪಡೆಯ ತೊಡಗಿದವು. ಬಂಡಾಯ, ಸಮುದಾಯ ಮತ್ತು ದಲಿತ ಸಂಘರ್ಷ ಸಮಿತಿಗಳು ಚಿಂತನೆ ಮತ್ತು ಚಳುವಳಿಯ ಅಸ್ತ್ರವನ್ನು ಕೈಗೆತ್ತಿಕೊಂಡು ಬಹುಮುಖಿ ಆಯಾಮದ ಕಾರ್ಯಕ್ರಮ, ಚಳುವಳಿಯನ್ನು ಸಂಘಟಿಸಿದವು. ಈ ದಿಕ್ಕಿನಲ್ಲಿ ಮಹಿಳಾ ಸಂಘಟನೆಗಳು ಪುಟ್ಟಪುಟ್ಟ ಹೆಜ್ಜೆಯಿಡತೊಡಗಿದವು. ದಲಿತ ಮಹಿಳೆಯರ ಜೀವನದ ಪುಟಗಳನ್ನು ಸಮಾಜದ ಮುಂದೆ ಅನಾವರಣಗೊಳಿಸಲಾಯಿತು. ದೇವದಾಸಿ ಪದ್ಧತಿಯ ಹೆಸರಿನಲ್ಲಿ ನಡೆಯುತ್ತಿರುವ ಕ್ರೌರ್ಯದ ಸಂಪ್ರದಾಯವನ್ನು ಧಿಕ್ಕರಿಸುವ ಮನಸ್ಸುಗಳು ಸಂಘಟಿತವಾಗತೊಡಗಿದವು.

೧೯೮೦ರ ಹೊತ್ತಿನಲ್ಲಿ ಎಂ.ವಿ. ಪಾಟೀಲ ನೇತೃತ್ವದಲ್ಲಿ ಅಥಣಿಯಲ್ಲಿ ವಿಮೋಚನಾ ದೇವದಾಸಿ ಪುನರ್ವಸತಿ ಸಂಘವು ದೇವದಾಸಿ ಪದ್ಧತಿ ತಡೆಗೆ ಅನೇಕ ಕಾರ್ಯಕ್ರಮಗಳನ್ನು ಆಂದೋಲನಗಳನ್ನು ಹಾಗೂ ಪುನರ್ವಸತಿಯ ಭಾಗವಾಗಿ ಸಾಕ್ಷರತೆ, ಉದ್ಯೋಗ, ತರಬೇತಿಗಳು, ಶಿಶು ವಿಹಾರಗಳು, ಶಿಕ್ಷಣ ಸಂಸ್ಥೆಗಳನ್ನು ತೆರೆದು ದೇವದಾಸಿ ಪದ್ಧತಿಯನ್ನು ಹೋಗಲಾಡಿಸಲು ಶ್ರಮಿಸಿದ್ದು ಕರ್ನಾಟಕದಲ್ಲೊಂದು ದಾಖಲೆಯಾಗಿದೆ. ಹಣಕಾಸಿನ ನೆರವಿಗಾಗಿ 'ಕ್ರಿಶ್ಚಿನ್ ಚಿಲ್ಡ್ರನ್ಸ್ ಫಂಡ್' ಪಡೆದರು. ದೇವದಾಸಿ ಮಹಿಳೆಯರ ನಡುವಲ್ಲಿರುವ ಮೌಢ್ಯ ಕಂದಾಚಾರ ನಂಬಿಕೆಯನ್ನು ಹೋಗಲಾಡಿಸಿ ಜಿಡ್ಡುಗಟ್ಟಿದ ಜಡೆ ಕತ್ತರಿಸುವ, ಬಲಿ ಕೊಡುವುದನ್ನು ತಡೆಗಟ್ಟುವ ಗಂಭೀರ ಕೆಲಸ ಮಾಡಲಾಯಿತು. ಇನ್ನು ಅನೇಕ ವ್ಯಕ್ತಿ-ಶಕ್ತಿ ಸಂಘ-ಸಂಸ್ಥೆಗಳು ಈ ಬದಲಾವಣೆ ತರುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡವು.

೧೯೮೮-೮೨ರಲ್ಲಿ ಕರ್ನಾಟಕ ರಾಜ್ಯ ಸರ್ಕಾರವು ದೇವದಾಸಿ ಪದ್ಧತಿ ತಡೆ ಕಾಯ್ದೆಯನ್ನು ಜಾರಿಗೆ ತಂದಿತು ಮತ್ತು ಕ್ರಮೇಣ ಅನೇಕ ಕಾರ್ಯಕ್ರಮಗಳನ್ನು ಜಾರಿಗೊಳಿಸಲು "ದೇವದಾಸಿ ಪುನರ್ವಸತಿ ಯೋಜನೆ" ಮಾಡಿತು. ಆರ್ಥಿಕ ಸ್ವಾವಲಂಬನೆಗಾಗಿ ಸಾಲ ಕೊಡುವುದು, ಹೈನು ಗಾರಿಕೆ, ಕುರಿ-ಕೋಳಿ ಸಾಕಾಣಿಕೆ ಇತ್ಯಾದಿ ಆರ್ಥಿಕ ದೃಷ್ಟಿಕೋನದ ಅಲ್ಪ ಸಹಾಯದ ಯೋಜನೆ ಸರಕಾರದಲ್ಲಿದೆ. ಹಾಗೆಯೇ ದೇವದಾಸಿ ಪುನರ್ವಿವಾಹವೂ ಕಾರ್ಯಕ್ರಮದಲ್ಲೊಂದಾಗಿದೆ. ವೈಜ್ಞಾನಿಕ ತಿಳುವಳಿಕೆಯ ಚಟುವಟಿಕೆಗಳೂ ನಡೆಸಬೇಕೆಂದಿದೆ.

## ಗುಲಬರ್ಗಾದಲ್ಲಿ ಚಳುವಳಿ

ಅಥಣಿಯಲ್ಲಿ ವಿಮೋಚನಾ ದೇವದಾಸಿ ಸಂಘಟನೆ ಆರಂಭಗೊಳ್ಳುವ ಮೊದಲೇ ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕಿನ ಚಿಂಚನಸೂರಿನಲ್ಲಿ 'ದೇವದಾಸಿ ಮಹಿಳಾ ಕಲ್ಯಾಣ ಸಂಘಟನೆ' ಆರಂಭ ಮಾಡಲಾಯಿತು. ಈ ಸಂಘಟನೆಗೆ ಕಮ್ಯುನಿಸ್ಟರ ರೈತ ಮತ್ತು ಕೃಷಿ ಕೂಲಿಕಾರ ಸಂಘಟನೆಯೇ ಮೂಲ ಪ್ರೇರಣೆಯಾಗಿತ್ತು. ಶರಣಮ್ಮ ಎಂಬ ದೇವದಾಸಿ ಮಹಿಳೆಯ ಮಗ ಸುಧಾಮ ಧನ್ನಿ ಕಾರ್ಯದರ್ಶಿಯಾಗಿ ಭಾರತೀಬಾಯಿ ಅಧ್ಯಕ್ಷಳಾಗಿ, ಸುಶೀಲಮ್ಮ, ಪುತಳಾಬಾಯಿ ಮತ್ತಿತರರು ಪದಾಧಿಕಾರಿಗಳಾಗಿ ಸಂಘಟನೆಯನ್ನು ಅಸ್ತಿತ್ವಕ್ಕೆ ತಂದು ಅನೇಕ ಹೋರಾಟಗಳನ್ನು ನಡೆಸಿದರು. ಅದರಲ್ಲಿ ಪ್ರಮುಖವಾಗಿ ಮನೆ ನಿವೇಶನಕ್ಕಾಗಿ, ಭೂಮಿಗಾಗಿ ಚಳುವಳಿ ನಡೆಸಲಾಯಿತು. ಸಂಘಟನೆ ಮತ್ತು ಚಳುವಳಿಯ ನಿರಂತರ ಚಟು ವಟಿಕೆಯ ಕಾರಣವಾಗಿ ಅನೇಕ ದೇವದಾಸಿ ಮಹಿಳೆಯರು ಸಂಘಟನೆಯ ನೇತೃತ್ವ ವಹಿಸಿದರು. ಚುನಾವಣೆಯಲ್ಲಿ ಭಾಗವಹಿಸಿ ಗ್ರಾಮ ಪಂಚಾಯತ್ ಸದಸ್ಯರಾಗಿ ಆಯ್ಕೆಯಾದರು. ಅವರಲ್ಲಿ ಸುಶೀಲಾಬಾಯಿ ಎಂಬ ದೇವದಾಸಿ ಮಹಿಳೆಯು ಗ್ರಾಮಪಂಚಾಯತನ ಉಪಾಧ್ಯಕ್ಷಳಾಗಿ ಆಯ್ಕೆಯಾದಳು. ಇದೇ ಮಹಿಳೆಯು ತನ್ನ ಮಗನನ್ನು ಕಷ್ಟಪಟ್ಟು ಕೂಲಿ ಮಾಡಿ ದಂತ ವೈದ್ಯಕೀಯದವರೆಗೂ ಓದಿಸಿದಳು. ಸಂಘಟನೆಯ ಮೂಲಕ ತಮ್ಮ ಹಕ್ಕುಗಳಿಗಾಗಿ ನಿರಂತರ ಹೋರಾಡುತ್ತ ಬಂದ ಈ ಮಹಿಳೆಯರು ೧೯೯೪ರಲ್ಲಿ ಜನವಾದಿ ಮಹಿಳಾ ಸಂಘಟನೆ ಯಲ್ಲಿಯೂ ತೊಡಗಿದರು.

ದೇವದಾಸಿ ಮಹಿಳೆಯರ ಜಿಲ್ಲಾ ಮಟ್ಟದ ಸಮಾವೇಶವನ್ನು ೧೯೯೫ರಲ್ಲಿ ಸಂಘಟಿಸಿದ ಜನವಾದಿ ಮಹಿಳಾ ಸಂಘಟನೆಯು ದೇವದಾಸಿ ಮಹಿಳೆಯರ ಸಮೀಕ್ಷೆಗೆ ಹಾಗೂ ಅವರ ಹಕ್ಕು ಗಳ ಈಡೇರಿಕೆಗೆ ಆಗ್ರಹಿಸಿತು. ಮನೆ ನಿವೇಶನಗಳಿಗಾಗಿ ಬ್ಯಾಂಕ್ ಲೋನಿಗಾಗಿ ಹೋರಾಟ ಗಳನ್ನು ನಡೆಸಿತು. ಮಹಿಳಾ ಮಕ್ಕಳ ಕಲ್ಯಾಣ ಇಲಾಖೆಯಿಂದ ಒಂದು ಹಂತದ ಸಮೀಕ್ಷೆ ನಡೆಸ ಲಾಯಿತು. ಆದರೆ ಕರ್ನಾಟಕ ರಾಜ್ಯ ಸರಕಾರ ನಡೆಸಿದ ಎರಡು ಹಂತದ ಸಮೀಕ್ಷೆಯಲ್ಲಿಯೂ ಸೇರ್ಪಡೆಯಾಗದೆ ಇನ್ನು ಅನೇಕ ದೇವದಾಸಿಯರ ಹೆಸರುಗಳು ಬಾಕಿ ಉಳಿದಿವೆ. ಸಮೀಕ್ಷಾ ಪದ್ಧತಿ ಮತ್ತು ಸಮೀಕ್ಷೆ ನಡೆಸುವಾಗಿನ ಸಮಯ ದೋಷ ಕಾರಣದಿಂದ ಈ ಸಮಸ್ಯೆ ಉದ್ಭವ ವಾಗಿದೆ. ಅರವತ್ತು-ಎಪ್ಪತ್ತು ವಯಸ್ಸಿನ ದೇವದಾಸಿಯರ ಹೆಸರುಗಳೇ ಸಮೀಕ್ಷೆ ಪಟ್ಟಿಯಲ್ಲಿ ಸೇರ್ಪಡೆಯಾಗಿಲ್ಲ ಎಂಬುದು ಗಂಭೀರ ಸಂಗತಿ. ಕರ್ನಾಟಕ ರಾಜ್ಯ ದೇವದಾಸಿ ಮಹಿಳಾ

ಸಂಘಟನೆಯು ನಡೆಸಿದ ಹೋರಾಟದ ಕಾರಣವಾಗಿ ದೇವದಾಸಿ ಮಹಿಳೆಯರಿಗೆ ತಿಂಗಳಿಗೆ ರೂ. ೪೦೦/- ಮಾಶಾಸನ ದೊರೆಯುತ್ತಿದೆ. ಆದರೆ ಇಷ್ಟಕ್ಕೆ ಅವರ ಸಮಸ್ಯೆಗಳು ಮುಗಿಯುವುದಿಲ್ಲ. ಶಾಶ್ವತವಾಗಿ ದೇವದಾಸಿ ಪದ್ಧತಿಯನ್ನು ಕಿತ್ತೊಗೆದು, ಕರ್ನಾಟಕ ರಾಜ್ಯದ ಅರವತ್ತು ಸಾವಿರ ದೇವದಾಸಿಯರಿಗೆ ಪುನರ್ವಸತಿ ಕಲ್ಪಿಸುವ ಹೊಣೆ ಸರಕಾರ ವಹಿಸಬೇಕಿದೆ.

ದೇವದಾಸಿಯರು ರಚಿಸಿ ಹಾಡಿದ ಹಾಡುಗಳನ್ನು ಸಂಗ್ರಹಿಸಿ ದಾಖಲಿಸಬೇಕು. ದೇವದಾಸಿಯರ ಸಂಪೂರ್ಣ ಸಮೀಕ್ಷೆ ನಡೆಯಬೇಕು. ಇತ್ತೀಚೆಗೆ ಸರಕಾರವೇ ನಡೆಸಿರುವ ಸಮೀಕ್ಷಾ ಪಟ್ಟಿಯನ್ನು ಸರಕಾರ ಮಾನ್ಯ ಮಾಡಬೇಕು.

ದೇವದಾಸಿ ಮಹಿಳೆಯರಿಗೆ ತಲಾ ಎರಡು ಎಕರೆ ಉಳುಮೆ ಯೋಗ್ಯ ಭೂಮಿಯನ್ನು ವಿತರಿಸಬೇಕು ಮತ್ತು ನಿವೇಶನ ಸಹಿತ ಮನೆಗಳನ್ನು ಕನಿಷ್ಠ ಅಳತೆಯಲ್ಲಿ ವಿತರಿಸಬೇಕು. ಅವರದೇ ಸ್ವಸಹಾಯ ಸಂಘಗಳನ್ನು ರಚಿಸಿ ಉದ್ಯೋಗ ತರಬೇತಿಗಳನ್ನು ಕೊಡಬೇಕು ಹಾಗೂ ಅವರೇ ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸಬೇಕು. ಸರಕಾರ ಶೇಕಡ ೫೦ ರಷ್ಟು ರಿಯಾಯಿತಿಯೊಂದಿಗೆ ಸಾಲ ಸೌಲಭ್ಯ ಕಲ್ಪಿಸಬೇಕು. ದೇವದಾಸಿ ಮಹಿಳೆಯರಿಗೆ ತಿಂಗಳಿಗೆ ಕನಿಷ್ಠ ೧೦೦೦ ರೂಪಾಯಿ ಮಾಶಾಸನ ಕೊಡಬೇಕು. ದೇವದಾಸಿ ಮಕ್ಕಳಿಗೆ ಓದುವಾಗ ಹಾಸ್ಟೆಲ್ ವ್ಯವಸ್ಥೆ ಕಲ್ಪಿಸಬೇಕು ಮತ್ತು ಡಿಗ್ರಿವರೆಗೂ ಉಚಿತ ಶಿಕ್ಷಣ ಕೊಡಬೇಕು. ದೇವದಾಸಿ ಮಹಿಳೆ ಮತ್ತು ಕುಟುಂಬ ಹಾಗೂ ಸಮಾಜವನ್ನು ವೈಜ್ಞಾನಿಕ ದಿಕ್ಕಿನಲ್ಲಿ ತರಲು ಕಾರ್ಯಾಗಾರಗಳನ್ನು ನಡೆಸುವುದು. ದೇವದಾಸಿ ಕೇಂದ್ರಗಳಿರುವ ಪ್ರದೇಶದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೂಲಕ ಹಾಗೂ ಭಾರತ ಜ್ಞಾನ ವಿಜ್ಞಾನ ಸಮಿತಿಗಳಂಥ ಸಂಘಟನೆಯ ಮೂಲಕ ವೈಜ್ಞಾನಿಕ ಚಟುವಟಿಕೆಗಳನ್ನು ನಡೆಸಲು ಸಾಧ್ಯವಾಗಬೇಕು ಹಾಗೂ ವಾಚನಾಲಯಗಳನ್ನು ಸ್ಥಾಪಿಸಬೇಕು.

**ಟಿಪ್ಪಣಿಗಳು**

೧. ಡಾ. ಜೋಗನ್‌ಶಂಕರ, ದೇವದಾಸಿ ಸಂಪ್ರದಾಯ, ಪು. ೫೦.

೨. ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ವಿಶ್ವಕೋಶ ಸಂಪುಟ ೯, ಪು. ೭೧೮.

೩. ರಾಹುಲ ಸಾಂಕೃತ್ಯಾಯನ (ಮೂಲ), ಬಿ.ಎಂ. ಶರ್ಮಾ (ಅನು), ವೋಲ್ಗಾ ಗಂಗಾ, ಪು. ೨೦೩.

೪. ಎಪಿಗ್ರಾಫಿಯ ಕರ್ನಾಟಕ, ಸಂಖ್ಯೆ-೯೭.

೫. ಚೆನ್ನಣ್ಣ ವಾಲೀಕಾರ, ಜೋಗತಿ ನಾಟಕ, ಪು. ೫.

೬. ಡಾ. ಕಮಲಾ ಹೆಮ್ಮಿಗೆ -ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೫.

• • •

## ೧೦

# ಹೆಚ್ಚುತ್ತಿರುವ ಬಾಲ ವೇಶ್ಯೆಯರು

**ಡಾ. ಸಿ. ಡಿ. ವೆಂಕಟೇಶ್**

ಲಾಭದಾಯಕ ಉದ್ಯಮವಾಗಿ ಬೆಳೆದಿರುವ ಬಾಲವೇಶ್ಯಾವೃತ್ತಿಯು ಇಂದು ತೃತೀಯ ಜಗತ್ತಿನ ಮಹಾಸಮಸ್ಯೆಯಾಗಿದೆ. ಇದು ಕೇವಲ ಭಾರತ ದೇಶದ ಸಮಸ್ಯೆ ಮಾತ್ರ ಆಗಿರದೆ ಇಂದೂ ಜಗತ್ತಿನ ಎಲ್ಲಾ ಮುಂದುವರಿದ ರಾಷ್ಟ್ರಗಳಲ್ಲಿಯೂ ಕಂಡುಬರುತ್ತಿದೆ. ಸಮೀಕ್ಷೆ ಯೊಂದರ ಪ್ರಕಾರ ಭಾರತದ ಬೇರೆ ಬೇರೆ ನಗರಗಳಲ್ಲಿ ಸುಮಾರು ೪೦ ರಿಂದ ೮೦ ಲಕ್ಷ ಮಹಿಳೆಯರು ವೇಶ್ಯಾವೃತ್ತಿಯಲ್ಲಿ ತೊಡಗಿದ್ದು ಇದರಲ್ಲಿ ೫ ರಿಂದ ೧೦ ಲಕ್ಷದಷ್ಟು ಬಾಲ ವೇಶ್ಯೆಯರಿದ್ದಾರೆಂದು ತಿಳಿದುಬರುತ್ತದೆ. ಈ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಲೇ ಇದೆ.

ಭಾರತದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಬಾಲವೇಶ್ಯಾವೃತ್ತಿಗೆ ಅನೇಕ ಕಾರಣಗಳಿವೆ. ಸಾಮಾಜಿಕ, ಧಾರ್ಮಿಕ ಹಿನ್ನೆಲೆ, ಬಡತನ, ಸಂಪ್ರದಾಯಗಳು, ಕೈಗಾರಿಕೀಕರಣದಿಂದಾಗಿ ಹೆಚ್ಚುತ್ತಿರುವ ಗ್ರಾಮೀಣ ವಲಸೆ, ಆರ್ಥಿಕ ತಾರತಮ್ಯದ ಹೆಚ್ಚಳ, ಹೆಣ್ಣುಮಕ್ಕಳ ಬಗ್ಗೆ ಇರುವ ತಾತ್ಸಾರ, ಪ್ರವಾಸೋದ್ಯಮದ ಹೆಚ್ಚಳ, ಹೆಣ್ಣುಮಕ್ಕಳನ್ನು ಅಪಹರಿಸಿ ಮಾರಾಟ ಮಾಡುವುದು, ಪೋಷಕರ ಕಿರುಕುಳದಿಂದ ಮನೆ ಬಿಟ್ಟು ಓಡಿ ಬರುವುದು, ಮಾಧ್ಯಮಗಳು ಪ್ರಭಾವ ಮುಂತಾದವು ಬಾಲವೇಶ್ಯೆಯರ ಹೆಚ್ಚಳಕ್ಕೆ ಕಾರಣಗಳಾಗಿವೆ.

ಅತ್ಯಾಚಾರವು ನಮ್ಮ ಸಮಾಜಕ್ಕೊಂದು ಅಭಿಶಾಪ. ಮೇಲಾಗಿ ಇದು ಅಜ್ಞಾನದ ಅಂಧ ಕಾರವು ಹೌದು. ಅತ್ಯಾಚಾರಕ್ಕೊಳಗಾದ ಬಾಲಕಿ ಶೀಲಗೆಟ್ಟಳೆಂದು ಅವಳನ್ನು ಸಮಾಜ ತಿರಸ್ಕರಿಸುತ್ತದೆ. ಈ ತೆರನಾಗಿ ತಿರಸ್ಕೃತರಾಗಿ ಬಾಲವೇಶ್ಯೆಯರಾಗಿ ವೇಶ್ಯಾಗೃಹ ಸೇರಿದ ಬಾಲಕಿಯರ ಸಂಖ್ಯೆ ಭಾರತದಲ್ಲಿ ಶೇಕಡ ೮೦ಕ್ಕೂ ಹೆಚ್ಚು ಅಲ್ಲದೆ ಅಪಹರಣಕ್ಕೀಡಾದ ಶೇಕಡ ೯೦ರಷ್ಟು ಬಾಲಕಿಯರಿಗೆ ವೇಶ್ಯಾಗೃಹಗಳೇ ಗತಿಯಾಗುತ್ತಿವೆ. ಯಾಕೆಂದರೆ ನಮ್ಮ ಸಮಾಜದಲ್ಲಿ ದುರಂತದ ಘಟನೆಯೊಂದಿಗೆ ಹೊಸ್ತಿಲು ದಾಟಿ ಹೋದ ಹೆಣ್ಣಿಗೆ ಮರಳಿ ಮನೆಯಲ್ಲಿ ಪ್ರವೇಶವಿಲ್ಲದಿರುವುದಾಗಿದೆ. ಕೇಂದ್ರ ಸರ್ಕಾರದ ಉದಾರ ಆರ್ಥಿಕ ನೀತಿಯಿಂದಾಗಿ ವಿದೇಶಿಯರ ಮುಕ್ತ ಪ್ರವೇಶದಿಂದ ಬಾಲವೇಶ್ಯೆಯರ ದಂದೆಯು ವ್ಯಾಪಾರೀಕರಣಗೊಂಡಿತು.

ಇದರಿಂದ ಭಾರತದ ಮುಗ್ಧ ಹೆಣ್ಣುಮಕ್ಕಳು ಡಾಲರ್ ಬೆಲೆಗೆ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಿದೇಶಗಳ ವೇಶ್ಯಾಗೃಹಗಳಿಗೆ ಮಾರಲ್ಪಡುತ್ತಿದ್ದಾರೆ. ಮಕ್ಕಳನ್ನು ಸರಕುಗಳಂತೆ ಮಾರಾಟ ಮಾಡುವುದು, ಖರೀದಿಸುವುದು ಇಂದು ಗುಪ್ತವಾಗಿ ನಡೆಯುತ್ತಿದ್ದರೂ ದೊಡ್ಡ ಉದ್ಯಮವಾಗಿದೆ.

ಇಂತಹ ದಂದೆಯಲ್ಲಿ ಸಮಾಜದ ಜವಾಬ್ದಾರಿಯುತ ವ್ಯಕ್ತಿ ಮತ್ತು ಸಂಸ್ಥೆಗಳೇ ಶಾಮೀಲಾಗಿರುವುದು ಶೋಚನೀಯ ಸಂಗತಿಯಾಗಿದೆ. ಆಂಧ್ರ ಮತ್ತು ಕರ್ನಾಟಕದ ಗಡಿಯಲ್ಲಿ ಬೆಳಕಿಗೆ ಬಂದಿರುವ ಅಬ್ರಾಹಾಂ ಸ್ಮಾರಕ ಬೆಥಾಹೋಂನ ಹಸುಕೂಸುಗಳ ಮಾರಾಟ ಪ್ರಕರಣ ಮತ್ತು ಗೋವಾ ಹಾಗೂ ಆಂಧ್ರಪ್ರದೇಶದ ಅನಾಥ ಆಶ್ರಮದ ಮಕ್ಕಳನ್ನು ವಿದೇಶಿ ಪ್ರವಾಸಿಗರು ವಿಕೃತ ಕಾಮಗಳಿಗೆ ಬಳಸಿಕೊಂಡಿರುವುದು ಇತ್ತೀಚಿನ ಜ್ವಲಂತ ಉದಾಹರಣೆಗಳಾಗಿವೆ. ಸಮಾಜ ಸೇವೆಯ ಹೆಸರಿನಲ್ಲೊ, ಅನಾಥಾಶ್ರಮದ ಹೆಸರಿನಲ್ಲೋ ಗುಪ್ತವಾಗಿ ನಡೆಯುವ ಶಿಶುಗಳ ಮಾರಾಟ ಬಾಲ ವೇಶ್ಯಾಗಾರಿಕೆಗೆ ಕುಮ್ಮಕ್ಕು ನೀಡುವ ವ್ಯವಹಾರವೇ ಆಗಿದೆ.

ಬಡತನದಿಂದ ಮಕ್ಕಳನ್ನು ಪೋಷಿಸಲು ಸಾಧ್ಯವಾಗದೇ ಕೆಲವು ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಜನರು ತಮ್ಮ ಮಕ್ಕಳನ್ನು ೫೦ ರಿಂದ ೫೦೦ ರೂಪಾಯಿಗಳಿಗೆ ಮಾರಾಟ ಮಾಡುತ್ತಿದ್ದಾರೆ. ಇಂತಹ ಮಕ್ಕಳನ್ನು ಕೊಂಡುಕೊಳ್ಳುವ ಮಧ್ಯವರ್ತಿಗಳು ದೂರದ ವೇಶ್ಯಾಗೃಹಗಳಿಗೆ ಮಾರಿ ಹಣ ಪಡೆಯುತ್ತಿದ್ದಾರೆ. ಮೈಮುರಿದು ಹಗಲು ರಾತ್ರಿ ದುಡಿದರೂ ಸಿಗದಷ್ಟು ಹಣ ಮಗಳನ್ನು ವೇಶ್ಯವೃತ್ತಿಗೆ ತಳ್ಳಿದಾಗ ಸುಲಭವಾಗಿ ಸಿಗುತ್ತದೆ ಎಂದು ತಿಳಿದ ಅದೆಷ್ಟೋ ತಂದೆ ತಾಯಿಗಳು ಕೆಲವು ದೊಡ್ಡ ದೊಡ್ಡ ನಗರಗಳ ಜನಸಂದಣಿ ಪ್ರದೇಶಗಳಲ್ಲಿ ಭಿಕ್ಷಾಟನೆಯ ರೂಪದಲ್ಲಿ ಮಕ್ಕಳನ್ನು ಲೈಂಗಿಕ ಚಟುವಟಿಕೆಗಳಿಗೆ ತೊಡಗಿಸಿದ್ದಾರೆ. ಧಾರ್ಮಿಕ ಪ್ರದೇಶಗಳಲ್ಲಿ, ಮಾರುಕಟ್ಟೆ ಪ್ರದೇಶಗಳಲ್ಲಿ ಭಿಕ್ಷೆ ಬೇಡುವ ನೆಪದಲ್ಲಿ ತಂದೆ ತಾಯಿಯರ ಜೊತೆ ಕುಳಿತುಕೊಳ್ಳುವ ಮಕ್ಕಳು ಮಧ್ಯಾಹ್ನದ ವೇಳೆಗೆ ಯಾರದೋ ಕಾಮ ತೃಷೆ ತೀರಿಸುವುದಕ್ಕೆ ಹೋರಾಡುತ್ತಾರೆ. ಸಭ್ಯನಾಗರಿಕರು, ವಿದ್ಯಾವಂತರು, ವಿವೇಕಿಗಳು ಎಂದು ಕರೆಸಿಕೊಳ್ಳುವ ಜನರು ಗಿರಾಕಿಗಳಾಗಿ ಕರೆದೊಯ್ದು ತಮ್ಮ ಕಾಮ ತೃಷೆ ತೀರಿಸಿ ಅದೇ ಜಾಗಾಕ್ಕೆ ತಲುಪಿಸಿ ಹೋಗುತ್ತಾರೆ. ಇಂತಹ ಚಟುವಟಿಕೆಗಳು ಕರ್ನಾಟಕದ ಬೆಂಗಳೂರು, ಧಾರವಾಡ, ಬೆಳಗಾವಿ, ವಿಜಾಪುರ, ಮೈಸೂರ ನಗರಗಳಲ್ಲಿ ವ್ಯವಸ್ಥಿತವಾಗಿ ನಡೆಯುತ್ತಿದೆ.

ಭಾರತದ ಪ್ರಮುಖ ನಗರಗಳಾದ ದೆಹಲಿ, ಕೊಲ್ಕತ್ತಾ, ಚೆನ್ನೈ, ಮುಂಬಯಿ, ಬೆಂಗಳೂರು ನಗರಗಳು ಮತ್ತು ಕರ್ನಾಟಕದ ಕರಾವಳಿ ಪ್ರದೇಶಗಳಾದ ಮಹಾಬಲಿಪುರ, ಮಂಗಳೂರು, ಗೋಕರ್ಣ ಮುಂತಾದ ನಗರಗಳಲ್ಲಿ ಬಾಲ್ಯವೇಶ್ಯೆಯರ ಪ್ರಮಾಣ ಹೆಚ್ಚಾಗಿ ಕಂಡುಬರುತ್ತದೆ. ಕರಾವಳಿ ಪ್ರದೇಶಗಳಲ್ಲಿ ದುಬಾರಿ ಹೊಟೇಲ್‌ಗಳ ಪರ್ಯಾಯವಾಗಿ ಪ್ರಾರಂಭವಾಗಿರುವ ಅತೀ ಕಡಿಮೆ ದರದ ಮನೆಯ ಹೊಟೇಲ್‌ಗಳು ವಿದೇಶಿಯರನ್ನು ಹೆಚ್ಚು ಆಕರ್ಷಿಸುತ್ತಿದ್ದು ಇಂತಹ ಮನೆಯ ಹೊಟೇಲ್ ಮಾಲೀಕರು ಪ್ರವಾಸಿಗಳ ಅಭಿರುಚಿಗಳನ್ನು ಅರಿತು ಮಕ್ಕಳನ್ನು ಲೈಂಗಿಕ ಚಟುವಟಿಕೆಗಳಿಗೆ ತೊಡಗಿಸುತ್ತಿದ್ದಾರೆ.

ವೇಶ್ಯಾವಾಟಿಕೆಗಳಿಗೆ ಹೆಸರಾದ ಫಿಲಿಫಿನ್ಸ್, ಥಾಯಲ್ಯಾಂಡ್ ಹಾಗೂ ಶ್ರೀಲಂಕಾಗಳಲ್ಲಿ ಅಲ್ಲಿನ ಸರಕಾರಗಳು ವೇಶ್ಯಾವಾಟಿಕೆಯ ವಿರುದ್ಧ ಬಿಗಿ ಕ್ರಮ ಕೈಗೊಂಡಿರುವುದರಿಂದ ಭಾರತ ದಲ್ಲಿ ವೇಶ್ಯಾವೃತ್ತಿ ಹೆಚ್ಚಲು ಮತ್ತೊಂದು ಕಾರಣವೆನ್ನಬಹುದು. ವೇಶ್ಯಾಚಟುವಟಿಕೆಗಳಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳಿಗೆ ವಿಶೇಷವಾದ ಬೇಡಿಕೆ ಇರುವುದರಿಂದ ಈ ದಂದೆಯಲ್ಲಿ ತೊಡಗಿಸಲು ಪ್ರತಿವರ್ಷ ಸುಮಾರು ೨೦ ಸಾವಿರ ಮಂದಿ ನೇಪಾಳಿ ಹುಡುಗಿಯರನ್ನು ಕರೆ ತರಲಾಗುತ್ತಿದೆ ಎಂದು ವರದಿಯೊಂದು ತಿಳಿಸುತ್ತದೆ. ಅಲ್ಲದೆ ಭಾರತದಲ್ಲಿ ದಿನನಿತ್ಯ ಸುಮಾರು ೨೦೦ ಹುಡುಗಿಯರು ಈ ದಂಧೆಗೆ ಸೇರ್ಪಡೆಗೊಳ್ಳುತ್ತಿದ್ದಾರೆ ಎಂದು ರಾಷ್ಟ್ರೀಯ ಮಹಿಳಾ ಆಯೋಗದ ಅಧ್ಯಕ್ಷೆ ವಿಭಾ ಪಾರ್ಥಸಾರಥಿ ಅಭಿಪ್ರಾಯಪಟ್ಟಿದ್ದಾರೆ. ಇಂಡಿಪೆಂಡೆಂಟ ಬ್ಯಾಂಕಾಕ ರಿಪೋರ್ಟ್ ಸರ್ವಿಸನ ವರದಿಯ ಪ್ರಕಾರ ಮುಂಬಯಿ ನಗರದಲ್ಲಿ ಸುಮಾರು ೧೨೫೦೦೦ ವೇಶ್ಯೆಯರಿದ್ದು ಅವರಲ್ಲಿ ೪೦೦೦೦ ವೇಶ್ಯೆಯರು ಬಾಲವೇಶ್ಯೆಯರಾಗಿದ್ದಾರೆ ಎಂದು ತಿಳಿದು ಬರುತ್ತದೆ.

ಕೇಂದ್ರೀಯ ಸಮಾಜ ಕಲ್ಯಾಣ ಸಲಹಾ ಸಮಿತಿ ೧೯೯೧ರಲ್ಲಿ ನಡೆಸಿದ ಸಮೀಕ್ಷೆಯ ವರದಿ ಯಿಂದ ತಿಳಿದು ಬರುವಂತೆ ಭಾರತದ ಒಟ್ಟು ವೇಶ್ಯೆಯರಲ್ಲಿ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಪಶ್ಚಿಮ ಬಂಗಾಳ, ಮಹಾರಾಷ್ಟ್ರ, ಉತ್ತರಪ್ರದೇಶಗಳಿಗೆ ಸೇರಿದ ಮಕ್ಕಳೇ ಹೆಚ್ಚಿದ್ದು ಅವರ ಪ್ರಮಾಣ ಶೇಕಡಾ ೮೫ರಷ್ಟು ಇದೆ. ಇವರಲ್ಲಿ ಶೇಕಡಾ ೩೦ರಷ್ಟು ಮಕ್ಕಳು, ೨೦ರ ವಯೋಮಾನದವರು, ಶೇಕಡಾ ೧೫ರಷ್ಟು ಮಕ್ಕಳು ೧೫ ರಿಂದ ೧೮ರ ವಯೋಮಾನ ದವರು, ಶೇಕಡಾ ೧೫ರಷ್ಟು ಮಕ್ಕಳು ೧೫ರ ವಯೋಮಾನಕ್ಕಿಂತ ಕೆಳಪಟ್ಟವರು ಆಗಿದ್ದು ಇವರಲ್ಲಿ ಶೇಕಡಾ ೬೦ರಷ್ಟು ಮಕ್ಕಳು ಪರಿಶಿಷ್ಟ ಜಾತಿ ಮತ್ತು ಹಾಗೂ ಹಿಂದುಳಿದ ಪಂಗಡಗಳಿಗೆ ಸೇರಿ ದವರಾಗಿದ್ದಾರೆ.

ಒಂದು ನಂಬಿಕೆಯ ಪ್ರಕಾರ ಅಪ್ರಾಪ್ತ ವಯಸ್ಸಿನ ಬಾಲಕಿಯರೊಂದಿಗೆ ದೈಹಿಕ ಸಂಪರ್ಕ ಹೊಂದಿದರೆ ಏಡ್ಸ್, ಸಿಪಿಲಿಸ್ನಂತಹ ಲೈಂಗಿಕ ರೋಗಗಳು ಗುಣಮುಖವಾಗುತ್ತವೆ ಎಂಬ ಒಂದು ವಿಕೃತ ನಂಬಿಕೆಯಿಂದ ರೋಗಕಾರಕ ಶ್ರೀಮಂತ ಕಾಮುಕರ ಅತ್ಯಾಚಾರಕ್ಕೆ ಅಪ್ರಾಪ್ತ ವಯಸ್ಸಿನ ಮಕ್ಕಳು ಬಲಿಯಾಗುತ್ತಿರುವುದು ಘೋರ ದುರಂತವೇ ಆಗಿದೆ. ಹೀಗಾಗಿ ವೇಶ್ಯಾ ಗೃಹಗಳಲ್ಲಿ ಬಾಲ ವೇಶ್ಯೆಯರಿಗೆ ಬೇಡಿಕೆ ಉಂಟಾಗಿದೆ. ಅಲ್ಲದೆ ಬಾಲಕಿಯರು ಗಿರಾಕಿಗಳಿಗೆ ಹೆದರಿ ಅವರು ಹೇಳಿದಂತೆ ಕೇಳುವುದರಿಂದ ಈ ಕಾಮುಕರಿಗೆ ಬಾಲವೇಶ್ಯೆಯರಲ್ಲೇ ಹೆಚ್ಚು ಆಸಕ್ತಿ. ಹೀಗೆ ತಮ್ಮ ಲೈಂಗಿಕ ರೋಗಗಳಿಂದ ಪಾರಾಗಲು ಮಕ್ಕಳನ್ನು ಲೈಂಗಿಕ ಚಟುವಟಿಕೆಗೆ ಬಳಸಿಕೊಳ್ಳುವ ಜನರು ಈ ಮಕ್ಕಳ ಮೂಲಕವೇ ಮುಂದಿನ ಪೀಳಿಗೆಗೂ ಏಡ್ಸ್‌ನಂತಹ ಮಾರಕ ರೋಗಗಳನ್ನು ಹರಡುತ್ತಿದ್ದಾರೆ. ಎಷ್ಟೋ ಬಾಲವೇಶ್ಯೆಯರು ಏಡ್ಸ್ ಸೋಂಕಿತರಾಗಿ ಮಧ್ಯ ದಲ್ಲಿಯೇ ಸಾವನ್ನಪ್ಪುತ್ತಿದ್ದಾರೆ. ಮತ್ತೊಂದು ಕಳವಳಕಾರಿ ಸಂಗತಿಯೆಂದರೆ ಏಡ್ಸ್ ಪ್ರಕರಣಗಳು ಹೆಚ್ಚುತ್ತಿರುವ ಈ ದಿನಗಳಲ್ಲಿ ವೇಶ್ಯಾಗೃಹಗಳಲ್ಲಿ ಮಕ್ಕಳಲ್ಲಿ ಏಡ್ಸ್ ಪತ್ತೆಯಾದಾಗ ಅವರನ್ನು

ಅಲ್ಲಿಂದ ಹೊರಹಾಕಲಾಗುತ್ತಿದೆ. ಅಲ್ಲಿಂದ ತಮ್ಮ ಹಳ್ಳಿಗಳಿಗೆ ಬರುವ ಬಾಲವೇಶ್ಯೆಯರು ತಮಗರಿವಿಲ್ಲದೆ ಎಚ್.ಆಯ್.ವ್ಹಿ. ಸೋಂಕನ್ನು ಇತರರಿಗೆ ಹರಡುತ್ತಿದ್ದಾರೆ.

ಬಾಲವೇಶ್ಯಾಗ್ರಹಗಳಲ್ಲಿ ಹಗಲು ಇರುಳೆನ್ನದೆ ಅವರ ಮೇಲೆ ಅತ್ಯಾಚಾರ ನಡೆಯುತ್ತಿದೆ. ನೋವು ತಾಳಲಾರದೆ ಗಲಾಟೆ ಮಾಡಿದರೆ ಅತ್ತರೆ ಉಪವಾಸ ಕೆಡವುತ್ತಾರೆ. ಮೈಮೇಲೆ ಬರೆ ಹಾಕುತ್ತಾರೆ, ಸಿಗರೇಟಿನಿಂದ ಸುಡುತ್ತಾರೆ, ಮಕ್ಕಳು ಅತ್ತರೆ ಕುಪಿ ಪಡುತ್ತಾರೆ. ಪ್ರತಿಭಟಿಸಿದರೆ ಬಟ್ಟೆ ಬಿಚ್ಚಿ ಕತ್ತಲ ಕೋಣೆಯಲ್ಲಿ ದೂಡಲಾಗುತ್ತದೆ. ನೋವನ್ನು ಮರೆಯಲು ಮಕ್ಕಳು ಮಾದಕ ವಸ್ತುಗಳ ಸೇವನೆಯಂಥ ಚಟಕ್ಕೂ ಬಲಿಯಾಗಿದ್ದಾರೆ. ಸುರಕ್ಷಿತ ಲೈಂಗಿಕತೆಯ ಬಗ್ಗೆ ತಿಳಿವಳಿಕೆ ಇಲ್ಲದ ಮುಗ್ಧಮಕ್ಕಳು ಚಿಕ್ಕ ವಯಸ್ಸಿನಲ್ಲಿಯೆ ಗರ್ಭಿಣಿಯಾಗಿ ಗರ್ಭಪಾತಕ್ಕೂ ಒಳಗಾಗುತ್ತಿರುವುದರಿಂದ ಮಕ್ಕಳ ದೈಹಿಕ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತಿದೆ.

ಈ ನಿಟ್ಟಿನಲ್ಲಿ ಅಂತಾರಾಷ್ಟ್ರೀಯ ಸಂಸ್ಥೆಗಳಾದ ಯುನಿಸೆಫ್, ಯುನೆಸ್ಕೋ ಹಾಗೂ ಭಾರತ ಸರಕಾರ ಬಾಲವೇಶ್ಯೆಯರ ನಿರ್ಮೂಲನೆಯಲ್ಲಿ ಶ್ರಮಿಸುತ್ತಿದ್ದರೂ ದಿನೇ ದಿನೇ ಹೆಚ್ಚುತ್ತಿರುವ ಬಾಲವೇಶ್ಯೆಯರ ಪ್ರಮಾಣವನ್ನು ನಿಯಂತ್ರಿಸುವಲ್ಲಿ ವಿಫಲವಾಗಿದೆ.

ಒಂದೆಡೆ ಲಿಂಗ ವ್ಯವಸ್ಥೆಯ ನ್ಯಾಯ ಸ್ಥಾಪನೆಯ ಬಗ್ಗೆ ಚರ್ಚೆ, ಮತ್ತೊಂದೆಡೆ ಮಹಿಳಾ ಸಶಕ್ತೀಕರಣ ವರ್ಷ ಎಂಬ ಘೋಷಣೆ ಇದರ ಮಧ್ಯೆ ಬದುಕನ್ನು ಕಾಣುವ ಮೊದಲೇ ಸಾವಿರಾರು ಅಮಾಯಕ ಹೆಣ್ಣುಮಕ್ಕಳ ಬದುಕಿನ ಗೋರಿಯ ಮೇಲೆ ಸುಖದ ಸೌಧಗಳನ್ನು ಕಟ್ಟುವ ಪುರುಷ ಶಕ್ತಿಗಳು ಬಾಲವೇಶ್ಯಾವೃತ್ತಿಯಂಥ ಸ್ತ್ರೀ ವಿರೋಧಿ ಆಚರಣೆಗಳು ಅಂತ್ಯವಾಗುವವರೆಗೂ ಈ ಆಚರಣೆಗಳಿಗೆ ಕಾರಣವಾದವರಿಗೆ ಘೋರ ಶಿಕ್ಷೆಯಾಗುವವರೆಗೂ ಲಿಂಗನ್ಯಾಯ ಒಂದು ಮರೀಚಿಕೆಯಾಗಿ ಉಳಿಯುತ್ತಿದೆಯೆ ಹೊರತು, ವಾಸ್ತವವಾಗುವುದಿಲ್ಲಾ.

## ಪರಾಮರ್ಶಿತ ಲೇಖನಗಳು ಮತ್ತು ಗ್ರಂಥಗಳು


೧. ನಾರಾಯಣರಾವ್ ಎ.ಎಸ್., **ಪುಡಿಕಾಸಿಗಾಗಿ ಹಸುಕೂಸುಗಳ ಮಾರಾಟ**, ಸುಧಾ ವಾರಪತ್ರಿಕೆ, ಜೂನ್ ೨೮, ೨೦೦೧, ಪು. ೧೫-೧೮.

೨. ಪಾಟೀಲ ಎನ್.ಆರ್., **ಬಾಲವೇಶ್ಯಾವೃತ್ತಿ, ನಾಗರಿಕತೆಗೊಂದು ಕಳಂಕ**, ವಿಜಯ ಕರ್ನಾಟಕ ದಿನಪತ್ರಿಕೆ, ಆಗಸ್ಟ್ ೨೬, ೨೦೦೧, ಪು. ೫.

೩. **ವೇಶ್ಯಾವೃತ್ತಿಗೆ ಪ್ರತಿದಿನ ೨೦೦ ತರುಣಿಯರು**, ವಿಜಯ ಕರ್ನಾಟಕ ದಿನಪತ್ರಿಕೆ, ಆಗಸ್ಟ್ ೨೭, ೨೦೦೧, ಪು. ೭.

೪. ಸಾವಿತ್ರಿ ಕೆ.ಎಸ್., **ಕೆಸರಿನಲ್ಲಿ ಕಮರಿದ ಕಮಲಗಳು**, ಕರ್ಮವೀರ, ಡಿಸೆಂಬರ್ ೨೭, ೧೯೯೮, ಪು. ೧೭.

೫. Jha, J.K., Status of Girl Child in India, Sarup & Sons, New Delhi, 2002.

೬. Tripathy S.N. and Pradhan, S.P., Girl Child in India, Discovery Publishing house, New Delhi, 2003.


...

೧೧

# ಮಹಿಳೆ ಮತ್ತು ಜಾತಿ : ಅಂಬೇಡ್ಕರ್ ದೃಷ್ಟಿಕೋನ

ಡಾ. ಈ. ಯರ್ರಿಸ್ವಾಮಿ

ಭಾರತದಲ್ಲಿ ಮಹಿಳೆ ಮತ್ತು ಜಾತಿ ಅಸಮಾನತೆಯ ವಿಷಯಗಳು ಬ್ರಿಟಿಷ್ ಶಿಕ್ಷಣದಿಂದ ಹೊಸ ತಿಳುವಳಿಕೆಯಲ್ಲಿ ಪ್ರಸ್ತುತಗೊಂಡವು. ಹಾಗಾಗಿ ಬಾಲ್ಯವಿವಾಹ, ಸತಿ, ವಿಧವೆ ಮತ್ತು ಅಸ್ಪೃಶ್ಯರ ಸ್ಥಿತಿಗತಿಯಂತಹ ಅನೇಕ ಸಂಗತಿಗಳು ಭಾರತೀಯ ಸಾಮಾಜಿಕ ಸಮಸ್ಯೆಗಳು ಅಂತ ಪರಿಗಣಿತವಾದವು. ನಂತರ ಇವು ರಾಷ್ಟ್ರೀಯ ಚಳುವಳಿಯೊಂದಿಗೆ ತಳುಕುಹಾಕಿಕೊಂಡವು. ಅಲ್ಲದೆ, ಸ್ವತಂತ್ರ ಭಾರತದ ಸಂವಿಧಾನದಲ್ಲಿ ಅದರ ಪರಿಹಾರ ಕ್ರಮಗಳು ಸೇರ್ಪಡೆಗೊಂಡವು. ಈ ಕುರಿತು ವಸಾಹತು ಸಂದರ್ಭ ಚಿಂತನಾಕ್ರಮಗಳಿಗಿಂತ ಭಿನ್ನವಾಗಿ ಅಂಬೇಡ್ಕರ್ ಈ ದೃಷ್ಟಿಕೋನಗಳಿಗೆ ಪರ್ಯಾಯವಾದ ದೃಷ್ಟಿಕೋನವನ್ನು ಪ್ರಸ್ತುತಪಡಿಸುತ್ತಾರೆ. ಅಂದರೆ ಆಗ ಮಹಿಳೆಯ ವಿಷಯಗಳನ್ನು ಜಾತಿ ಒಳಗೆ ಜಾತಿಯೊಂದಿಗೆ ತಳುಕುಹಾಕದೆ ಗ್ರಹಿಸುತ್ತಿದ್ದ ದೃಷ್ಟಿಕೋನಗಳಿದ್ದವು. ಅದಕ್ಕೆ ಪರ್ಯಾಯವಾಗಿ ಅಂಬೇಡ್ಕರ್ ಲಿಂಗ, ಜಾತಿಯಲ್ಲಿ ಶ್ರೇಣೀಕರಣ ಉಳಿಸಿಕೊಂಡಿರುವ ವಿವಾಹ ಒಂದು ಪ್ರಕಾರವಾದ ಸ್ವಜಾತಿ ವಿವಾಹದೊಳಗೆ ಮಹಿಳಾ ವಿಷಯಗಳನ್ನು ಗ್ರಹಿಸಿದರು. ಈ ಎಲ್ಲಾ ಸಂಗತಿಗಳೇ ಅಧ್ಯಯನ ವಸ್ತುವಾಗಿವೆ. ಅದ್ದರಿಂದ ಲಿಂಗ, ಜಾತಿಧಾರಿತ ಶ್ರೇಣೀಕರಣದ ಚಿಂತನಾ ಕ್ರಮದಲ್ಲಿ ಅಂಬೇಡ್ಕರ್ ಧೋರಣೆಗಳನ್ನು ಗುರುತಿಸುವುದು ಈ ಲೇಖನದ ಉದ್ದೇಶವಾಗಿದೆ.

ಜಾತಿ ಪ್ರಶ್ನೆಗಳ ಹಿನ್ನಲೆಯಲ್ಲಿ ಸ್ತ್ರೀ ಸುಧಾರಣೆ ಆಲೋಚನೆ ಪ್ರಸ್ತುತ ಪಡಿಸಿದ್ದು ಅಂಬೇಡ್ಕರ್ ವಿಧಾನ. ಅಂದರೆ ಮಹಿಳೆ ಮತ್ತು ಜಾತಿಯನ್ನು ವಿವಾಹದೊಳಗೆ ಸಂಯೋಜಿಸುವ ಅಂಬೇಡ್ಕರ್ ಕ್ರಮ ತುಂಬಾ ವಿಭಿನ್ನವಾದುದು. ವಸಾಹತು ಸಂದರ್ಭಲ್ಲಿ ಲಿಂಗ ಮತ್ತು ಜಾತಿ ವಿಷಯ ಸಂಬಂಧಿ ಚರ್ಚೆಗಳು ಹೆಚ್ಚು ಮಹತ್ವ ಪಡೆಯುತ್ತಿದ್ದವು. ಆಗ ಅಂಬೇಡ್ಕರ್ ಅಸ್ಪೃಶ್ಯರ ನೋವುಗಳನ್ನು ಅನುಭವಿಸಿದರು. ಈ ಹಿನ್ನಲೆಯಲ್ಲಿ ಅವರು ಜಾತಿಯ ಎಲ್ಲಾ ಮುಖಗಳನ್ನು ತರ್ಕಬದ್ಧವಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. 'ತರ್ಕಬದ್ಧ' ಎಂಬುದನ್ನ ಕಾರ್ಯಕಾರಣ ಸಂಬಂಧ ಎಂದು ಭಾವಿಸಲಾಗಿದೆ. ಅದ್ದರಿಂದ ಅಂಬೇಡ್ಕರ್ ಜಾತಿಪದ್ಧತಿಯ ವಿರುದ್ಧ

ರಾಜಕೀಯ ಹೋರಾಟವನ್ನೆ ರೂಪಿಸತೊಡಗಿದರು. ಈ ಕಾರಣದಿಂದಾಗಿಯೇ ಅವರು ಅದಕ್ಕೊಂದು ತಾತ್ವಿಕತೆಯನ್ನು ನಿರ್ಮಿಸಿಕೊಳ್ಳುವುದರಲ್ಲಿ ಕೂಡ ಹೆಚ್ಚು ಆಸಕ್ತರಾದರು. ಹಾಗಾಗಿ ಅವರು ಉಳಿದವರಿಗಿಂತ ಹೆಚ್ಚು ಗಂಭೀರವಾಗಿ ಜಾತಿಪದ್ಧತಿಯ ಉಗಮ ಬೆಳವಣಿಗೆಗಳ ಕುರಿತು ಚರ್ಚಿಸುತ್ತಾರೆ.

ಮಹಿಳೆ ಮತ್ತು ಜಾತಿ ಸಂಬಂಧದಲ್ಲಿ ಅವರು 'ಭಾರತದಲ್ಲಿ ಜಾತಿಗಳು' ಎನ್ನುವ ಪ್ರಬಂಧ ಗಮನಾರ್ಹವಾದುದು. ಇದನ್ನು ಅವರು ೧೯೧೬ ರ ಮೇ ೯ ರಂದು ಅಮೆರಿಕೆಯ ನ್ಯೂಯಾರ್ಕ್‌ನ ಕೊಲಂಬಿಯ ವಿಶ್ವವಿದ್ಯಾಲಯದಲ್ಲಿ ನಡೆದ ಡಾ. ಎ.ಎ. ಗೋಲ್ಡನ್ ಮೇಜರ್ ಸ್ಮರಣಾರ್ಥಕ ಮಾನವಕುಲಶಾಸ್ತ್ರ ವಿಚಾರ ಸಂಕಿರಣದಲ್ಲಿ ಮಂಡಿಸಿದ್ದಾರೆ. ಅದರಲ್ಲಿ ಅವರು ಪಾಶ್ಚಾತ್ಯ ವಿಧ್ವಾಂಸರಾದ ಸೇನಾರ್ಟ್, ನೆಸ್‌ಫೀಲ್ಡ್, ಸರ್ ರಿಸ್ಲೆಯವರ ಹಾಗು ದೇಶಿ ಚಿಂತಕರಾದ ಡಾ.ಕೇತ್ಕರ್‌ರವರ ಜಾತಿಯ ವ್ಯಾಖ್ಯೆ ಮತ್ತು ಅದರ ಲಕ್ಷಣಗಳನ್ನು ವಿಮರ್ಶಾತ್ಮಕ ವಿವರಿಸುತ್ತಾರೆ. ಅಂದರೆ ಅಂಬೇಡ್ಕರ್ ಯಾವ ಸ್ತ್ರೀವಾದಿಯು, ಸಮಾಜ ಅಧ್ಯಯನಕಾರು ಪ್ರವೇಶಿಸದ ಹೊಸದಾರಿಯಲ್ಲಿ ಮಾನವಶಾಸ್ತ್ರ ಅಧ್ಯಯನ ವಿಧಾನಗಳ ಮೂಲಕ ವಿಷಯವನ್ನು ಪ್ರವೇಶಿಸುತ್ತಾರೆ. ಈ ಮೂಲಕವೇ ಅವರು 'ಜಾತಿಪದ್ಧತಿ' ಎಂದರೇನು ಎಂಬುದನ್ನು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಹಾಗೆ ವ್ಯಾಖ್ಯಾನಿಸುವಾಗ ಅಂಬೇಡ್ಕರ್ ಪ್ರಾಥಮಿಕವಾಗಿಯೇ ಜಾತಿಪದ್ಧತಿಯನ್ನು ಹೊರಗಿನದೆಂದು ತೋರಿಸುತ್ತಾರೆ. ಈ ಮೂಲಕ ಭಾರತದ ಬಗೆಗಿನ ಪಾಶ್ಚಾತ್ಯರ ಟೀಕೆಗಳಿಗೆ ಉತ್ತರಿಸುತ್ತಾರೆ.

ಅಂಬೇಡ್ಕರ್ ಜಾತಿಪದ್ಧತಿಯ ಕುರಿತು ಚಾರಿತ್ರಿಕ ನೋಟವು ಇದನ್ನು ಪುಷ್ಟೀಕರಿಸುತ್ತದೆ. "ಭಾರತದ ಸಮಾಜಕ್ಕಿಂತ ಮಿಗಿಲಾಗಿ ಇಂದಿನ ಯಾವ ನಾಗರಿಕ ಸಮಾಜವು ಪ್ರಾಚೀನ ಕಾಲದ ಪಳೆಯುಳಿಕೆಗಳನ್ನು ತೋರಿಸಲಾರದೆಂದು, ಭಾರತದ ಧರ್ಮವು ಮೂಲಭೂತವಾಗಿ ಪುರಾತನವಾದುದು, ಕಾಲ ಮತ್ತು ನಾಗರಿಕತೆಯಲ್ಲಿ ಪ್ರಗತಿಯಾಗಿದ್ದು ಅದರ ನಿಮಯಗಳು ತನ್ನೆಲ್ಲ ಪೌರೋಹಿತ ಬಲದೊಂದಿಗೆ ಇಂದಿಗೂ ಜಾರಿಯಲ್ಲಿವೆ. ಅಂತಹ ಪುರಾತನ ಪಳೆಯುಳಿಕೆಗಳಲ್ಲಿ ಜಗತ್ತಿನ ವಿವಿಧ ಸಮಾಜದ ಭಿನ್ನ ಗೋತ್ರ ವಿವಾಹ ಪದ್ಧತಿ ಒಂದಾಗಿದ್ದು ಚರಿತ್ರೆಯ ಬೆಳವಣಿಗೆಯೊಂದಿಗೆ ಭಿನ್ನ ಗೋತ್ರ ವಿವಾಹವು ತನ್ನ ಪ್ರಭಾವವನ್ನು ಕಳೆದುಕೊಂಡಿದೆ. ಆದರೆ ಭಾರತೀಯರ ವಿಚಾರದಲ್ಲಿ ಭಿನ್ನ ಗೋತ್ರ ನಿಯಮವು ಇಂದಿಗೂ ಸ್ಪಷ್ಟವಾದ ಕಟ್ಟಳೆಯಾಗಿದೆ. ಈ ಬಣ ಭಿನ್ನಗೋತ್ರ ವಿವಾಹ ನಿಯಮದ ಸುತ್ತ ಕೇಂದ್ರೀಕೃತವಾಗಿರುವ ಮದುವೆ ನಿಯಮದಲ್ಲಿ ಇದನ್ನು ಸುಲಭವಾಗಿ ನೋಡಬಹುದು. ಏಕೆಂದರೆ ಸಪಿಂಡರು (ರಕ್ತಬಂಧುಗಳು) ಮದುವೆಯಾಗಬಾರದೆಂದಲ್ಲ. ಆದರೆ ಸ್ವಗೋತ್ರರ (ಅದೇ ಗುಂಪಿನ) ನಡುವಣ ಒಂದು ಮದುವೆಯನ್ನು ಕೂಡ ಅಪವಿತ್ರವೆಂದು ಪರಿಗಣಿಸಲಾಗಿದೆ ಎನ್ನುತ್ತಾರೆ."[೧] ಈ ಮೂಲಕ ಅವರು ಸ್ವಜಾತಿ ವಿವಾಹವು ಭಾರತೀಯರಿಗೆ ಹೊರಗಿನದೆಂದು ಸಾಬೀತುಪಡಿಸುತ್ತಾರೆ. ಅದ್ದರಿಂದಲೇ ಭಾರತದ ಬೇರೆ ಬೇರೆ ಮದುವೆಗಳು ಭಿನ್ನಗೋತ್ರ ವಿವಾಹ ಪದ್ಧತಿಯವೇ ಆಗಿವೆ. ಕುಲದೇವತಾರಾಧನಾ ಸಂಸ್ಥೆಗಳಲ್ಲಿರುವ ಇತರ ಗುಂಪುಗಳು ಹೀಗೆಯೇ

ಇವೆ. ಹಾಗಾಗಿ ಭಾರತೀಯ ಭಿನ್ನಗೋತ್ರ ವಿವಾಹವನ್ನು ಯಾರು ಉಲ್ಲಂಘಿಸುವ ಧೈರ್ಯ ತೋರದ ಒಂದು ನಂಬಿಕೆಯಾಗಿದೆ.

ಆದ್ದರಿಂದ ಜಾತಿಗಳ ಒಳಗೆ ಸ್ವಜಾತಿ ವಿವಾಹವು ಇದ್ದರೂ ಕೂಡ ಭಿನ್ನಗೋತ್ರ ವಿವಾಹ ವನ್ನು ಕಟ್ಟುನಿಟ್ಟಾಗಿ ಪರಿಪಾಲಿಸಲಾಗುತ್ತದೆ. ಭಿನ್ನಗೋತ್ರ ವಿವಾಹ ನಿಯಮವನ್ನು ಮೀರಿದವರಿ ಗಿಂತ ಕಠಿಣತರವಾದ ದಂಡವನ್ನು ಸ್ವಜಾತಿ ವಿವಾಹವ ನಿಯಮವನ್ನು ಮೀರಿದವರಿಗೆ ವಿಧಿಸಲಾಗುವುದು. ಹಾಗಾಗಿ, ಭಿನ್ನಗೋತ್ರ ವಿವಾಹ ಪದ್ಧತಿಯೇ ನಿಯಮವಾಗಿದ್ದು ಇದರಲ್ಲಿ ಜಾತಿ ಪ್ರಶ್ನೆ ಇರುವುದಿಲ್ಲ. ಏಕೆಂದರೆ ಭಿನ್ನಗೋತ್ರ ವಿವಾಹವೆಂದರೆ ಐಕ್ಯವೆಂದರ್ಥ. ಆದರೆ ನಮ್ಮಲ್ಲಿ ಜಾತಿಗಳಿವೆ. ಅದರ ಪರಿಣಾಮ ಭಾರತ ಕುರಿತಂತೆ "ಜಾತಿಗಳ ಸೃಷ್ಟಿಯೆಂದರೆ ಭಿನ್ನಗೋತ್ರದ ವಿವಾಹದ ಮೇಲೆ ಸ್ವಜಾತಿ ವಿವಾಹದ ಅಧಿಕ ಸ್ಥಾನವೆಂದು"[೨] ಅಂತಿಮವಾಗಿ ಅಂಬೇಡ್ಕರ್ ವಿಶ್ಲೇಷಿಸುತ್ತಾರೆ.

ಜಾತಿ ಪ್ರಶ್ನೆಯನ್ನು ವಿವಾಹದೊಂದಿಗೆ ತಳುಹಾಕಿ ವಿವರಿಸುತ್ತಾರೆ. ವಿವಾಹ ಸಂಸ್ಥೆಯು ಪಿತೃಪ್ರಧಾನತೆಯ ಮೂಲಭೂತ ಘಟಕ ಆಗಿದೆ. ಈ ವಿವಾಹ ಸಂಸ್ಥೆಯು ಮೂಲಕವೇ ಜಾತಿ ಮತ್ತು ಲಿಂಗದ ಪ್ರಶ್ನೆಗಳನ್ನು ಒಟ್ಟಿಗೆ ತರಲು ಪ್ರಯತ್ನಿಸುತ್ತಾರೆ.

ಅಂಬೇಡ್ಕರ್ ಜಾತಿಪದ್ಧತಿಯನ್ನು ಪವಿತ್ರ-ಅಪವಿತ್ರ ಕಲ್ಪನೆಯಿಂದಲೂ ಹಿಂದಿನ ಹಂತದಿಂದ ಗ್ರಹಿಸಲು ಯತ್ನಿಸುತ್ತಾರೆ. ಅವರ ಪ್ರಕಾರ 'ಪಾವಿತ್ರ್ಯದ ಕಲ್ಪನೆ ಜಾತಿಯ ಧಾರ್ಮಿಕ ಮುಖವನ್ನು ಮಾತ್ರ ತೋರಿಸುತ್ತದೆ. ಇದು ಶ್ರೇಣೀಕರಣದಲ್ಲಿ ಬ್ರಾಹ್ಮಣ ಜಾತಿಯನ್ನು ಮೊದಲ ಸ್ಥಾನದಲ್ಲಿರಿಸುವ ಸಂದರ್ಭದಲ್ಲಿ ಕಂಡುಬರುವುದು. ಹಾಗಾಗಿ ಪಾವಿತ್ರ್ಯದ ಕಲ್ಪನೆಯು ಜಾತಿಯ ಒಂದು ವೈಶಿಷ್ಟ್ಯವಾಗಿರುವುದು. ಜಾತಿಯನ್ನು ವ್ಯಾಖ್ಯಾನಿಸಿಕೊಳ್ಳುವ ಹಂತದಲ್ಲಿ ಪಾವಿತ್ರ್ಯದ ಕಲ್ಪನೆ ಕೇವಲ ಅನುಷಂಗಿಕವಾದುದು, ಇದು ನೇರವಾಗಿ ವಿವಾಹಕ್ಕೆ ಸಂಬಂಧಿಸಿದ್ದು ಜಾತಿಪದ್ಧತಿ ಕುರಿತು ಅಂಬೇಡ್ಕರ್ ಹೀಗೆ ಹೇಳುತ್ತಾರೆ "ಜಾತಿಯ ಏಕೈಕ ಸಾರವೆಂದು ಕರೆಯ ಬಹುದಾಗಿದ್ದು ಪ್ರತಿಬಂಧನೆ ಅಥವಾ ಅಂತರಜಾತೀಯ ವಿವಾಹವಿಲ್ಲದಿರುವಿಕೆಯೊಂದೇ. ಇದನ್ನು ಇನ್ನು ಸಂಕ್ಷಿಪ್ತವಾಗಿ ಸ್ವಜಾತಿ ವಿವಾಹವೊಂದೇ ಎನ್ನುತ್ತಾರೆ."[೩] ಆದರೆ ಇದನ್ನು ಮಾನವ ಕುಲಶಾಸ್ತ್ರದಿಂದ ಕೆಲವರು ನಿರಾಕರಿಸಬಹುದು. ಏಕೆಂದರೆ ಜಾತಿ ಸಮಸ್ಯೆ ಹುಟ್ಟಲು ಅವಕಾಶ ಕೊಡದಂತಹ ಸ್ವಜಾತಿ ವಿವಾಹವಿರುವ ಗುಂಪುಗಳು ಇವೆ. ಸಾಮಾನ್ಯ ರೀತಿಯಲ್ಲಿ ಇದು ಸರಿಯಿರಬಹುದು. ಸಾಂಸ್ಕೃತಿಕವಾಗಿ ಭಿನ್ನವಾದ ಸ್ವಜಾತಿ ವಿವಾಹ ಸಮಾಜಗಳು ಹೆಚ್ಚು ಕಡಿಮೆ ಬೇರೆ ಬೇರೆಯಾದ ಸ್ಥಳಗಳಲ್ಲಿ ತಮ್ಮ ವಾಸದ ನೆಲೆಗಳನ್ನು ಹೊಂದಿದ್ದು ಅವರಲ್ಲಿ ಪರಸ್ಪರ ವ್ಯವಹಾರ ಅಗತ್ಯವಿಲ್ಲ ಎಂಬುದು ವಾಸ್ತವ ಸತ್ಯ. ಈ ಹೇಳಿಕೆಯನ್ನು ಪುಷ್ಟೀಕರ ವಾಗಿಸಲು ಸಂಯುಕ್ತ ಸಂಸ್ಥಾನಗಳಲ್ಲಿರುವ ಅಮೆರಿಕ ಇಂಡಿಯನ್ಸ್ ಎಂಬ ಹೆಸರಿನಿಂದ ಕರೆಯಲಾಗುವ "ನೀಗ್ರೋಗಳು, ಬಿಳಿಯರು ಮತ್ತು ವಿವಿಧ ಆದಿವಾಸಿ ಗುಂಪುಗಳನ್ನು ನಿದರ್ಶನ ಗಳಾಗಿ ನೀಡುವುದನ್ನು ಪ್ರಸ್ತಾಪಿಸುವ ಅಂಬೇಡ್ಕರ್ ಭಾರತದ ಸಂದರ್ಭ ಬೇರೆ ಎಂದು ವಾದಿಸು ತ್ತಾರೆ. ಅಂದರೆ ಭಾರತದ ಜನರು ಒಟ್ಟಾರೆಯಾಗಿ ಒಂದೇ ಬಗೆಯವರು ನಿರ್ದಿಷ್ಟ ವಲಯ

ಗಳನ್ನು ಹೊಂದಿರುವ ಭಾರತದ ವಿವಿಧ ಜನಾಂಗಗಳು ಬಹುಮಟ್ಟಿಗೆ ಒಬ್ಬರೊಡನೆ ಒಬ್ಬರು ಮಿಳಿತವಾಗಿದ್ದಾರೆ. ಸಾಂಸ್ಕೃತಿಕ ಏಕತೆಯನ್ನು ಪಡೆದಿದ್ದಾರೆ. ಇದೊಂದೇ ಸಮರೂಪ ಜನಾಂಗದ ಒರೆಗಲ್ಲು. ಈ ಸಮರೂಪತೆಯನ್ನು ಆಧರಿಸುವಾಗ ಸ್ವಜಾತಿ ವಿವಾಹ ಸಮಾಜ ಅಥವಾ ಆದಿವಾಸಿ ಗುಂಪುಗಳ ಹತ್ತಿರದ ರಕ್ತ ಸಂಬಂಧ ಮಾತ್ರದಿಂದ ರಚಿತವಾದ ಸಂದರ್ಭ ದಲ್ಲಿ ಸಂಪೂರ್ಣವಾಗಿ ಕಾಣದ ಜಾತಿಯ ಒಂದು ಹೊಸ ಸ್ವರೂಪದ ಸಮಸ್ಯೆಯಾಗುತ್ತದೆ."[೪]

ಹಾಗಾಗಿ ಭಾರತದಲ್ಲಿ ಜಾತಿಯೆಂದರೆ ಸ್ವಜಾತಿ ವಿವಾಹ ಪದ್ಧತಿಯ ಮೂಲಕ ಒಂದು ಇನ್ನೊಂದರೊಡನೆ ಸಮ್ಮಿಳಿತವಾಗದಂತೆ ತಡೆಯುತ್ತದೆ ಎಂದು ವಾದಿಸುತ್ತಾರೆ.

ಹೀಗೆ ಅಂಬೇಡ್ಕರ್ ಜಾತಿ ಪದ್ಧತಿಯ ವ್ಯಾಖ್ಯಾನವನ್ನು ವಿವಾಹ ಸಂಸ್ಥೆಯೊಂದಿಗೆ ಜೋಡಿಸಿದ್ದು ಭಾರತದ ವಿವಾಹ ಸಂಸ್ಥೆಯು ಜಾತಿಯ ಚೌಕಟ್ಟಿನೊಳಗೆ ಅಸ್ತಿತ್ವ ಪಡೆದಿರು ವುದು. ಜಾತಿ ಮತ್ತು ಪಿತೃಪ್ರಧಾನತೆಯ ಕೇಂದ್ರ ವಿವಾಹ ಸಂಸ್ಥೆಯಾಗಿರುವುದು. ಜಾತಿ ಮತ್ತು ಲಿಂಗದ ಪ್ರಶ್ನೆಯನ್ನು ಒಗ್ಗೂಡಿಸುವ ಅಗತ್ಯವನ್ನು ಪ್ರತಿಪಾದಿಸುತ್ತದೆ. ಸ್ವಜಾತಿ ವಿವಾಹದ ಮೂಲಕ ಸ್ತ್ರೀಯ ಲೈಂಗಿಕತೆಯ ಮೇಲಿನ ಹಕ್ಕನ್ನು ಜಾತಿಗಳಿಗೆ ವಹಿಸಿಕೊಡುವುದು ಜಾತಿಯೊಳ ಗಿಂದಲೇ ಹೆಣ್ಣಿನ ಮೇಲಿನ ಪುರುಷ ಅಧಿಕಾರವನ್ನು ಬಲಪಡಿಸುತ್ತದೆ. ಈ ಪುರುಷಾಧಿಕಾರವು ಜಾತಿಪದ್ಧತಿಯನ್ನು ಮುಂದುವರೆಸುತ್ತದೆ. ಇದು ಜಾತಿಪದ್ಧತಿಯ ನಿಜವಾದ ನೆಲೆ. ಜಾತಿ ಯೊಂದಿಗೆ ವಿಧವಾ, ಸತಿ, ಬಾಲ್ಯವಿವಾಹ ಮುಂತಾದ ಆಚರಣೆಗಳು ರೂಢಿಗೆ ಬರುತ್ತವೆ. ಪಾವಿತ್ರ್ಯದ ಕಲ್ಪನೆ ಬಲಗೊಳ್ಳುತ್ತದೆ. ಹೆಣ್ಣಿನ ಪಾವಿತ್ರ್ಯ ಹಾಗು ಜಾತಿಯ ಪಾವಿತ್ರ್ಯಗಳು ಒಂದಾಗುತ್ತದೆ. ಈ ಪಾವಿತ್ರ್ಯ ನಾಶಕ್ಕೆ ಶಿಕ್ಷೆಗಳು ಕಠಿಣಗೊಳ್ಳುತ್ತವೆ. ಇದನ್ನು ಒಂದು ಕಾಲ್ಪನಿಕ ಗುಂಪಿನ ಮೂಲಕ ಸ್ವಜಾತಿ ವಿವಾಹ ಜಾರಿಗೊಳಿಸುವ ವಿಧಾನಗಳನ್ನು ಪರಿಶೀಲಿಸುತ್ತಾರೆ.

"ಒಂದು ಗುಂಪು ತನ್ನ ಜಾತಿಯಲ್ಲೇ ಮದುವೆ ಮಾಡಿಕೊಳ್ಳಲು ಇಚ್ಛಿಸಿದರೆ ಹೊರಗಿನ ಗುಂಪುಗಳೊಂದಿಗೆ ಅಂತರ್ಜಾತಿಯ ಮದುವೆ ಮಾಡಿಕೊಳ್ಳುವುದರ ವಿರುದ್ಧ ಹೇರುವ ಔಪಚಾರಿಕ ನಿಷೇಧ ಅಷ್ಟೊಂದು ಫಲಕಾರಿಯಾಗಲು ಸಾಧ್ಯವಿಲ್ಲ. ಹಾಗಾಗಿ ಎಲ್ಲ ಗುಂಪುಗಳು ಕಲೆಯದಂತೆ ಒಂದು ಗೆರೆಯೆಳೆದು ಆವೃತ್ತದಿಂದ ಆಚೆಗೆ ಜನರು ಮದುವೆ ಒಪ್ಪಂದಗಳನ್ನು ಮಾಡಿಕೊಡದೆಂದು ಹದ್ದಿನಲ್ಲಿಡುವುದು ಅನಿವಾರ್ಯವಾಗಿದೆ."[೫]

ಆಗ ಹೊರಗಿನವರೊಂದಿಗೆ ಮದುವೆಗಳನ್ನು ತಡೆಹಿಡಿಯುವ ಆ ಗೆರೆಯು ಗುಂಪುನೊಳಗೆ ಸಮಸ್ಯೆಗಳನ್ನು ಹುಟ್ಟಿಸುತ್ತದೆ. ಅವುಗಳನ್ನು ಪರಿಹರಿಸುವುದು ಸುಲಭದ ಮಾತಲ್ಲ. ಈ ಸಮಸ್ಯೆ ಗಳನ್ನು ಸಂಕ್ಷೇಪಿಸಿ ಹೇಳುವುದಾದರೆ ರೂಢಿಯ ಒಂದು ಗುಂಪಿನಲ್ಲಿ ಹೆಂಗಸರು ಗಂಡಸರೂ ಹೆಚ್ಚುಕಡಿಮೆ ಸಮನಾಗಿ ಹಂಚಿಕೊಂಡಿರುತ್ತಾರೆ. ಸಾಮಾನ್ಯವಾಗಿ ಹೇಳುವುದಾದರೆ ಸಮ ವಯಸ್ಕರಲ್ಲಿ ಸಮಾನತೆಯೊಂದು ಇದ್ದೇ ಇರುತ್ತದೆ. ಆದರೆ ವಾಸ್ತವ ಸಮಾಜಗಳಲ್ಲಿ ಯಾವಾಗಲೂ ಈ ಸಮಾನತೆಯು ಅರಿವಿಗೆ ಬರುವುದೇ ಇಲ್ಲ. ಅದೇ ಕಾಲದಲ್ಲಿ ತಾನೊಂದು ಜಾತಿಯಾಗ ಬಯಸುವ ಗುಂಪಿಗೆ ಲಿಂಗಗಳ ನಡುವೆ ಸಮಾನತೆಯನ್ನುಳಿಸಿ ಕಾಪಾಡುವುದು ಅಂತಿಮ ಗುರಿಯಾಗಿರುತ್ತದೆ. ಏಕೆಂದರೆ ಅದಿಲ್ಲದೆ ಸ್ವಜಾತಿ ವಿವಾಹ ಅಸ್ತಿತ್ವದಲ್ಲಿರುವುದು

ಹಿಂದಿನಂತೆ ಸಾಧ್ಯವಾಗುವುದಿಲ್ಲ ಅಂದರೆ ಸ್ವಜಾತಿ ವಿವಾಹ ಪದ್ಧತಿಯನ್ನು ಸಂರಕ್ಷಿಸಿಬೇಕಾದಲ್ಲಿ ತಮ್ಮೊಳಗಿನವರೊಂದಿಗೆ ಲೈಂಗಿಕ ಸಂಪರ್ಕದ ಹಕ್ಕನ್ನು ಕಲ್ಪಿಸಿಕೊಡಬೇಕು. ಇಲ್ಲವಾದಲ್ಲಿ ಸ್ವಜಾತಿ ವಿವಾಹ ಪದ್ಧತಿಯನ್ನು ಮುರಿಯುತ್ತಾರೆ. ಅದ್ದರಿಂದ ಜಾತಿಯಾಗಿ ಉಳಿಯಬೇಕೆಂದು ಬಯಸುವ ಗುಂಪಿನೊಳಗೆ ಸ್ತ್ರೀ-ಪುರುಷರ ಸಂಖ್ಯೆಯಲ್ಲಿ ಸಮಾನತೆಯನ್ನು ಉಳಿಸಿಕೊಂಡು ಬರುವುದು ತೀವ್ರ ಅಗತ್ಯವಾಗಿತ್ತು.

ಹೀಗಾಗಿ ಜಾತಿ ಸಮಸ್ಯೆಯು ಅಂತಿಮವಾಗಿ ಮದುವೆಗೆ ಪ್ರಾಪ್ತವಯಸ್ಕರಾದ ಸ್ತ್ರೀ-ಪುರುಷ ವೈರುಧ್ಯಗಳನ್ನು ಸರಿಪಡಿಸುವ ಒಂದು ಅಂಶವಾಗಿ ಮಾರ್ಪಡುತ್ತದೆ. ಇದನ್ನು ವಿವಾಹ ಸಂಸ್ಥೆಯಲ್ಲಿರುವ ಗಂಡು-ಹೆಣ್ಣುಗಳ ನೆಲೆಯಿಂದ ವಿಸ್ತರಿಸುವುದಾದರೆ ಹೆಂಡತಿಗಿಂತ ಮುಂಚೆಯೇ ಗಂಡ ಸತ್ತು ಒಬ್ಬ ಹೆಚ್ಚುವರಿ ಹೆಣ್ಣನ್ನು ಉಳಿಸಿ ಹೋಗಬಹುದು. ಅಂತಹ ಗಂಡನನ್ನು ಕಳೆದು ಕೊಂಡ ಹೆಂಡತಿಯನ್ನು ಜಾತಿಯಲ್ಲಿ ಉಳಿಸಿಕೊಳ್ಳಬೇಕಾಗುತ್ತದೆ. ಹಾಗೆಯೇ ಹೆಂಡತಿ ಸತ್ತು ಗಂಡ ಉಳಿದು ಹೆಚ್ಚುವರಿ ಮನುಷ್ಯನಾಗಲೂಬಹುದು. ಹೆಂಡತಿಯನ್ನು ಕಳೆದುಕೊಂಡ ಗಂಡನನ್ನು ಜಾತಿಯಲ್ಲಿ ಉಳಿಸಿಕೊಳ್ಳಬೇಕಾಗುತ್ತವೆ. ಇಲ್ಲವಾದರೆ ಅವರು ಗುಂಪಿನಿಂದ ಹೊರಗೆ ಹೋಗಿ ಅಂತರ್‌ಜಾತೀಯ ವಿವಾಹದ ಮೂಲಕ ಆ ಜಾತಿಯ ವಿವಾಹ ಪದ್ಧತಿಯನ್ನು ಮುರಿಯುತ್ತಾರೆ. ಅಂದರೆ ಜಾತಿಯ ಸ್ವಗೋತ್ರ ವಿವಾಹ ಪದ್ಧತಿಯನ್ನು ಕಾಪಾಡುವ ಸಲುವಾಗಿ ಎರಡು ರೀತಿಯಲ್ಲಿ ಆಕೆಯ ವಿಷಯವನ್ನು ನಿಭಾಯಿಸುತ್ತಾರೆ.

ಪ್ರಥಮವಾಗಿ "ಅವಳ ಮೃತಗಂಡನ ಚಿತೆಯಲ್ಲೇ ಅವಳನ್ನು ಸುಟ್ಟು ಕಥೆ ಮುಗಿಸಬಹುದು. ಆದರೆ ಲೈಂಗಿಕ ಅಸಮಾನತೆಯ ಸಮಸ್ಯೆಯನ್ನು ನಿವಾರಿಸುವಲ್ಲಿ ಇದೊಂದು ಅಪ್ರಾಯೋಗಿಕ ವಿಧಾನವಾಯಿತು. ಕೆಲವು ಕಡೆಗಳಲ್ಲಿ ಇದು ಸರಿ ಹೋಗಬಹುದು. ಅದರಿಂದಾಗಿ ಪ್ರತಿಯೊಬ್ಬ ಹೆಚ್ಚುವರಿ ಸ್ತ್ರೀಯನ್ನು ಹೀಗೆ ನಿಭಾಯಿಸಲಾಗದು. ಅದು ಸುಲಭ ಪರಿಹಾರವಾದರೂ ಕಷ್ಟ ಸಾಧ್ಯವಾಗಿದೆ. ಈ ರೀತಿಯಲ್ಲಿ ಹೆಚ್ಚುವರಿ ಸ್ತ್ರೀ (ವಿಧವೆ)ಯನ್ನು ಗುಂಪಿನಲ್ಲೇ ಉಳಿಯುತ್ತಾಳೆ. ಆದರೆ ಅವಳ ಇರುವಿಕೆಯಲ್ಲಿ ಕೇವಲ ಎರಡು ಅಪಾಯಗಳಿವೆ. ಆಕೆ ಜಾತಿಯ ಹೊರಗೆ ಮದುವೆಯಾಗಿ ಸ್ವಜಾತಿ ಪದ್ಧತಿಯನ್ನು ಉಲ್ಲಂಘಿಸಬಹುದು. ಇಲ್ಲವೆ ಆಕೆ ಜಾತಿಯೊಳಗೆ ಮದುವೆಯಾಗಲೂಬಹುದು ಮತ್ತು ಅದ್ದರಿಂದ ಯಾವುದೇ ರೀತಿಯಲ್ಲಿ ಆಕೆಯೊಂದು ಪಿಡುಗು. ಆಕೆಯು ಸತ್ತ ಗಂಡನೊಂದಿಗೆ ಆಕೆಯನ್ನು ದಹಿಸಲಾಗದಿದ್ದರೂ ಯಾವುದಾದರೊಂದನ್ನು ಮಾಡಲೇಬೇಕು" ಎಂಬುದನ್ನು ಗುರುತಿಸುತ್ತಾರೆ.[೬]

ಎರಡನೆಯ ಪರಿಹಾರೋಪಾಯವೆಂದರೆ "ಅವಳಿಗೆ ಉಳಿದ ಜೀವನಪರ್ಯಂತ ವೈಧವ್ಯವನ್ನು ವಿಧಿಸುವುದು. ವಸ್ತುನಿಷ್ಠ ಪರಿಣಾಮದ ದೃಷ್ಟಿಕೋನವೆಂದಿರುವಂತೆ ವೈಧವ್ಯವನ್ನು ಹೇರುವುದಕ್ಕಿಂತಲೂ ಸುಡುವುದು (ಸತಿಪದ್ಧತಿ) ಉತ್ತಮ ಪರಿಹಾರ. ವಿಧವೆಯನ್ನು ಸುಡುವುದರಿಂದ ಒಬ್ಬ ಹೆಚ್ಚುವರಿ ಹೆಣ್ಣಿಗೆ ಸಂಭವಿಸಬಹುದಾದ ಎಲ್ಲ ಕೇಡುಗಳನ್ನು ನಿವಾರಿಸಿದಂತಾಗುತ್ತದೆ. ಸತ್ತು ಇಲ್ಲವಾಗುವುದರ ಮೂಲಕ ಆಕೆ ಜಾತಿಯ ಒಳಗಾಗಲೀ ಹೊರಗಾಗಲೀ ಮದುವೆಯಾಗುವ ಸಮಸ್ಯೆ ಇರುವುದಿಲ್ಲ." ಆದರೆ "ಹೀಗೆ ಸುಡುವುದಕ್ಕಿಂತಲೂ ಕಡ್ಡಾಯದ ವೈಧವ್ಯ ಅದು ಹೆಚ್ಚು

ವಾಸ್ತವಕ್ಕೆ ಇಳಿಸುವುದು ಸುಲಭ. ಇದು ಮಾನವೀಯವಾಗಿರುವುದಲ್ಲದೆ ಸತಿ ಹೋಗದಂತೆಯು ಹಾಗು ಪುನಃ ವಿವಾಹವಾಗದಂತೆಯು ತಡೆದು ಕಾಪಾಡುತ್ತದೆ. ಗುಂಪಿನ ನೈತಿಕತೆಯನ್ನು ರಕ್ಷಿಸುವಲ್ಲಿ ವಿಫಲವಾಗುವ ಸಾಧ್ಯತೆಗಳಿವೆ. ಕಡ್ಡಾಯ ವೈಧವ್ಯದಲ್ಲಿ ಆದರೆ ಸ್ತ್ರೀ ಇರುತ್ತಾಳೆಂಬ ನಂಬಿಕೆ ಇದ್ದರೂ ಆಕೆ ತನ್ನ ಜಾತಿ ಸಮಾಜದವರು ಎಳೆದ ಲಕ್ಷ್ಮಣ ರೇಖೆಯನ್ನು ದಾಟಬಹುದು. ಆದ್ದರಿಂದ ಮರುಳಾದ ಪರಿಸ್ಥಿತಿಯಲ್ಲಿರುವಂತೆ ಆಕೆಯನ್ನು ಕೀಳದರ್ಜೆಗೆ ಇಳಿಸಬಹುದು ಅಂದರೆ ಕೇಶಮುಂಡನೆ, ತಾಳಿ, ಕಾಲು ಉಂಗುರ ಇತ್ಯಾದಿ ಆಭರಣಗಳನ್ನು ತೆಗೆಯಬಹುದು.[೭]

ಅದೇ ತರಹ ಹೆಚ್ಚುವರಿ ಗಂಡಸಿನ ಸಂದರ್ಭವನ್ನು ಪರಿಶೀಲಿಸುವ ಅಂಬೇಡ್ಕರ್ "ತನ್ನನ್ನು ಒಂದು ಜಾತಿಗೊಳಪಡಿಸಲು ಇಚ್ಛಿಸುವ ಗುಂಪಿನಲ್ಲಿ ಹೆಚ್ಚುವರಿ ಹೆಣ್ಣಿನದಕ್ಕಿಂತ ಹೆಚ್ಚುವರಿ ಗಂಡಸಿನ (ವಿಧುರ) ಸಮಸ್ಯೆ ಇನ್ನು ಪ್ರಮುಖತರವಾಗಿದೆ ಮತ್ತು ಸಮಸ್ಯಾತ್ಮಕವಾಗಿದೆ. ಅನಾದಿ ಕಾಲದಿಂದಲೂ ಹೆಣ್ಣಿಗೆ ಹೋಲಿಸಿದಾಗ ಗಂಡು ಮೇಲುಗೈ ಪಡೆದಿದ್ದಾನೆ. ಎಲ್ಲ ಗುಂಪಿನಲ್ಲೂ ಆತ ಪ್ರಧಾನ ವ್ಯಕ್ತಿ. ಎರಡು ಲಿಂಗಗಳಲ್ಲಿ ಆತನಿಗೆ ಅಧಿಕತರವಾದ ಪ್ರತಿಷ್ಠೆಯಿದೆ. ಸ್ತ್ರೀಯ ಮೇಲಿನ ಅವನ ಈ ಸಾಂಪ್ರದಾಯಿಕವಾದ ಶ್ರೇಷ್ಠತೆಯಿಂದಾಗಿ ಆತನ ಅಪೇಕ್ಷೆಗಳನ್ನು ಯಾವಾಗಲೂ ಪರಿಶೀಲಿಸಲಾಗುತ್ತದೆ. ಇನ್ನೊಂದು ಕಡೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಎಲ್ಲ ಬಗೆಯ ಪಕ್ಷಪಾತ ಕಟ್ಟಳೆಗಳಿಗೂ ಸ್ತ್ರೀ ಸುಲಭವಾಗಿ ಬಲಿಯಾಗುತ್ತಿದ್ದಾಳೆ. ಆದರೆ ಗಂಡಸು ಕಟ್ಟಳೆಗಳನ್ನು ಮಾಡುವ ವ್ಯಕ್ತಿಯಾಗಿ ಅನೇಕ ಬಾರಿ ಅವುಗಳಿಗೆ ಅತೀತವಾಗಿದ್ದಾನೆ. ಪರಿಸ್ಥಿತಿ ಹೀಗಿರುವುದರಿಂದಾಗಿ ಒಂದು ಜಾತಿಯಲ್ಲಿ ಹೆಚ್ಚುವರಿ ಹೆಣ್ಣಿಗೆ ನೀವು ತೋರುವಂತಹ ವರ್ತನೆಯನ್ನು ಗಂಡಿಗೂ ತೋರಲಾಗುವುದಿಲ್ಲ."[೮]

ಈ ಹಿನ್ನೆಲೆಯಲ್ಲಿ "ಆತನನ್ನು ಸತ್ತ ಆತನ ಹೆಂಡತಿಯೊಂದಿಗೆ ಸುಡುವುದು ಎರಡು ರೀತಿಗಳಲ್ಲಿ ಕಷ್ಟಸಾಧ್ಯ. ಮೊದಲನೆಯದೆಂದರೆ ಆತ ಗಂಡಸು ಎಂಬುದೊ ಸರಳ ಕಾರಣಕ್ಕಾಗಿ ಆತನನ್ನು ಚಿತೆಯೇರಿಸಲು ಸಾಧ್ಯವಾಗುವುದಿಲ್ಲ. ಎರಡನೆಯದಾಗಿ, ಹಾಗೆ ಮಾಡಿದರೂ ಆ ಜಾತಿಗೆ ಒಬ್ಬ ಬಲಿಷ್ಠ ವ್ಯಕ್ತಿ ನಷ್ಟವಾಗುತ್ತಾನೆ. ಆದ್ದರಿಂದ ಅವನನ್ನು ಪ್ರಶಸ್ತವಾಗಿಯೇ ನಿವಾರಿಸಿಕೊಳ್ಳಲು ಇನ್ನೆರಡು ಪರಿಹಾರಗಳುಳಿಯುತ್ತವೆ. ಪ್ರಶಸ್ತಿವಾಗಿಯೇ ಎಂದು ನಾನು ಹೇಳುತ್ತಿರುವುದು ಏಕೆಂದರೆ ಆತ ಗುಂಪಿಗೊಂದು 'ಆಸ್ತಿ'."[೯]

ಆತ ಗುಂಪಿಗೆ ಮುಖ್ಯವಾದದುರಿಂದಲೂ, "ಸ್ವಜಾತಿ ಪದ್ಧತಿಯನ್ನೇ ಮುಖ್ಯವಾಗಿರುವುದರಿಂದಲೂ ಇದರ ಪರಿಹಾರ ಎರಡು ಗುಂಪುಗಳಿಗೂ ಸಲ್ಲುವಂತೆ ಅವನಿಗೆ ವಿಧುರ, ಬ್ರಹ್ಮಚರ್ಯವನ್ನು ಹೇರುತ್ತವೆ. ಆದರೆ ಇದು ತಾತ್ವಿಕವಾಗಿಯೂ ಪ್ರಾಯೋಗಿಕವಾಗಿಯೂ ವಿಫಲಗೊಳ್ಳುತ್ತದೆ. ಒಂದು ಸಂಸ್ಕೃತ ಪಾರಿಭಾಷಿಕ ಶಬ್ದವನ್ನು ಬಳಸಿ ಹೇಳುವುದಾದರೆ ಅವನನ್ನು ಒಬ್ಬ 'ಗೃಹಸ್ಥ' (ಒಂದು ಕುಟುಂಬ ಪಾಲಕ) ನನ್ನಾಗಿ ಇಡುವುದು. ಜಾತಿ ಹಿತದೃಷ್ಟಿಯಿಂದಲೇ, ಆದರೆ ಜಾತಿಯೊಳಗೆ ಒಬ್ಬ ಹೆಂಡತಿಯನ್ನು ಅವನಿಗೆ ಒದಗಿಸುವುದೇ ಸಮಸ್ಯೆಯಾಗಿದೆ. ಹೊರನೋಟಕ್ಕೆ ಇದು ಅಸಾಧ್ಯ. ಏಕೆಂದರೆ ಒಂದು ಜಾತಿಯಲ್ಲಿರಬೇಕಾದ ಪ್ರಮಾಣವೆಂದರೆ ಒಂದು ಗುಂಪಿಗೆ ಒಂದು ಹೆಣ್ಣು ಎರಡು ಬಾರಿ ಮದುವೆ ಆಗುವ ಅವಕಾಶವನ್ನು ಯಾರೂ

ಹೊಂದಲಾಗದು. ಬಿಗಿಯಾಗಿ ತಾನೇ ಹಾಕಿರುವ ಒಂದು ಜಾತಿಯೊಳಗೆ ಮದುವಣಿಗರ ಬಳಿ ಹೋಗುವ ಮದುವಣಾಗಿತ್ತಿಯರು ಯಾವಾಗಲೂ ತಕ್ಕಷ್ಟೇ ಇರುತ್ತಾರೆ. ಇಂಥ ಸಂದರ್ಭಗಳಲ್ಲಿ ಹೆಚ್ಚುವರಿ ಗಂಡಸಿಗೆ ಆತನನ್ನು ಒಂದು ಗುಂಪಿಗೆ ಕಟ್ಟಿಹಾಕುವ ಸಲುವಾಗಿ ಮದುವೆಯಾಗಬೇಕಾದ ಹಂತವನ್ನು ಇನ್ನು ತಲುಪಿರದ, ಅಪ್ರಾಪ್ತ ವಯಸ್ಕ ವಧುವನ್ನು ಹೆಂಡತಿಯಾಗಿ ತುಂಬಿಸಬಹುದು. ಇದರಿಂದ ಆತನನ್ನು ಜಾತಿಯಲ್ಲೇ ಉಳಿಸಿದಂತಾಗಿರುತ್ತದೆ. ಜಾತಿಯಿಂದ ನಿರಂತರವಾಗಿ ಹೊರಗೆ ಹರಿಯುವ ಸಂಖ್ಯಾಬಲವನ್ನು ಈ ವಿಧಾನದಿಂದ ಸಂರಕ್ಷಿಸುವಂತಾಗುವುದಲ್ಲದೆ ಸ್ವಜಾತಿ ಪದ್ಧತಿ ಮತ್ತು ನೀತಿಗಳನ್ನು ಕಾಪಾಡಿದಂತಾಗುತ್ತದೆ.

ಒಟ್ಟಿನಲ್ಲಿ ಸ್ತ್ರೀ-ಪುರುಷ ನಡುವೆ ಇರುವ ಸಾಂಖ್ಯಿಕ ತಾರತಮ್ಯವನ್ನೇ ನಾಲ್ಕು ರೀತಿಗಳಿಂದ ಹೀಗೆ ಪಾಲಿಸುತ್ತದೆ :

೧. ತನ್ನ ಸತ್ತ ಗಂಡನೊಂದಿಗೆ ವಿಧವೆಯನ್ನು ಸುಡುವುದು - ಸತಿಪದ್ಧತಿ

೨. ಕಡ್ಡಾಯ ವೈಧವ್ಯ

೩. ವಿಧುರನ ಮೇಲೆ ಬ್ರಹ್ಮಚರ್ಯ ಹೇರುವುದು

೪. ಅಪ್ರಾಪ್ತ ವಯಸ್ಕಳೊಂದಿಗೆ ಅವರ ವಿವಾಹ - ಬಾಲ್ಯವಿವಾಹ

ಅಂದರೆ ಮಹಿಳೆ ಹಿನ್ನಲೆಯಲ್ಲಿ ಹಿಂದೂ ಸಮಾಜವು ತನ್ನ ಸಾಮಾಜಿಕ ನಡುವಳಿಕೆಯಲ್ಲಿ ಸಂಕೀರ್ಣವೆನಿಸಿದರೂ, ಮೇಲುನೋಟಕ್ಕೆ ಮೂರು ಪ್ರತ್ಯೇಕ ಸಂಪ್ರದಾಯಗಳು ವ್ಯಕ್ತವಾಗುತ್ತದೆ. ಅವುಗಳೆಂದರೆ :

೧. ಸತಿಪದ್ಧತಿ

೨. ವೈಧವ್ಯ

೩. ಬಾಲ್ಯವಿವಾಹ

ಇವುಗಳಿಂದ ಜಾತಿಯನ್ನು ಕಾಪಾಡಲಾಗಿದೆ ಎನ್ನುತ್ತಾರೆ.[೧೦]

ಮೇಲಿನ ಎಲ್ಲ ಸಂಗತಿಗಳನ್ನು ಹೀಗೆ ಗ್ರಹಿಸಬಹುದು. ಅಂಬೇಡ್ಕರ್ ಅವರ ಈ ಚಿಂತನೆಯು ವಸಾಹತು ಸಂದರ್ಭದ ಭಿನ್ನವಾದ ಚಿಂತನಾಕ್ರಮವಾಗಿದೆ. ಅಂದರೆ ಅದು ಮಹಿಳೆ ಮತ್ತು ಜಾತಿಯ ಪ್ರಶ್ನೆಗಳನ್ನು ಇಂಡಿಯಾದ ಸಂಸ್ಕೃತಿಯ ಸಂದರ್ಭದಲ್ಲಿ ಪ್ರಸ್ತುತಪಡಿಸುತ್ತದೆ. ಅಂದರೆ ಭಾರತದ ಜನಾಂಗಗಳು ಅಂತರ ಸಂಬಂಧವಿದ್ದು, ಅಖಂಡವಾದ ಸಾಂಸ್ಕೃತಿಕ ಏಕತೆಯನ್ನು ಪಡೆದಿವೆ. ಹಾಗಾಗಿ, ಭಾರತದ ಆದಿವಾಸಿ ಸಮಾಜ ಜಾತಿ, ಲಿಂಗ ತಾರತಮ್ಯಕ್ಕೆ ಹೊರತಾದದ್ದಾಗಿದೆ. ಆದರೆ ಈ ಸಮಾಜದ ಮೇಲಿನ ಆರ್ಯರ ಅಂದರೆ ವೈದಿಕ ಸಮಾಜದ ಸ್ಥಾಪನೆ. ಲಿಂಗ ಮತ್ತು ಜಾತಿ ತಾರತಮ್ಯ ಹೇರಲ್ಪಟ್ಟಿತು. ಆದ್ದರಿಂದ ಪುರುಷ-ಪುರುಷ, ಮಹಿಳೆ-ಮಹಿಳೆ, ಪುರುಷ-ಮಹಿಳೆ, ಮಹಿಳೆ-ಪುರುಷರ ನಡುವೆ ಪ್ರಧಾನ-ಅಧೀನ ನೆಲೆಗಳು ಇವೆ. ಇವುಗಳಲ್ಲಿನ ತಾರತಮ್ಯ ಧೋರಣೆ ಅಸಮಾನತೆಯನ್ನು ಸೃಷ್ಟಿಸುತ್ತದೆ. ಅಲ್ಲದೆ ಮಹಿಳೆಯರ ಸಂಬಂಧದಲ್ಲಿ ಸಮಸ್ಯೆಯಾಗಿ ಪ್ರಸ್ತುತ ಪಡೆಯುತ್ತದೆ. ಆದ್ದರಿಂದ ಭಾರತದ ಮಹಿಳೆಯರ ಎಲ್ಲ ಸಮಸ್ಯೆಗಳು ಜಾತಿಯಿಂದ ನಿಷ್ಪನ್ನಗೊಂಡಿವೆ.

ಈ ಹಿನ್ನೆಲೆಯಲ್ಲಿ ಅಂಬೇಡ್ಕರ್ ಸಹ ಸುಧಾರಣಾವಾದಿಗಳು ಕೈಗೆತ್ತಿಕೊಂಡಿರುವ ಸತಿ, ವಿಧವಾ, ಬಾಲ್ಯವಿವಾಹ ಇತ್ಯಾದಿ ವಿಷಯಗಳನ್ನೇ ಕೈಗೆತ್ತಿಕೊಂಡರೂ ಅದನ್ನು ಭಿನ್ನವಾಗಿ ವ್ಯಾಖ್ಯಾನಿಸಲು ಪ್ರಯತ್ನಿಸುವುದು ಗಮನಾರ್ಹವಾದುದಾಗಿದೆ. ಅವರ ಪ್ರಕಾರ ಬಹುಪತ್ನಿತ್ವ, ಅಸಮವಿವಾಹ, ವೈಧವ್ಯ ಆಚರಣೆ, ಸತಿ ಇತ್ಯಾದಿ ಆಚರಣೆಗಳಿಗೆ ಸ್ವಜಾತಿ ವಿವಾಹ ಪದ್ಧತಿಯೇ ಕಾರಣ. ಜಾತಿ ಸಮಸ್ಯೆಯು ಅಂತಿಮವಾಗಿ ಮದುವೆಗೆ ಪ್ರಾಪ್ತವಯಸ್ಕರಾದ ಸ್ತ್ರೀ-ಪುರುಷ ವೈರುಧ್ಯಗಳನ್ನು ಸರಿಪಡಿಸುವ ಒಂದು ಅಂಶವಾಗಿ ಮಾರ್ಪಡುತ್ತದೆ. ಜಾತಿಯೊಳಗೆ ಉಳಿಯ ಬೇಕೆಂಬ ಘಟಕಕ್ಕೆ ಸ್ತ್ರೀ-ಪುರುಷರ ಸಂಖ್ಯೆಯಲ್ಲಿ ಸಮಾನತೆ ಇರಬೇಕು. ಆದರೆ ಇದು ಸಾಧ್ಯವಿಲ್ಲ. ಹುಟ್ಟಿನಲ್ಲಾಗಲಿ, ಮರಣದಲ್ಲಾಗಲಿ ಇದು ಹೆಚ್ಚುವರಿಯಾದ ಗಂಡು ಹೆಣ್ಣನ್ನು ಸಮುದಾಯ ದಲ್ಲಿ ಸೃಷ್ಟಿಸುತ್ತದೆ. ಹಾಗೆ ಹೆಚ್ಚುವರಿಯಾದ ಹೆಣ್ಣನ್ನು ನಿವಾರಿಸುವ ವಿಧಾನವಾಗಿ ಸತಿಪದ್ಧತಿ, ವೈಧವ್ಯ ಹುಟ್ಟಿಕೊಳ್ಳುತ್ತವೆ. ಈ ಆಚರಣೆಗಳು ಹೆಚ್ಚುವರಿ ಹೆಣ್ಣನ್ನು ಸಮುದಾಯದೊಳಗೆ ಬಳಸುವ ಅಥವಾ ಕಳಿಸುವ ಮಾದರಿಗಳು. ಆದರೆ ಈ ಒತ್ತಡ ಹೆಚ್ಚುವರಿ ಗಂಡಿನ ಮೇಲಿ ರುವುದಿಲ್ಲ. ಬ್ರಹ್ಮಚರ್ಯ, ವಿವಾಹಬಾಹಿರ ಸಂಬಂಧ, ವರ್ಣಸಂಕರ ಇತ್ಯಾದಿಗಳಲ್ಲೆಲ್ಲಾ ಪುರುಷನಿಗೆ ಕೆಲವು ಹೆಚ್ಚಿನ ರಿಯಾಯತಿಗಳು ಸವಲತ್ತುಗಳು ಇವೆ. ಅದಕ್ಕಾಗಿ ಅಳದಲ್ಲಿ ಸತಿ, ವಿಧವಾ, ಬಾಲ್ಯವಿವಾಹ ಇತ್ಯಾದಿಗಳು ಜಾತಿ ಉಳಿವಿಗಾಗಿ ಇರುವಂತಹವು. ಅಂದರೆ ಮೇಲ್ಜಾತಿ, ಮತ್ತು ಕೆಳಜಾತಿ ಮಹಿಳೆಯರ ಸಮಸ್ಯೆಗಳು ಸ್ವಜಾತಿ ವಿವಾಹದಿಂದ ಉಳಿದಿವೆ ಅಷ್ಟೆ ಅಲ್ಲ ಅವು ಏಕರೂಪವಾದವು. ಆದ್ದರಿಂದಲೇ ಅಸ್ಪೃಶ್ಯತೆಯನ್ನು ಜಾತಿ ವ್ಯವಸ್ಥೆಯೊಂದಿಗೆ ಗ್ರಹಿಸಿದರು. ಆದರೆ ಅದೇ ಲಿಂಗಸಂಬಂಧ ಸಮಸ್ಯೆಯನ್ನು ಬ್ರಾಹ್ಮಣ ಪಿತೃಪ್ರಧಾನತೆಯೊಂದಿಗೆ ಗುರುತಿಸಿದರು. ಹಾಗಾಗಿ ಅಂತರ್‌ಜಾತಿ ವಿವಾಹ ಪರಿಕಲ್ಪನೆ ಮುಂದಿಟ್ಟರು. ಅದ್ದರಿಂದ ಐರೋಪ್ಯರ ಮತ್ತು ದೇಶಿಯ ಸುಧಾರಣಾವಾದಿಗಳ ಬಾಲ್ಯವಿವಾಹ, ಸತಿ, ವಿಧವಾ ಮೊದಲಾದ ಮಹಿಳಾ ಸಮಸ್ಯೆಗಳನ್ನು ಅಂತರ್‌ಜಾತಿ ವಿವಾಹದ ಮೂಲಕ ಮಾತ್ರ ನಿರ್ಮೂಲನೆ ಸಾಧ್ಯ. ಹಾಗಾಗಿ ಎಲ್ಲರು ಈ ವಿವಾಹದ ಪ್ರಕಾರದ ಕಡೆಗೆ ಗಮನಹರಿಸಬೇಕಾದ ತುರ್ತನ್ನು ಪ್ರಸ್ತುತ ಗೊಂಡಿತು. ಅಂದರೆ ಜಾತಿಪದ್ಧತಿಯ ನಿರಾಕರಣೆಯೊಂದಿಗೆ ಮಹಿಳೆ ಸಮಸ್ಯೆ ಪರಿಹಾರ ಹೊಂದಬಹುದಾದವು.

ಆದರೆ ಜಾತಿವ್ಯವಸ್ಥೆಯು ಬ್ರಾಹ್ಮಣರಿಂದ ನಿಷ್ಪನ್ನ ಆಗಿರುವುದರಿಂದ ಮೇಲ್ಜಾತಿಯ ಸಂರಕ್ಷತೆಯ(?) ಒಳಗಿರುವ ಮಹಿಳೆಯರು ಜಾತಿ ಪದ್ಧತಿಯ ಊರ್ಜಿತಕ್ಕಾಗಿ (ಸ್ವಯಂ) ಸತಿಯಾಗಬೇಕಾಗುತ್ತದೆ. ತನ್ನ ಸಮುದಾಯದ ಸ್ತ್ರೀಯನ್ನು ಬಲಿಕೊಡುವುದರ ಮೂಲಕ ಮೇಲ್ಜಾತಿಯ ಪುರಷ ತನ್ನ ಪಾವಿತ್ರ್ಯವನ್ನು ಪ್ರತಿಷ್ಠೆಯನ್ನು ಈಡೇರಿಸಿಕೊಳ್ಳುತ್ತಾನೆ. ಈ ಮೂಲಕ ಸಮಸ್ತ ಜನಸಮುದಾಯದ ಮೇಲಿನ ತನ್ನ ಹಕ್ಕನ್ನು ಸ್ಥಾಪಿಸಿಕೊಳ್ಳುತ್ತಾನೆ. ಇದು ಟಾರ್ಡೆ ಮಾನಸಿಕ ಸಿದ್ಧಾಂತ ನೆಲೆಯ ವಿಸ್ತರಿಸಲ್ಪಡುವುದರಿಂದ ನಂತರ ಕೆಳಜಾತಿಯ ಪುರುಷರು ಸಹ ಬ್ರಾಹ್ಮಣ ಮಾದರಿಯನ್ನೇ ಅನುಸರಿಸಿದರು. ಕೆಳಜಾತಿ ಮಹಿಳೆಯರು ಜಾತಿವ್ಯವಸ್ಥೆಯನ್ನು ಕಾಪಾಡಲು ತನ್ನ ಜಾತಿಪುರುಷರಿಗೆ ನಿಷ್ಠೆಯಿಂದ ಇರಬೇಕು. ಹಾಗೆಯೇ ಮೇಲ್ಜಾತಿ ಪುರುಷ

ನಿಗೆ ಕೆಳಜಾತಿ ಮಹಿಳೆಯರು ಸೊತ್ತಾಗಿರಬೇಕು. ಅಂದರೆ ತನ್ನ ಜಾತಿ ಪುರುಷನಿಗೆ ಹೆಂಡತಿಯಾದರೆ, ಮೇಲ್ಜಾತಿ ಪುರುಷರಿಗೆ ದೇವದಾಸಿ, ಲೈಂಗಿಕ ತೃಷೆ ತೀರಿಸುವ ವಸ್ತು ಆಗಬೇಕು. ಹಾಗಾಯೇ ಮೇಲ್ಜಾತಿ ಮಹಿಳೆಗೆ ದಾಸಿಯಾಗಿರಬೇಕು, ಅದು ಆಧುನಿಕ ಕುಟುಂಬಗಳಲ್ಲಿ ಮನೆ ಕೆಲಸ ಮಾಡುವವರ ರೂಪ ಪಡೆಯುತ್ತದೆ. ಹಾಗಾಗಿ ಅಂತರಜಾತಿ ವಿವಾಹದ ಮೂಲಕ ಇವುಗಳ ಒಳಗಿನ ಶ್ರೇಣೀಕರಣ ಕಡಿದು ಹೋಗುತ್ತದೆ. ಈ ಮೂಲಕ ಮಹಿಳೆ ಸಮಸ್ಯೆಗಳು ಪರಿಹಾರವಾಗುತ್ತವೆ ಎಂದು ಗ್ರಹಿಸಬಹುದು. ಅದ್ದರಿಂದಲೇ ಅಂಬೇಡ್ಕರ್ ಜಾತಿ ಹೋರಾಟವನ್ನು ಸಂಘಟಿಸುತ್ತಿದ್ದಾಗಲೂ ದಲಿತ ಮಹಿಳೆ ಸಮಾನಂತರ ಬ್ರಾಹ್ಮಣ ಮಹಿಳೆಯರ ಸಮಸ್ಯೆ ಪರಿಕಲ್ಪನೆಯಲ್ಲಿ ಪರಿಗಣಿಸುತ್ತಾರೆ. ಈ ಹಿನ್ನೆಲೆ ಜಾತಿ ನಿರ್ಮೂಲನೆಯಿಂದ ಮಹಿಳಾ ಸಮಸ್ಯೆಗೆ ಪರಿಹಾರ ಎಂಬುದನ್ನು ಪ್ರಸ್ತುತಗೊಂಡಿತ್ತು.

ಈ ಹಿನ್ನೆಲೆಯಲ್ಲಿ ವಿವಾಹ ಸಂಸ್ಥೆಯನ್ನು ಪ್ರಶ್ನಿಸಿದೆ ಉಳಿಸಿಕೊಂಡರು. ಅಂದರೆ ಜಾತಿ ಶ್ರೇಣೀಕರಣ ಕಡಿತಗೊಳಿಸಿ ಲಿಂಗಾಧಾರಿತ ಶ್ರೇಣೀಕರಣಗಳನ್ನು ವ್ಯವಸ್ಥೆ ಜಾತಿಯಾಗಿಸ ತೊಡಗಿದರು. ದಲಿತ ಮಹಿಳೆಯರ ವಿವಾಹದ ಕಡೆ ಗಮನಹರಿಸಬೇಕು ಎಂಬುದು ಅಂಬೇಡ್ಕರ್ ನಿಲುವು. ಈ ಕುರಿತು ಅವರು "೧೯೩೬ರಲ್ಲಿ ಶೋಷಣೆಗೊಳಪಟ್ಟ ದೇವದಾಸಿ, ಜೋಗತಿ, ಪತ್ರಿಜೆ ಆರಾಧನೆ ಮುಂತಾದ ವರ್ಗಗಳ ಮಹಿಳೆಯರ ಸಮಾವೇಶವು ಮುಂಬಯಿಯ ದಾಮೋದರ್ ಧಾಕರ್ಸಿ ಅಂಗಣದಲ್ಲಿ ನಡೆಯಿತು. ಆ ಸಂದರ್ಭದ ಅಂಬೇಡ್ಕರ್ ಮಾತುಗಳು ಮಹತ್ವವಾದುದು. ನಮ್ಮೊಂದಿಗೆ ನೀವು ನಿಮ್ಮ ಧರ್ಮವನ್ನು ಬದಲಾಯಿಸಿಕೊಳ್ಳುತ್ತಿರೋ, ಇಲ್ಲವೋ ಎಂಬ ಅಂಶ ನನಗೆ ಮುಖ್ಯವಲ್ಲ. ಆದರೆ ನೀವೂ ನಮ್ಮೊಂದಿಗೆ ಬಾಳಬೇಕಾದರೆ ನಿಮ್ಮ ಅವಮರ್ಯಾದೆಯ ಜೀವನವನ್ನು ಬಿಟ್ಟುಬಿಡಬೇಕು. ಪಾಶ್ಚಾತ್ಯ ಪದ್ಧತಿಗೆ ಎಳೆಯುವಂತಹ ಯಾವುದೇ ಪರಿಸರವಿಲ್ಲದೆ ನೀವು ಇತರ ವರ್ಗದ ಮಹಿಳೆಯರಂತೆ ವಿವಾಹವಾಗಿ ಗೃಹಕೃತ್ಯಗಳನ್ನು ತೊಡಗಬೇಕು ಎಂದು ನಾನು ನಿಮ್ಮನ್ನು ಒತ್ತಾಯಿಸುತ್ತೇನೆ ಎನ್ನುತ್ತಾರೆ."[೧೯]

ಒಟ್ಟಿನಲ್ಲಿ ಮೂಲ ಜಾತಿ ಚಿಂತಕರಾದ ಅಂಬೇಡ್ಕರ್ ಮಹಿಳಾ ಪ್ರಶ್ನೆ ಜಾತಿ ವ್ಯವಸ್ಥೆಯ ಒಳಗೆ ಗ್ರಹಿಸಿದರು. ಅಂದರೆ ಅಸ್ಪೃಶ್ಯತೆಯನ್ನು ಜಾತಿ ವ್ಯವಸ್ಥೆಯೊಂದಿಗೆ ಗುರುತಿಸಿದಂತೆ ಮಹಿಳೆ ಸಮಸ್ಯೆಯನ್ನು ಆಯಾ ಜಾತಿ ಪಿತೃಪ್ರಧಾನತೆಯೊಂದಿಗೆ ಗುರುತಿಸಿ ತಾತ್ವಿಕರಿಸಿದರೂ ವಿಸ್ತರಿಸಲಿಲ್ಲ. ಅಂದರೆ ಮಹಿಳಾ ಸಮಸ್ಯೆಯನ್ನು ಏಕರೂಪಗೊಳಿಸಿ ಬ್ರಾಹ್ಮಣ ಪಿತೃಪ್ರಧಾನತೆಯೊಂದಿಗೆ ಮುಖಾಮುಖಿಯಾಗಿಸಿದರು ಆದರೆ. ಆಯಾ ಜಾತಿ ಪಿತೃಪ್ರಧಾನತೆಗಳನ್ನು ಮುಖಾಮುಖಿ ಆಗಿಸುವಲ್ಲಿ ಉದಾರೀಕರಿಸುತ್ತಾರೆ. ತಮ್ಮ ಪಿತೃಪ್ರಧಾನ ಗುಣಲಕ್ಷಣಗಳನ್ನು ಗುರುತಿಸುವುದಿಲ್ಲ ಎನ್ನಬಹುದು. ಹಾಗಾಗಿ ಮಹಿಳಾ ಸಮಸ್ಯೆಯನ್ನು ಅಂತರಜಾತಿ ವಿವಾಹದ ಮೂಲಕ ಬಗೆಹರಿಸಬಹುದು ಎಂದು ಗ್ರಹಿಸಲಾಯಿತು. ಅದ್ದರಿಂದ ಇದು ಮಹಿಳಾ ಪ್ರಶ್ನೆಯನ್ನು ಏಕರೂಪಿ ನೆಲೆಯಲ್ಲಿ ಗುರುತಿಸುವ ಕ್ರಮ ವಸಾಹತು ಸಂದರ್ಭದ ಪ್ರಭಾವವನ್ನು ತೋರಿಸುತ್ತದೆ. ಅಲ್ಲದೆ ಪಿತೃಪ್ರಧಾನತೆ ಕೇಂದ್ರವಾದ ವಿವಾಹ ಸಂಬಂಧಿ ಲಿಂಗಾಧಾರಿತ

ಶ್ರೇಣೀಕರಣಗಳ ಕುರಿತಂತೆ ಚರ್ಚೆಗಳನ್ನು ಅಪ್ರಸ್ತುತವಾಗಿಸುತ್ತದೆ. ಜೊತೆಗೆ ಜಾತಿವ್ಯವಸ್ಥೆಯಲ್ಲಿ ಪಿತೃಪ್ರಧಾನತೆಯನ್ನು ಆಧರಿಸಿ ಸ್ತ್ರೀಯರ ಕುರಿತ ವಾದಗಳ ಅಗತ್ಯತೆಯನ್ನು ಪ್ರತಿಬಿಂಬಿಸುತ್ತದೆ.

ಅಂಬೇಡ್ಕರ್ ಒಪ್ಪುವ "ವಿವಾಹವು ಸ್ತ್ರೀ-ಪುರುಷರನ್ನು ಪ್ರತ್ಯೇಕ ಜಾತಿಯಾಗಿಸುತ್ತದೆ." ಇದರ ಬಗ್ಗೆ ಸ್ತ್ರೀವಾದದಲ್ಲಿ ಅನೇಕ ತಕರಾರುಗಳಿವೆ. ಏಕೆಂದರೆ ಇದು ಸ್ತ್ರೀದಾಸ್ಯದ ಪ್ರಶ್ನೆಯನ್ನು ವಿವಾಹ ಸಂಸ್ಥೆಯಿಂದ ವಿವರಿಸಬಯಸುತ್ತದೆ. ಅಂದರೆ ಶತಮಾನಗಳಿಂದ ಸಮಾಜದಲ್ಲಿ ಅಸ್ತಿತ್ವ ಉಳಿಸಿಕೊಂಡಿರುವ ವಿವಾಹ ಸಂಸ್ಥೆ ಹೆಣ್ಣು-ಗಂಡುಗಳ ಲೈಂಗಿಕತೆಯನ್ನು ಈಡೇರಿಸುತ್ತದೆ. ಆದರೆ ಇದು ಸ್ತ್ರೀ-ಪುರಷರನ್ನು ಸೇರಿಸುವುದಕ್ಕೆ ಅಷ್ಟೇ ಸೀಮಿತವಾಗದೆ ಅವರ ದೇಹ, ಬುದ್ಧಿ, ಮನಸ್ಸಿನಲ್ಲಿ ಪ್ರಧಾನ ಅಧೀನತೆಯನ್ನು ನಿರ್ಮಿಸಿದೆ. ಹಾಗಾಗಿ ಇದು ಲಿಂಗಾಧಾರಿತ ಶ್ರೇಣೀಕರಣಗಳನ್ನು ಉಳಿಸಿ ಬಿಟ್ಟಿದೆ. ಆದ್ದರಿಂದ ಸ್ತ್ರೀವಾದ ಮತ್ತು ಅದರ ಪ್ರಸ್ಥಾನಗಳು ಈ ಕುರಿತು ಅನೇಕ ವಾದಗಳನ್ನು ಹೂಡುತ್ತವೆ.

ಸ್ತ್ರೀವಾದಿಗಳ ಪ್ರಕಾರ ವಿವಾಹವೇ ಮಹಿಳೆಯ ಎಲ್ಲ ಸಮಸ್ಯೆಗಳ ಮೂಲ. ಈ ಕುರಿತು ಜ್ಯೂಲಿಯಟ್ ಹೇಳಿಕೆ ಗಮನಾರ್ಹವಾದುದು. "ಸ್ತ್ರೀ ಜಗತ್ತಿನೊಳಗೆ ಹೆಂಗಸಿನಿಂದಲೇ ಪೋಷಿತರಾಗುವ ಅವರಿಗೆ ಮುಖ್ಯ ಗುರಿ ಎಂದು ತೋರಿರುವುದು. ಮದುವೆ ಅಂದರೆ ವಾಸ್ತವಿಕವಾಗಿ ಗಂಡಸಿಗೆ ಅಧೀನವಾಗುವುದು" ಎಂದು ವ್ಯಾಖ್ಯಾನಿಸಿದ್ದಾಳೆ.[೨] ಇದರ ರಾಚನಿಕ ನೆಲೆಗಿಂತ ಅದರ ಅಂತಸತ್ವವನ್ನು ಪ್ರತಿರೋಧಿಸುವ ಸಿಮೋನದ ಬೋವಾ "ಹೆಂಗಸು ಗಂಡಿಸಿನೊಡನೆ ಸಂಬಂಧ ಹೊಂದಿರುವ ಮದುವೆ ಆಕೆಯ ಅಧೀನಸ್ಥಿತಿಗೆ ಕಾರಣವಲ್ಲ ಆಕೆ ಮದುವೆ ಸಂಬಂಧಕ್ಕೆ ಮಾತ್ರ ಕಟ್ಟುಬಿದ್ದಿರುವುದೇ ಅದಕ್ಕೆ ಮುಖ್ಯ ಕಾರಣ ಎನ್ನುತ್ತಾಳೆ.[೩]

ಒಟ್ಟಿನಲ್ಲಿ ವಿವಾಹ ಹೆಣ್ಣನ್ನು ಗಂಡಿಗೆ ಅಧೀನತೆ ಅಷ್ಟೆ ಒಳಪಡಿಸಿದೆ. ಅದು ನಿರಂತರವಾಗಿರಲು ಸ್ತ್ರೀ-ಪುರುಷರನ್ನು ಪ್ರತ್ಯೇಕವಾಗಿಸುವ ಲಿಂಗಾಧಾರಿತ ತಾರತಮ್ಯವನ್ನು ಸೃಷ್ಟಿಸುತ್ತದೆ. ಈ ಕಾರಣಕ್ಕಾಗಿಯೇ ಪ್ರಪಂಚದಲ್ಲಿ ಹೆಣ್ಣು ಎನ್ನುವುದೇ ಒಂದು ಪ್ರತ್ಯೇಕ ಸಮುದಾಯವಾಗಿ ಗುರುತಿಸಿಕೊಳ್ಳುತ್ತಿದೆ. ತನ್ನ ವಿಸ್ಮೃತಿಯನ್ನು ಶೋಧನೆಗೆ ಒಳಪಡಿಸಲು ತಹತಹಿಸುತ್ತಿದೆ.

ಆದ್ದರಿಂದ ಸಮಾಜದ ಪರಿಗಣನೆಯಲ್ಲಿ ಹೆಣ್ಣು ಎಂಬುದು ಒಂದು ಪ್ರತ್ಯೇಕ ಜಾತಿ ಆಗಿದೆ. ಮಹಿಳೆಯರೇನೂ ಹೀಗೆ ಪ್ರತ್ಯೇಕ ಜಾತಿಯಾಗಿ ಉಳಿಯಲು ಬಯಸುವುದಿಲ್ಲವಾದರೂ ಇದೊಂದು ಸಾಮಾಜಿಕ ವಾಸ್ತವವಂತೂ ಆಗಿದೆ ಎಂದ ಮೇಲೆ ಈ ಪ್ರಶ್ನೆ ಮಹಿಳಾ ಸಮುದಾಯದಿಂದ ಅಸ್ತಿತ್ವದ ಪ್ರಶ್ನೆಯು ಹೌದು. ಜಗತ್ತಿನ ಬಹುತೇಕ ಸಮುದಾಯಗಳಲ್ಲಿ ಹೆಣ್ಣು ಸಮುದಾಯದಿಂದ ಪ್ರತ್ಯೇಕವಾಗಿ ಉಳಿಯಲು ಸಾಧ್ಯವಿಲ್ಲ ಒಂದು ವೇಳೆ ಉಳಿದರೂ ಸ್ತ್ರೀಜಾತಿಯನ್ನು ಪ್ರತ್ಯೇಕಿಸಿರುವುದು ಅಧೀನ ದರ್ಜೆಯನ್ನು ನಿಗಧಿಪಡಿಸುವ ಹುನ್ನಾರವಾಗಿಯೇ ಕಾರ್ಯನಿರತವಾಗಿವೆ. ಹೆಣ್ಣಿಗೇನೂ ತನ್ನ ಪಾಡು ತನಗೆ ಎಂಬಂತೆ ಪುರುಷನಿಂದ ವಿಮೋಚನೆಯೇನೂ ದೊರೆಯುವುದಿಲ್ಲ.

ಪಿತೃಪ್ರಧಾನ ಸಮಾಜವು ರೂಢಿಸಿಕೊಂಡ ಈ ಕ್ರಮವನ್ನು ಮುಂದುವರೆಸಿ ಸ್ತ್ರೀಜಾತಿಯನ್ನು ಒಂದಾಗಿ ಪರಿಭಾವಿಸಿ ಸ್ತ್ರೀ ವಾದವನ್ನು ನಿರ್ವಚಿಸುವ ಕ್ರಮವು ಅತ್ಯಂತ ಪ್ರಸಿದ್ಧವಾದುದೇ ಆಗಿದೆ

ಸ್ತ್ರೀಜಾತಿಯಲ್ಲಿ ಒಂದಾಗಬೇಕು ಎಂಬ ನೆಲೆಯಲ್ಲಿ ಜಾತಿ ಪರಿಕಲ್ಪನೆಯನ್ನೊಂದು ಗುಣಾತ್ಮಕ ಪರಿಕಲ್ಪನೆಯಾಗಿ ಬಳಸಲಾಗಿದೆ. ಸ್ತ್ರೀವಾದದೊಳಗೆ ಭಿನ್ನತೆಯ ಪ್ರಶ್ನೆ ತಲೆದೋರುವವರೆಗೆ ಈ ಪರಿಕಲ್ಪನೆ ಅಭಾದಿತವಾಗಿ ಬಳಕೆಗೊಂಡದ್ದೂ ಇದೆ. ಜಾತಿಯೆಂಬುದನ್ನು ಸಮಾನ ಗುಣ ಲಕ್ಷಣಗಳ ಸಮೂಹವನ್ನು ನಿರ್ವಚಿಸುವ, ಬೆಸೆಯುವ ಪರಿಭಾಷೆಯಾಗಿ ಗುರುತಿಸಿಕೊಂಡು ಜೈವಿಕವಾಗಿ ಪುರುಷರಿಗಿಂತ ಭಿನ್ನವಾದ ಹಾಗೂ ಸ್ತ್ರೀಯರಿಗೆಲ್ಲ ಸಮಾನವಾದ ಗುಣಲಕ್ಷಣವನ್ನು ಹೊಂದಿರುವ ಸ್ತ್ರೀ ಸಮೂಹವು ಒಂದು ಜಾತಿಯಾಗಿ ರೂಪುಗೊಂಡು ಸಮಾನತೆಗಾಗಿ ರಾಜಕೀಯ ಹೋರಾಟವೊಂದನ್ನು ಜಾಗತಿಕ ಮಟ್ಟದಲ್ಲಿ ರೂಪಿಸಲು ಸಾಧ್ಯ ಎಂಬ ನಂಬಿಕೆಯ ಮೇಲೆ ಸ್ತ್ರೀಯನ್ನೊಂದು ಏಕೀಕೃತ ಘಟಕವಾಗಿ ಭಾವಿಸುವ ಕ್ರಮವು ಆಧುನಿಕ ಚಿಂತನೆಯ ಭಾಗವಾಗಿತ್ತು. ಈ ಚಿಂತನಾಕ್ರಮ ಮಹಿಳೆಯು ಒಂದು ಜಾತಿಯೆಂಬುದಾಗಿ ಸ್ವೀಕರಿಸುವ ಮೂಲಕ ಜಾತಿ ಮತ್ತು ಮಹಿಳೆ ಪ್ರಶ್ನೆಯನ್ನು ಒಗ್ಗೂಡಿಸಲೆತ್ನಿಸಿತು.

ಆದರೆ ಆಧುನಿಕೋತ್ತರ ಚಿಂತನೆಯ ಸಂದರ್ಭವು ಜಾಗತಿಕ ಮಟ್ಟದಲ್ಲಿ ಸ್ತ್ರೀಯನ್ನೊಂದು ಜಾತಿಯಾಗಿ ಪರಿಭಾವಿಸುದರಲ್ಲಿ ಭಾರತೀಯ ನೆಲೆಯಲ್ಲಾದರೂ ಅದು ಸಾಧ್ಯವಾಗುವುದೇ ಎಂಬ ಪ್ರಶ್ನೆಯನ್ನು ಮುಂದಿಟ್ಟಿತು. 'ಸ್ತ್ರೀಜಾತಿ' ಎಂಬ ಪರಿಕಲ್ಪನೆಯಿಂದಾಗಿ ಪುರುಷ ಜಾತಿಯನ್ನು ನಿರ್ವಚನೆಗೊಳ್ಳುವುದರಲ್ಲಿ ಯಶಸ್ವಿಯಾದರೂ ಅದು ಸ್ತ್ರೀಯನ್ನೊಂದು ಏಕೀಕೃತ ಘಟಕವಾಗಿ ನಿರ್ವಚಿಸಿಕೊಡುವುದರಲ್ಲಿ ಸೋಲುತ್ತದೆ ಎಂಬುದು ಇಲ್ಲಿನ ಮಹತ್ವದ ಪ್ರಶ್ನೆ. ಏಕೆಂದರೆ ಮಹಿಳೆ ಎಂಬುದು ಕೇವಲ ಜೈವಿಕ ಘಟಕವಲ್ಲ. ಅದೊಂದು ಸಾಮಾಜಿಕ, ರಾಜಕೀಯ ಘಟಕವಾಗಿದೆ. ಇದು ಹಲವು ಸಾಮಾಜಿಕ ಸಂಸ್ಥೆಗಳ ಪ್ರಭಾವ ಒತ್ತಡಗಳಿಗೆ ಒಳಗಾಗುತ್ತಲೇ ರೂಪುಗೊಂಡಿದೆ. ಹಾಗೂ ಈ ಎಲ್ಲಾ ಸಂಸ್ಥೆಗಳ ಪ್ರಭಾವದಿಂದ ಸ್ತ್ರೀ ಮುಕ್ತವಾಗಿಲ್ಲ ಅಥವಾ ಅದರ ಪ್ರಭಾವ ಸ್ತ್ರೀಯರ ಮೇಲೆ ಏಕ ಪ್ರಕಾರವಾಗಿ ಆದುದಲ್ಲ ಅದರಲ್ಲೂ ಭಾರತೀಯ ಸಂದರ್ಭದಲ್ಲಿ ಗಮನಿಸಲೇಬೇಕಾದ ಜಾತಿ ಎಂಬ ಅಮೂರ್ತಸಂಸ್ಥೆ ಇದೆ. ಇಂತಹ ಜಾತಿ ವ್ಯವಸ್ಥೆಯ ಪ್ರಭಾವದಿಂದ ಪಿತೃಪ್ರಧಾನತೆಯೊಳಗಿನ ಎಲ್ಲಾ ಮಹಿಳೆಯರು ಒಂದೇ ಬಗೆಯ ಶೋಷಣೆಯ ಅನುಭವವನ್ನು ಹೊಂದಿರುವುದಿಲ್ಲ. ಬಹುರೂಪದಲ್ಲಿ ಅಡಗಿವೆ. ಜೊತೆಗೆ ಅವು ಹಲವು ಸಾಮಾಜಿಕ, ರಾಜಕೀಯ ಸಂಗತಿಗಳನ್ನು ಒಳಗೊಂಡಿವೆ. ಅಂದರೆ ಸ್ತ್ರೀಯನ್ನೊಂದು ಜಾತಿಯಾಗಿ ಪರಿಭಾವಿಸುವುದು 'ಮಿಥ್' ಆಗಿರುತ್ತದೆ. ಈ ಅಂಶವನ್ನು ಗಮನಿಸಿಯೇ ಭಾರತೀಯ ಚಿಂತನಾಕ್ರಮ ೧೯೮೦ ರ ನಂತರದಲ್ಲಿ ಮಹಿಳೆಯನ್ನೊಂದು ಜಾತಿಯಾಗಿ ಪರಿಭಾವಿಸುವುದಕ್ಕೆ ಬದಲಾಗಿ ಮಹಿಳೆ ಮತ್ತು ಜಾತಿ ಎಂಬ ನೆಲೆಯ ಚಿಂತನೆಯುತ್ತ ಆಸಕ್ತವಾಗಿದೆ.

ಆದರೆ ಅಂಬೇಡ್ಕರ್ ಚಿಂತನೆ ವಿವಾಹ ಬಗ್ಗೆ ಪ್ರಶ್ನೆ ಎತ್ತದೆ ಜಾತಿವ್ಯವಸ್ಥೆಗೆ ಕಾರಣವಾಗಿರುವ ಸ್ವಜಾತಿ ವಿವಾಹದ ಕುರಿತು ವಿಶ್ಲೇಷಣೆ ಮಾಡುತ್ತ ಮಹಿಳೆಯರ ಸಮಸ್ಯೆಗಳನ್ನು ಏಕರೂಪಗೊಳಿಸಿ ಪರಿಹರಿಸಲು ಪ್ರಯತ್ನಿಸಿತು. ಅಂದರೆ ಎಲ್ಲ ಮಹಿಳೆಯರ ಸಮಸ್ಯೆಯನ್ನ ಬ್ರಾಹ್ಮಣ ಪಿತೃ ಪ್ರಧಾನತೆಯೊಂದಿಗೆ ಮುಖಾಮುಖಿಯಾಗಿಸಿತು. ಹಾಗಾಗಿ ಭಾರತೀಯ ಮಹಿಳೆಯ ಆಯಾ

ಜಾತಿ ಪಿತೃಪ್ರಧಾನತೆಯೊಂದಿಗೆ ತಾತ್ವಿಕವಾಗಿ ಗುರುತಿಸಿಕೊಂಡರು ವಿಸ್ತಾರಗೊಳ್ಳಲಿಲ್ಲ. ಈ ಮೂಲಕ ಅದು ಅಂತರ್ ಜಾತಿ ವಿವಾಹ ಎಂಬ ಪರಿಹಾರಕ್ರಮ ಜಾತಿಯಲ್ಲಿ ಮಹಿಳೆಯರ ಅನುಭವಿಸುವ ಶೋಷಣೆಗಳನ್ನು ಕಡಿತಗೊಳಿಸಿ ವಿವಾಹ ಸಂಸ್ಥೆಯೊಂದಿಗೆ ಸೇರಿಕೊಳ್ಳಲು ನೆರವಾಗುತ್ತದೆ.

ಒಟ್ಟಿನಲ್ಲಿ ಮಹಿಳೆ ಮತ್ತು ಜಾತಿ ಸಂಬಂಧಿ ವಿಷಯಗಳು ವಸಾಹತು ಸಂದರ್ಭ ಭಿನ್ನವಾದ ನೆಲೆಯಲ್ಲಿ ಪ್ರಸ್ತುತಗೊಂಡರೂ ವಸಾಹತು ಚಿಂತನಾಕ್ರಮ ಜಾತಿ ಸಮಸ್ಯೆಯನ್ನು ಕಡಿತಗೊಳಿಸಿ ಮಹಿಳಾ ಪ್ರಶ್ನೆ ಮಹಿಳಾ ಸಮಸ್ಯೆಯಾಗಿ ಏಕರೂಪಿನೆಲೆಯಲ್ಲಿ ಪ್ರಸ್ತುತ ಪಡಿಸಿತು. ಆದರೆ ಅವುಗಳನ್ನು ಪಿತೃಪ್ರಧಾನತೆಯೊಂದಿಗೆ ಮುಖಾಮುಖಿಯಾಗಿಸದೇ ವಸಾಹತು ಸಂದರ್ಭಕ್ಕೆ ಮಾತ್ರ ಎತ್ತಿದ ಪ್ರಶ್ನೆಗಳಾದವು. ಹಾಗೆಯೇ ವಸಾಹತು ಚಿಂತನಾಕ್ರಮಗಳ ಉತ್ಪನ್ನಗಳಾದ ದೇಶಿ ಸುಧಾರಣಾವಾದಿಗಳಲ್ಲಿ ಕೆಲವು ಚಿಂತನೆಗಳು ಸ್ತ್ರೀ ಸುಧಾರಣೆಯಲ್ಲಿ ಜಾತಿ ಪ್ರಶ್ನೆ ಅಲಕ್ಷ್ಯವಾಗಿಸಿತು. ಅಂದರೆ ಮಹಿಳೆಯರು ಮತ್ತು ಜಾತಿಗಳು ಕುರಿತ ಪ್ರಶ್ನೆಗಳನ್ನು ಪ್ರತ್ಯೇಕವಾಗಿ ಪರಿಭಾವಿಸಿದವು. ಬ್ರಾಹ್ಮಣ ಸ್ತ್ರೀ ಅನುಭವಿಸುತ್ತಿರುವ ಸತಿಪದ್ಧತಿಯಂತಹ ಸಮಸ್ಯೆಗಳನ್ನು ಬ್ರಾಹ್ಮಣ ಸಮಾಜದ ಅಂತರಿಕ ಸಮಸ್ಯೆಯಾಗಿಯೇ ಪ್ರಸ್ತುತಪಡೆಯಿತು. ಹಾಗೆಯೇ ಮಹಿಳೆಯರು ಮತ್ತು ಜಾತಿಗಳ ಪ್ರಶ್ನೆಗಳನ್ನು ಕುರಿತು ಒಗ್ಗೂಡಿಸುವ ಪ್ರಯತ್ನ ನಡೆದವು. ಅಂದರೆ ಮಹಿಳೆಯ ಸಮಸ್ಯೆ ಸಂದರ್ಭದಲ್ಲಿ ಜಾತಿವ್ಯವಸ್ಥೆ ಮಹತ್ವದ ಪಾತ್ರವಹಿಸುತ್ತದೆ. ಉದಾಹರಣೆ ಮಹಿಳೆಯರು ವೈಧವ್ಯ ಎಂಬ ಸಾಮಾಜಿಕ ನಿಯಮಗಳನ್ನು ಮುರಿಯುವ ಮೂಲಕವೇ ಆಯಾ ಸಮುದಾಯಕ್ಕೆ ಮಹಿಳೆ ಅಪವಿತ್ರಳೆನಿಸಿ, ಅಸ್ಪೃಶ್ಯಗಳಾಗುತ್ತಾಳೆ. ಅಂಬೇಡ್ಕರ್ ಅವರು ಮಹಿಳಾ ಸಮಸ್ಯೆಯನ್ನು ಜಾತಿ ಒಳಗೆ ಗ್ರಹಿಸಿದರು. ಅಲ್ಲದೆ ಅವು ಏಕರೂಪಿಯಾದವು ಜಾತಿ ನಿರ್ಮೂಲನೆಯಿಂದ ಮಹಿಳಾ ಸಮಸ್ಯೆಯನ್ನು ಬಗೆಹರಿಸಬಹುದು. ಈ ಮೂಲಕ ಅಂಬೇಡ್ಕರ್ ಬ್ರಾಹ್ಮಣ ಪಿತೃಪ್ರಧಾನತೆ ಒಳಗೆ ಇಟ್ಟು ಅಸ್ಪೃಶ್ಯತೆಯನ್ನು ಹಾಗೂ ಮಹಿಳಾ ಸಮಸ್ಯೆಗಳೆರಡನ್ನು ಬಿಡಿಸಲು ಪ್ರಯತ್ನಿಸಿದರು.

**ಟಿಪ್ಪಣಿಗಳು**

೧. ಡಾ. ಬಾ.ಸಾ.ಅಂ.ಬ.ಭಾ., ೧೯೯೦, ಸಂ-೧, ಪು. ೦೯, ೧೦.
೨. ಅದೇ, ಪು. ೧೦.
೩. ಅದೇ, ಪು. ೧೧.
೪. ಅದೇ, ಪು. ೮,೯.
೫. ಅದೇ, ಪು. ೧೧,೧೪.
೬. ಅದೇ, ಪು. ೧೨.
೭. ಅದೇ, ಪು. ೧೩, ೧೫.
೮. ಅದೇ, ಪು. ೧೬.

೯. ಅದೇ, ಪು. ೧೩, ೧೪.

೧೦. ಅದೇ, ಪು. ೧೬, ೨೧.

೧೧. ಅರವಿಂದ ಮಾಲಗತ್ತಿ, ೧೯೯೯, ಡಾ.ಅಂಬೇಡ್ಕರ್ ವಿಚಾರಧಾರೆ; ಕನ್ನಡ ಸಂಸ್ಕೃತಿ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, ಪು. ೧೪೬.

೧೨. ಸಿಮೋನ್ ದ ಬೋವಾ, ೨೦೦೭, ದ ಸೆಕೆಂಡ್ ಸೆಕ್ಸ್, ಡಾ. ಎಚ್.ಎಸ್. ಶ್ರೀಮತಿ, ಅಧ್ಯಯನ ಮಂಡಲ, ಬೆಂಗಳೂರು, ಪು. ೪೪.

೧೩. ಅದೇ, ಪು. ೫೭.

• • •

೧೨

# ಮಹಿಳಾ ಸಬಲೀಕರಣ ಪುನರ್‌ವ್ಯಾಖ್ಯೆಯು ಏಣಿಯಲ್ಲಿ ಮೆಟ್ಟಿಲು

ಡಾ. ರಾಜಲಕ್ಷ್ಮಿ ಎನ್.ಕೆ.

'ಮಹಿಳೆ', 'ಮಹಿಳಾ ದಿನಾಚರಣೆ'ಯೆನ್ನುವುದು ರಾಜಕೀಯ ಹಿನ್ನೆಲೆ ಹಾಗೂ ಅರ್ಥವನ್ನು ಹೊಂದಿದೆ. ಅಮೇರಿಕಾದಲ್ಲಿ ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸುವಾಗ ಮಾರ್ಚ್ ೮ನೇ ತಾರೀಖನ್ನು ಸೂಚಿತವಾಗಿ ಆರಿಸಿಕೊಂಡರು. ಈ ಹೋರಾಟಕ್ಕೆ ಸಾರ್ವಜನಿಕ ಸಮ್ಮತಿ ದೊರೆಯುವುದಕ್ಕೆ, ಗೌರವ ದಕ್ಕುವುದಕ್ಕೆ ಇದು ಅಂತಾರಾಷ್ಟ್ರೀಯ ಸುದ್ದಿ ಹಾಗೂ ಚಳುವಳಿಯಾಗುವ ಅವಶ್ಯಕತೆಯಿತ್ತು. ಇದರಲ್ಲಿ ಬಹುಶಃ ಪ್ರಪಂಚದಾದ್ಯಂತ ಮಹಿಳೆಯರ ಸಮಸ್ಯೆಗಳ ಬಗೆಗಿನ ಹೋರಾಟವನ್ನು ಗಮನಿಸುವ ಅಂಶವು ಇದ್ದಿರಬಹುದು. ಯುನೈಟೆಡ್ ನೇಷನ್ಸ್ ಆರ್ಗನೈಸೇಷನ್ಸ್ ಪ್ರಪಂಚದಾದ್ಯಂತ ನಡೆಯುತ್ತಿರುವ ಮಹಿಳೆಯರ ಸಮಸ್ಯೆ ಹಾಗೂ ಹೋರಾಟಗಳ ಬಗ್ಗೆ ವರದಿಯನ್ನು ಸಂಗ್ರಹಿಸಿ ೧೯೭೫ನ್ನು ಮಹಿಳಾ ವರ್ಷವಾಗಿ ಆಚರಿಸಿತು. ತದನಂತರದಲ್ಲಿ ಆಡಳಿತಾತ್ಮಕವಾಗಿ ಮಾರ್ಚ್ ೮ ಅಂತಾರಾಷ್ಟ್ರೀಯವಾಗಿ ಮಹಿಳಾ ದಿನವೆಂದು ಆಚರಿಸಲ್ಪಡುತ್ತಿದೆ. ತದನಂತರದಲ್ಲಿ ನಾವು ಕಂಡ ಹಾಗೆ ಬೇರೆ ಬೇರೆ ದೇಶಗಳಲ್ಲಿ ಮಹಿಳೆಯರ ಹಕ್ಕುಗಳನ್ನು ಮುಂದಿಟ್ಟುಕೊಂಡು ವಿವಿಧ ರೀತಿಯಲ್ಲಿ ಮಹಿಳಾ ದಿನವನ್ನು ಆಚರಿಸಲಾಗುತ್ತಿದೆ. ಇಲ್ಲಿ ಗಮನಿಸಬೇಕಾದ ಒಂದು ಸೂಕ್ಷ್ಮವಿದೆ. ಹಕ್ಕುಗಳಿಗಾಗಿ ನಡೆಸುವ ಹೋರಾಟ ಮತ್ತು ತನ್ಮೂಲಕ ಪಡೆಯುವ ಜಯವು ಅಧಿಕಾರದ ಕಥನದೊಳಗೆ ಬರುತ್ತದೆ. ನಮ್ಮಮ್ಮ, ಅಜ್ಜಿಯಂದಿರು ತಮ್ಮದೇ ರೀತಿಯಲ್ಲಿ ತಮ್ಮ ಇಷ್ಟಾನಿಷ್ಟಗಳ ಪರಿಧಿಯೊಳಗೆ ಕರ್ತವ್ಯ ನಿಭಾಯಿಸುವಾಗ ಆ ನಿಭಾವಣೆಯಿಂದಲೇ ಬಂದ ಪ್ರಭುತ್ವದಿಂದ ಹಕ್ಕುಗಳ ಚಲಾವಣೆ ಮಾಡುತ್ತಿದ್ದರು. ಆದರೆ ಇದು ವೈಯಕ್ತಿಕ, ಕೌಟುಂಬಿಕ ಬದುಕಿನೊಳಗಿನ ಅಧಿಕಾರ. ಹಾಗಾಗಿ ಈ ಹೋರಾಟದ ಬದುಕು ಅಂತಾರಾಷ್ಟ್ರೀಯ ಮನ್ನಣೆ ಪಡೆವ "ಹಕ್ಕು"ಗಳ ಹೋರಾಟವಾಗುವುದಿಲ್ಲ. ನಾಗರಿಕ ಸಮಾಜದಲ್ಲಿ ಹಕ್ಕುಗಳನ್ನು ಕೇಳುವುದು, ಹೋರಾಟ ನಡೆಸುವುದು

ಮತ್ತು ಅದಕ್ಕೆ ಸಂಬಂಧಿತವಾದ "ಮಹಿಳಾ ದಿನ" ಎನ್ನುವುದು ರಾಜಕೀಯ ಪರಿಧಿಯೊಳಗೆ ಬರುತ್ತದೆ. ಈ ದಿಸೆಯಲ್ಲಿ ರಾಜಕೀಯ ಅರ್ಥವನ್ನು ಹೊಂದುತ್ತದೆ.

'ಮಹಿಳೆ' ಅಥವಾ 'ಪುರುಷ' ಎನ್ನುವ ಶಬ್ದಗಳು ದಿನನಿತ್ಯದ ನಮ್ಮ ಆಡುಮಾತಿನಲ್ಲಿ ಬರುವ 'ಹೆಣ್ಣು', 'ಗಂಡು' ಎನ್ನುವ ಪದಗಳಿಗೆ ಬರುವ ಪರ್ಯಾಯ ಪದಗಳೆ? ಅಂತೆಯೆ 'ಹೆಂಗಸು', 'ಗಂಡಸು' ಎಂಬ ಪದಗಳಿಗೆ ಸಮಾನಾರ್ಥ ಪದಗಳೆ? 'ಮಹಿಳೆ' ಎನ್ನುವ ಪದ ಪ್ರಯೋಗವು ನಮ್ಮ ಕೌಟುಂಬಿಕ ಚೌಕಟ್ಟಿನ ಮಾತುಕತೆಗಳಲ್ಲಿ, ನೆರೆಹೊರೆಯವರೊಡನಿನ ಉಭಯ ಕುಶಲೋಪರಿಯಲ್ಲಿ ಸಾಮಾನ್ಯವಾಗಿ ಕಾಣಬರುವ ಶಬ್ದವಲ್ಲ. ಈ ಶಬ್ದವು ನಾಗರಿಕ ಸಮಾಜಕ್ಕೇ ಸೇರಿದ ಸುಸಂಸ್ಕೃತ ಭಾಷೆಯ ಪದವಾಗಿದೆ. ನಮ್ಮ ದೈನಂದಿನ ಜೀವನದ ವೈಯಕ್ತಿಕ ಬದುಕಿನಲ್ಲಿ ಹಾಸುಹೊಕ್ಕಾದ ಪದವಲ್ಲ. ನಮ್ಮ ನಾಗರಿಕ ಸಮಾಜದಲ್ಲಿ ಬರುವ ಸಾಮುದಾಯಿಕ ಜೀವನದಲ್ಲಿ ಬಳಕೆಯಲ್ಲಿರುವ ಶಬ್ದವಾಗಿದೆ. ನಾಗರಿಕ ಸಮಾಜದ ಸದಸ್ಯರಾಗಿ ನಮ್ಮ ಬದುಕು ಸಾಮಾಜಿಕ ಬದ್ಧತೆಯನ್ನು ಹೊಂದಿರುತ್ತದೆ. ಸಾಮಾಜಿಕ ಶಿಸ್ತಿಗೆ ಒಳಪಟ್ಟಿರುತ್ತದೆ. ಇಲ್ಲಿ ಪೂರ್ವ ನಿರ್ಧರಿತವಾದ ಅರ್ಥವನ್ನು ಹೊಂದಿದ ಮೌಲ್ಯಗಳೊಡನೆ ಜೀವನ ನಡೆಯುತ್ತದೆ. ಈ ಸಮಾಜದ ಚೌಕಟ್ಟಿನೊಳಗೆ ಪರಸ್ಪರ ಸಂಬಂಧವೆನ್ನುವುದು ಅಧಿಕಾರದ ಬುನಾದಿ ಮೇಲೆ ಕಟ್ಟಲ್ಪಟ್ಟಿರುತ್ತದೆ. ಪ್ರತಿಯೊಬ್ಬರೂ ಇಲ್ಲಿ ಅಧಿಕಾರ ಚಲಾಯಿಸುತ್ತಾರೆ ಹಾಗೂ ಅಧಿಕಾರದ ಚಲಾವಣೆಗೆ ಒಳಪಡುತ್ತಾರೆ. ಮಿಶೆಲ್ ಫುಕೊ ಹೇಳುವ 'ಪವರ್ ರಿಲೇಶನ್' ಎನ್ನುವ ಅರ್ಥದಲ್ಲಿ ಈ ಮಾತುಗಳನ್ನು ಹೇಳುತ್ತಿದ್ದೇನೆ.[೨] ಇಂತಹ ನಾಗರಿಕ ಸಮಾಜದ, ಪೂರ್ವನಿರ್ಧರಿತ ಬದುಕಿನಲ್ಲಿ ರೂಪುಗೊಂಡಂತಹ ಭಾಷೆಯಲ್ಲಿ ಪಡಿಮೂಡಿದ ಶಬ್ದ 'ಮಹಿಳೆ'. ನಾಗರಿಕ ಸಮಾಜವು ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದೆ. ಆ ಸಂಸ್ಕೃತಿಯ ರೂಪಕವಾಗಿ ಭಾಷೆಯು ರೂಪುಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ 'ಮಹಿಳೆ'ಯೆನ್ನುವುದು ರಾಜಕೀಯ ಒಳಾರ್ಥವನ್ನು ಹೊಂದಿರುವಂತಹ ಶಬ್ದ ಎಂದು ಗೃಹೀತವಾಗುತ್ತದೆ.

ಈ ಗೃಹಿಕೆಯ ಹಿನ್ನೆಲೆಯಲ್ಲಿ ನಾವು ಮಹಿಳೆಯ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಬಲೀಕರಣವನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ. 'ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ' ವಿಷಯಗಳು ನಾಗರಿಕ ಸಮಾಜಕ್ಕೆ ಸಂಬಂಧಪಟ್ಟ ವಿಷಯಗಳಾಗಿವೆ. ದೇಶ, ರಾಷ್ಟ್ರೀಯತೆ, ಪ್ರಗತಿ ಇತ್ಯಾದಿ ಆಧುನಿಕತೆ ಸಂಬಂಧಿ ವಿಷಯಗಳೊಡನೆ ನೇರ ಸಂಬಂಧವಿರುವ ಹಾಗೂ ಥಳಕು ಹಾಕಿಕೊಂಡಿರುವ ವಿಷಯಗಳೂ ಆಗಿವೆ. ಇದರೊಂದಿಗೇನೇ ಪುರುಷಕೇಂದ್ರಿತ ವ್ಯವಸ್ಥೆಯಲ್ಲಿ ಪುರುಷ ಈಗಾಗಲೇ ಸಬಲನಾಗಿರುವ ಹಾಗೂ ತನ್ನನ್ನು ಗಟ್ಟಿಯಾಗಿ ಪ್ರತಿಷ್ಠಾಪಿಸಿ ಕೊಂಡಿರುವ ನೆಲೆಗಳು. ಈ ಕಾರಣಕ್ಕಾಗಿಯೇ ಮಹಿಳೆಯ ಸಬಲೀಕರಣವು ಈ ನೆಲೆಗಳಲ್ಲಿ ಸಾಧ್ಯ ಎಂದು ನಂಬಲಾಗುತ್ತದೆ. ಈ ದಿಸೆಯಲ್ಲಿ ಸರಕಾರವು ಸಾಕಷ್ಟು ಯೋಜನೆಗಳನ್ನು, ಕಾನೂನುಗಳನ್ನು ಜಾರಿಗೆ ತಂದಿದೆ. ಇದರೊಂದಿಗೆ ಸಾಕಷ್ಟು ಸರಕಾರೇತರ ಸಂಸ್ಥೆಗಳು ಅವಿರತ ವಾಗಿ ಮಹಿಳೆಯರ ಸಬಲೀಕರಣಕ್ಕಾಗಿ ದುಡಿಯುತ್ತಲೇ ಬಂದಿವೆ. ನಾವು ನೋಡುವ ಹಾಗೆ ಅಸಂಖ್ಯಾತ ಮಹಿಳೆಯರು ಇದರಿಂದ ಪ್ರಯೋಜಿತರಾಗಿದ್ದಾರೆ. 'ಸಬಲೀಕರಣ' ಎನ್ನುವ

ಶಬ್ದವನ್ನು ಅರ್ಥಮಾಡಿಕೊಳ್ಳುವಲ್ಲಿ ನನಗೆ ಸಮಸ್ಯೆಯಿದೆ ಮತ್ತು ಅದು ಸಮಸ್ಯಾತ್ಮಕವಾಗಿರುವುದಕ್ಕೆ ಕಾರಣವೂ ಇದೆ. ಸಬಲೀಕರಣದ ಹಿಂದಿರುವ ಮೌಲ್ಯವೇನು ಮತ್ತು ಆ ಮೌಲ್ಯದ ಆಯಾಮವೇನು ಎನ್ನುವಲ್ಲಿ ಸಬಲೀಕರಣವು ಸಮಸ್ಯೆಯನ್ನು ಹುಟ್ಟು ಹಾಕುತ್ತದೆ.

ಸಮಸ್ಯೆಯಿದೆ ಎಂದ ಮಾತ್ರಕ್ಕೆ ಸಬಲೀಕರಣವನ್ನೇ ಸಾರಸಗಟಾಗಿ ಧಿಕ್ಕರಿಸುವಂತಿಲ್ಲ. ಮಹಿಳೆಗೆ ಸಬಲೀಕರಣವು ಮಾನವೀಯ ಮೌಲ್ಯಗಳ ನೆಲೆಯಲ್ಲಿ ಅತ್ಯಂತ ಅವಶ್ಯಕವಾಗಿದೆ. ದೇಶದ ಅವಿಭಾಜ್ಯ ಅಂಗವಾಗಿರುವ ಮಹಿಳೆಗೆ ದೇಶದ ಪ್ರಗತಿಯಲ್ಲಿ ಭಾಗಿಯಾಗುವುದು ಕೇವಲ ಹಕ್ಕು, ಕರ್ತವ್ಯಗಳ ಪ್ರಜ್ಞೆಯಷ್ಟೇ ಅಲ್ಲ, ಅನಿವಾರ್ಯತೆ ಕೂಡಾ. ಸಬಲೀಕರಣಕ್ಕೆ ಸಂಬಂಧಪಟ್ಟಂತೆ ಎರಡು ಮಾದರಿಗಳನ್ನು ನಾನು ಚರ್ಚಿಸಲು ಬಯಸುತ್ತೇನೆ. ಮೊದಲನೆಯ ಮಾದರಿಯು 'ಆಧುನಿಕ' ಜಗತ್ತಿಗೆ ಸೇರಿದ್ದು ಮತ್ತು ದಿನನಿತ್ಯವು ನಮಗೆ ಮಾದರಿಯೆಂದು ಹೇಳಲ್ಪಡುತ್ತಿರುವಂತಹುದು. ಇಲ್ಲಿ ಮಹಿಳೆಗೆ ಕೆಲವು ನಿರ್ದಿಷ್ಟ ಗುರಿ ಹಾಗೂ ದಾರಿಯನ್ನು ತೋರಿಸಲಾಗುತ್ತದೆ. ಕಷ್ಟಗಳು, ಸಮಸ್ಯೆಗಳು ಎದುರಾದಾಗ ಹೇಗೆ ಎದುರಿಸಬೇಕು, ಏನು ಮಾಡಬೇಕು ಎಂದು ನಿರ್ದಿಷ್ಟವಾಗಿ ಹೇಳಲಾಗುತ್ತದೆ. ಇದು ಹೇಗೆ ಸಾಧ್ಯವಾಗುತ್ತದೆ ಎಂದರೆ, ಈ ಮಾದರಿಯು ಈಗಾಗಲೇ ಪುರುಷಕೇಂದ್ರಿತ ವ್ಯವಸ್ಥೆಯಲ್ಲಿ ಪುರುಷ ವರ್ಗದಲ್ಲಿ ಚಾಲ್ತಿಯಲ್ಲಿ ಇರುವ ಮಾದರಿಯಾಗಿದೆ. ಇಲ್ಲಿ ಮಹಿಳೆ ಈಗಾಗಲೇ ಪುರುಷ ಸಾಧಿತವಾಗಿರುವ ಅಭಿವೃದ್ಧಿಯ ಹೆಜ್ಜೆಯ ಹಾದಿಯಲ್ಲಿ ನಡೆಯುತ್ತಾಳೆ. ಈ ದಿಸೆಯಲ್ಲಿ, ಯಾವೆಲ್ಲ ರಂಗಗಳನ್ನು ಪುರುಷ ವರ್ಗಕ್ಕೇ ಮೀಸಲು ಎಂದು ತಿಳಿಯಲಾಗಿತ್ತೋ ಅದೆಲ್ಲವನ್ನು ಮಹಿಳೆ ಪ್ರವೇಶಿಸಲು ಅವಕಾಶ ಕಲ್ಪಿಸಲಾಗುತ್ತದೆ. ಕಂಪೆನಿಗಳನ್ನು ನಡೆಸುವುದು, ಆಡಳಿತಾತ್ಮಕ ಹುದ್ದೆಗಳನ್ನು ಅಲಂಕರಿಸುವುದು, ಮಿಲಿಟರಿ ಹುದ್ದೆಗಳಲ್ಲಿ ಪಾಲುದಾರಳಾಗುವುದು ಇತ್ಯಾದಿ ಇತ್ಯಾದಿ. ಈ ಅವಕಾಶಗಳು ಆಕೆಯನ್ನು ಆರ್ಥಿಕವಾಗಿ; ಸಾಮಾಜಿಕವಾಗಿ ಹಾಗೂ ರಾಜಕೀಯವಾಗಿ ಸಬಲೀಕೃತಗೊಳಿಸುತ್ತವೆ. ಪುರುಷನೊಡನೆ ಸಮಾನವಾದ ಸ್ಥಾನವನ್ನು ಕಲ್ಪಿಸುತ್ತವೆ. ಈ ಮಾದರಿಯನ್ನು ಆರಿಸಿಕೊಳ್ಳುವ ಮಹಿಳೆ, ಈಗಾಗಲೇ ದೇಶದ ಪ್ರಗತಿಯ ಮಾದರಿಯಾಗಿ ಭದ್ರವಾಗಿ ತಳವೂರಿರುವ ವ್ಯವಸ್ಥೆಯೊಳಗೆ ಸೇರ್ಪಡೆಗೊಳ್ಳುತ್ತಾಳೆ ಮತ್ತು ಆ ವ್ಯವಸ್ಥೆಯು ಯಾವುದನ್ನು ದೇಶದ ಪ್ರಗತಿ ಎಂದು ಪರಿಗಣಿಸುತ್ತದೋ ಆ ಪ್ರಗತಿಯ ಪಾಲುದಾರಳೂ ಆಗುತ್ತಾಳೆ.

ಎರಡನೆಯ ಮಾದರಿಯ ಸಬಲೀಕರಣವನ್ನು ನಾನು 'ಅಪ್ಪಿಕೊ' ಚಳುವಳಿಯ ಮೂಲಕ ಹೇಳುತ್ತೇನೆ. ಈ ಚಳುವಳಿಯನ್ನು ಮಹಾತ್ಮ ಗಾಂಧೀಜಿಯವರ ಆಪ್ತ ಒಡನಾಡಿಯಾಗಿದ್ದ ಮೀರಾ ಬೆನ್ ಹುಟ್ಟು ಹಾಕಿದರು. ತದನಂತರದಲ್ಲಿ ಸುಂದರಲಾಲ್ ಬಹುಗುಣರವರು ಕೈ ಜೋಡಿಸುವುದರೊಂದಿಗೆ ಒಂದು ಪ್ರಬಲ ಚಳುವಳಿಯಾಗಿ ಇದು ಮಾರ್ಪಾಡಾಯಿತು. ಪ್ರಕೃತಿಯನ್ನು ಉಳಿಸಿಕೊಳ್ಳುವ ದಿಸೆಯಲ್ಲಿ ಸಾವಿರಾರು ಮಹಿಳೆಯರು ಈ ಚಳುವಳಿಯನ್ನು ಬಲಪಡಿಸಿದರು. ಈ ಚಳುವಳಿಯಲ್ಲಿ ಪ್ರಕೃತಿಯ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಕ್ರಿಯೆ ಪ್ರಮುಖ ಅಂಶವಾಗಿತ್ತು. ಇಲ್ಲಿ ಮರಗಳನ್ನು, ಪ್ರಕೃತಿಯನ್ನು ಉಳಿಸಿಕೊಳ್ಳಲು ಸಾಮಾನ್ಯ, ಅತಿಸಾಮಾನ್ಯ, ಅನಕ್ಷರಸ್ಥ ಹೆಂಗಸರು ನಾಗರಿಕ ಸಮಾಜವನ್ನು ಪ್ರವೇಶಿಸುತ್ತಾರೆ.

ಸಾಮುದಾಯಿಕವಾಗಿ ಹೋರಾಟ ನಡೆಸುತ್ತಾರೆ. ಅವರಿಗರಿವಿಲ್ಲದಂತೆಯೇ, ಯಾವುದೇ ಘೋಷಣೆಗಳಿಲ್ಲದೆ, ಯಾವುದೇ ಪೂರ್ವ ನಿರ್ದಿಷ್ಟ ಯೋಜನೆಗಳಿಲ್ಲದೆ ಅವರು ಸಾಮಾಜಿಕ ವಾಗಿ, ರಾಜಕೀಯವಾಗಿ ಸಬಲೀಕೃತರಾಗುತ್ತಾರೆ. ಪ್ರಕೃತಿಯನ್ನು ಉಳಿಸಿಕೊಳ್ಳುವ ಮೂಲಕ ಆರ್ಥಿಕ ನಷ್ಟವನ್ನು ತಡೆಹಿಡಿಯುತ್ತಾರೆ. ಅವರ ದಿನನಿತ್ಯದ ಜೀವನಕ್ಕೆ ಅವಶ್ಯಕವಿದ್ದ ಆರ್ಥಿಕ ಸ್ಥಿತಿ ಏನಿತ್ತೋ ಅದನ್ನು ಅವರು ಮುಂದಿನ ಪೀಳಿಗೆಯವರಿಗೆ ಬಿಟ್ಟು ನಡೆಯುತ್ತಾರೆ. ಹೊಸ ರೀತಿಯ ಸಬಲೀಕರಣಕ್ಕೆ ನಾಂದಿ ಹಾಡುತ್ತಾರೆ. ಮಾನವೀಯ ಮೌಲ್ಯಗಳ ನೆಲೆ ಯಲ್ಲಿ, ನಾವು ನಮ್ಮ ನಂತರದ ಪೀಳಿಗೆಯವರಿಗೆ ಈ ಭೂಮಿಯನ್ನು ಹೇಗೆ ಬಿಟ್ಟು ಹೋಗು ತ್ತವೆ ಎನ್ನುವ ವಿಶಾಲ ಅರ್ಥದಲ್ಲಿ ನೋಡುವಾಗ ಈ ಚಳುವಳಿಯ ಮೂಲಕ ಮೂಡಿಬಂದ ಮಹಿಳೆಯ ಸಬಲೀಕರಣವು ವಿಶೇಷ ಹೊಳಪು ಹಾಗೂ ಅರ್ಥವನ್ನು ಪಡೆದುಕೊಳ್ಳುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ರೂಪುಗೊಂಡ ಮಹಿಳೆಗೆ ಕೆಲವು ಪೂರ್ವ ನಿರ್ಧರಿತ ಆಶಯಗಳನ್ನು, ಮೌಲ್ಯಗಳನ್ನು ನೀಡಲಾಗಿದೆ. ಇದನ್ನು ನಾವು "ನೀಡಿತ ಸಂಸ್ಕೃತಿ"ಯೆಂದು ಹೇಳಬಹುದು. ಮಹಿಳೆಯರು ಇದನ್ನು ಅನೂಚಾನವಾಗಿ ಸ್ವೀಕರಿಸುವುದರಿಂದ ಇದು "ಸ್ವೀಕೃತ ಸಂಸ್ಕೃತಿ"ಯು ಹೌದು. ಮೇಲ್ನೋಟಕ್ಕೆ ಈ ಸಂಸ್ಕೃತಿಯಲ್ಲಿ ಎಲ್ಲವೂ ಸರಿಯಾಗಿದೆ ಎಂದು ಅನಿಸುತ್ತದೆ. ಇದು ಅತಿ ಆಕರ್ಷಕವಾಗಿಯೂ, ಅಪ್ಯಾಯಮಾನವಾಗಿಯೂ ತೋರುತ್ತದೆ. ಏಕೆಂದರೆ ಇಲ್ಲಿ ಗುಮಾನಿಗಳಿರುವುದಿಲ್ಲ. ಪ್ರತಿಯೊಂದು ಪ್ರಶ್ನೆಗೂ, ಸಮಸ್ಯೆಗೂ ಉತ್ತರವಿರು ತ್ತದೆ, ಪರಿಹಾರವಿರುತ್ತದೆ. ತಾತ್ವಿಕ ಚಿಂತನೆಯೂ ಇರುತ್ತದೆ. ಹಾಗಾಗಿ ಈ ವ್ಯವಸ್ಥೆಯು ಸುರಕ್ಷಿತ ಭಾವನೆಯನ್ನು ನೀಡುತ್ತದೆ. ಆದರೆ ಅದರೊಂದಿಗೆ, ಈ ವ್ಯವಸ್ಥೆಯೊಳಗೆ ಹುಟ್ಟಿಕೊಳ್ಳುವ ಗೊಂದಲ ಹಾಗೂ ತನ್ಮೂಲಕ ಹುಟ್ಟಿಕೊಳ್ಳುವ ಸಂಶಯವನ್ನು ಮಟ್ಟ ಹಾಕುವ ಶಕ್ತಿಯನ್ನು ಹೊಂದಿರುತ್ತದೆ. ಸಮಾಜದ ಶಿಸ್ತನ್ನು ಉಳಿಸಿಕೊಳ್ಳುವಲ್ಲಿ ಈ ವ್ಯವಸ್ಥೆಯು ಅತಿ ಅವಶ್ಯಕವಾಗಿ ರುತ್ತದೆ. ಕೆಲವೊಮ್ಮೆ ಈ ವ್ಯವಸ್ಥೆಯೊಳಗಿನ ಜೀವನವು ಉಸಿರುಗಟ್ಟಿಸುತ್ತದೆ. ಆದರೆ ನಮ್ಮೊಳಗೆ ಹಾಸುಹೊಕ್ಕಾಗಿರುವ ಪೂರ್ವನೀಡಿತ ಮೌಲ್ಯಗಳು ಹಾಗೂ ವ್ಯಾಖ್ಯಾನಗಳು ಎಷ್ಟು ಪ್ರಬಲವಾಗಿರುತ್ತವೆಯೆಂದರೆ ಈ ವ್ಯವಸ್ಥೆಯೊಳಗೆ ಎಲ್ಲವೂ ಸರಿಯಾಗಿಯೇ ಇದೆ ಎಂಬ ಭ್ರಮೆಯನ್ನು ಹುಟ್ಟಿಸುತ್ತವೆ. ಉಸಿರುಗಟ್ಟುವಿಕೆಯನ್ನು ಅನುಭವಿಸುವಾಗಲೂ 'ನನ್ನದೇ ತಪ್ಪು' ವ್ಯವಸ್ಥೆಯೊಳಗೆ ಎಲ್ಲವೂ ಸರಿಯಾಗಿಯೇ ಇದೆ ಎಂಬ ಪ್ರಬಲ ಭಾವವೂ ಮೂಡುತ್ತದೆ. ಇಲ್ಲಿ ನಾನು ವ್ಯವಸ್ಥೆಗೆ ವಿರುದ್ಧ ನಡೆಯಬೇಕೆನ್ನುವ ಆಲೋಚನೆಗೆ ಪೀಠಿಕೆ ಹಾಕುತ್ತಿಲ್ಲ. ವ್ಯವಸ್ಥೆಯೊಳಗಿದ್ದುಕೊಂಡು ಅದರ ಪ್ರತಿಯೊಂದು ಮೌಲ್ಯವನ್ನು 'ಪುನರ್ ವ್ಯಾಖ್ಯಾನಕ್ಕೆ' ಒಳಪಡಿಸುವ ಅವಶ್ಯಕತೆಯಿದೆ ಎಂದು ಪ್ರತಿಪಾದಿಸುವ ಪ್ರಯತ್ನ ಮಾಡುತ್ತಿದ್ದೇನೆ. ಇಲ್ಲಿ 'ಮಹಿಳೆ', 'ಮಹಿಳೆಯ ಸಬಲೀಕರಣ'ವೆನ್ನುವುದು ಪುನರ್‌ವ್ಯಾಖ್ಯಾನಕ್ಕೆ ಒಳಪಡಬೇಕಾ ಗುತ್ತದೆ. 'ಮೌಲ್ಯ'ಗಳ ಪುನರ್‌ವ್ಯಾಖ್ಯಾನವಾಗಬೇಕಾಗುತ್ತದೆ. ಮಹಿಳೆಯನ್ನು ಪುರುಷನಿಗೆ ಸಮಾನಳಾದವಳು ಎಂದು ನೋಡುವುದು ಅಥವಾ ವಿರೋಧ ಪದವಾಗಿ ನೋಡುವುದರಿಂದ 'ಮಹಿಳೆ' ನಮಗೆ ಅರ್ಥಪೂರ್ಣಳಾಗಿ ಕಾಣುವುದಿಲ್ಲ. ಮಹಿಳೆಯನ್ನು ಮಹಿಳೆಯ ನೆಲೆ ಯಲ್ಲಿಯೇ ಅರ್ಥೈಸುವ ಪ್ರಯತ್ನವಾಗಬೇಕು. ಈ ದಿಸೆಯಲ್ಲಿ ನಾನು ೧೨ನೇ ಶತಮಾನದ

ವಚನಕಾರರಲ್ಲಿ ಒಬ್ಬಳಾದ ಅಕ್ಕಮಹಾದೇವಿಯನ್ನು ಸಬಲ ಮಹಿಳೆಯೆಂದು ಗುರುತಿಸುತ್ತೇನೆ. ಆಕೆ ದೇಹಕ್ಕೆ, ನಗ್ನತೆಗೆ ಹೊಸ ಆಯಾಮವನ್ನು ನೀಡುತ್ತಾಳೆ. ನಾಗರಿಕ ಸಮಾಜದ ವ್ಯವಸ್ಥೆ ಯೊಳಗಿನ ಪ್ರಭುತ್ವ ಹಾಗೂ ಅಧಿಕಾರದ ಪರಿಧಿಯೊಳಗಿನ ಅಧಿಕಾರದಿಂದ ತನ್ನನ್ನು ಮುಕ್ತಗೊಳಿಸುವ ಮೂಲಕ ಮಹಿಳೆಗೆ ತನ್ನ ಮೇಲೆ ಹೇಗೆ ತಾನು ಪ್ರಭುತ್ವವನ್ನು ಹೊಸ ಅರ್ಥದಲ್ಲಿ ಸಾಧಿಸಬಹುದು ಎಂದು ವಿಧಿತಪಡಿಸುತ್ತಾಳೆ. ಆಕೆಯ ನಗ್ನತೆ ಆಕೆಯ ದೇಹದ ಮೇಲಿನ ಸಂಪೂರ್ಣ ಪ್ರಭುತ್ವವನ್ನು ತೋರಿಸುತ್ತದೆ. ಪುರುಷ ಕೇಂದ್ರಿತ ವ್ಯವಸ್ಥೆಯ ಮೌಲ್ಯ ಗಳಲ್ಲಿ ಕಾಣುವ ನಗ್ನತೆಯ ಹೀನಾಯವನ್ನು ತಾನು ನಗ್ನಳಾಗುವ ಮೂಲಕ ಹೊಸ ಅರ್ಥ ಹಾಗೂ ಪ್ರಭುತ್ವವನ್ನು ಸಾಧಿಸುತ್ತಾಳೆ. ಈ ರೀತಿಯ ಅರ್ಥಗಳು ಹುಟ್ಟಿಕೊಂಡಾಗ ಬಹುಶಃ ಮಾರ್ಚ್ ೮, ಮಹಿಳಾ ದಿನಾಚರಣೆ, ಸಬಲೀಕರಣ ಪದಗಳು ವಿಶಾಲ ಅರ್ಥವನ್ನು ಪಡೆ ಯುತ್ತವೆ. ಮಹಿಳೆ ನಿಂತ ನೀರಾಗದಿರಲಿ. ಸತತವಾಗಿ ಹರಿಯುವ ರೂಪಾಂತರಗೊಳ್ಳುವ ಹರಿವ ನೀರಾಗಲಿ.

**ಟಿಪ್ಪಣಿ**

೧. ಮಿಶೆಲ್ ಫುಕೋ ಅಧಿಕಾರವನ್ನು ಡಿಸ್‌ಕೋರ್ಸ್ ಎಂದು ಕರೆಯುತ್ತಾನೆ. ಆತನ ಪವರ್ ಡಿಸ್‌ಕೋರ್ಸ್‌ನಲ್ಲಿ 'ಅಧಿಕಾರ ಸಂಬಂಧ' (ಪವರ್ ರಿಲೇಶನ್) ಎನ್ನುವ ವಿಷಯ ಬರುತ್ತದೆ. ಅಧಿಕಾರ ಎಂದರೆ ಅಧಿಕಾರ ಚಲಾಯಿಸುವವರು ಮತ್ತು ಶೋಷಣೆಗೆ ಒಳಗಾಗುವವರು ಎನ್ನುವ ಎರಡು ಗುಂಪುಗಳಾಗಿ ನೋಡುವ ಇರಾದೆಯಿಂದ ಹೊರಗೆ ನಿಂತು ಅವನು ಅಧಿಕಾರ ಹಾಗೂ ಅಧಿಕಾರ ಚಲಾವಣೆಯ ಬಗ್ಗೆ ಮಾತನಾಡುತ್ತಾನೆ. ಅಧಿಕಾರ ಕೇವಲ ಪ್ರಭುತ್ವದಲ್ಲಿ ಮಾತ್ರ ಇಲ್ಲ. ಎಲ್ಲ ಕಡೆಯಲ್ಲೂ ಅಧಿಕಾರ ಚಲಿಸುತ್ತ ಇರುತ್ತದೆ. ಅಧಿಕಾರವೆನ್ನುವುದು ಒಂದೇ ಕಡೆಯಲ್ಲಿ ಸ್ಥಾಪಿತವಾಗಿರುವುದಿಲ್ಲ. ಒಬ್ಬ ವ್ಯಕ್ತಿ ಇನ್ನೊಬ್ಬನ ಮೇಲೆ ಅಧಿಕಾರ ಚಲಾಯಿಸಿದ ಎಂದಿಟ್ಟುಕೊಳ್ಳಿ. ಯಾರ ಮೇಲೆ ಅಧಿಕಾರ ಚಲಾಯಿಸಲ್ಪಟ್ಟಿರುತ್ತದೋ ಆತ ತನ್ನ ನಡುವಳಿಕೆಯ ಬದಲಾವಣೆಯ ಮೂಲಕ, ಹೊಸ ರೀತಿಯ ನಡವಳಿಕೆಯನ್ನು ಹುಟ್ಟು ಹಾಕುವುದರ ಮೂಲಕ ತನ್ನದೇ ಆದ ರೀತಿಯಲ್ಲಿ ಅಧಿಕಾರವನ್ನು ಹೊಂದುತ್ತಾನೆ. ಈ ಅರ್ಥದಲ್ಲಿ ಅಧಿಕಾರವು ಚಲನಶೀಲವಾಗಿರುತ್ತದೆ.

**ಗ್ರಂಥಋಣ**

೧. ಮಿಶೆಲ್ ಫುಕೊ : ಪವರ್/ನಾಲೆಡ್ಜ್ ಪ್ರಬಂಧ, ಹಿಸ್ಟರಿ ಆಫ್ ಸೆಕ್ಶುಯಾಲಿಟಿ, ರಟ್‌ಲೆಡ್ಜ್ ಪಬ್ಲಿಕೇಷನ್ ಡಿಸಿಪ್ಲಿನ್ ಎಂಡ್ ಪನಿಶ್, ರಟಲೆಡ್ಜ್ ಪಬ್ಲಿಕೇಶನ್.

• • •

೧೩

## ಮಹಿಳೆ ಮತ್ತು ದೌರ್ಜನ್ಯ : ಸೈದ್ಧಾಂತಿಕ ನೆಲೆಗಟ್ಟು

ಡಾ. ಶ್ರೀದೇವಿ ಎ. ಆಲೂರ

೨೦ ರ ದಶಕವು ಇತಿಹಾಸದಲ್ಲಿ ಅತ್ಯಂತ ಪರಿವರ್ತನೀಯ ಕಾಲಘಟ್ಟ. ಇದೇ ಅವಧಿಯಲ್ಲಿ ಬೆಳೆದು ಬಂದ ಸ್ತ್ರೀವಾದಿ ಚಿಂತನಾಕ್ರಮವು 'ಸ್ತ್ರೀ ಕೇಂದ್ರಿತ' ಬದುಕನ್ನಾಧರಿಸಿ ಹಲವಾರು ಅಂಶಗಳನ್ನು ಬೆಳಕಿಗೆ ತಂದಿತು. ಅಂತಹವುಗಳಲ್ಲಿ ಮಹಿಳೆಯ ಮೇಲಿನ ದೌರ್ಜನ್ಯವು ಒಂದಾಗಿದೆ. ಜಾತಿ-ವರ್ಗ-ವರ್ಣಾಧಾರಿತ ನೆಲೆಗಳಲ್ಲಿ ಚರ್ಚಿತವಾಗುತ್ತಿರುವ ದೌರ್ಜನ್ಯ -ಹಿಂಸೆಗಳಲ್ಲಿ ಮಹಿಳಾ ಬದುಕಿನ ಕುರಿತು ಚಿಂತನೆಯು ಒಳಗೊಂಡಿಲ್ಲವೆಂಬುದು ಸ್ತ್ರೀವಾದವು ಗ್ರಹಿಸಿಕೊಂಡಿತು. ಸಮಾಜ ಸುಧಾರಕರೆನಿಸಿರುವ ಬುದ್ಧ, ಗಾಂಧಿ, ರಸೆಲ್ ಮೊದಲಾದವರೆಲ್ಲರೂ ದೌರ್ಜನ್ಯ-ಹಿಂಸೆಗಳ ಕುರಿತು ಹಲವು ಬಗೆಯ ಚಿಂತನೆಗಳನ್ನು ರೂಪಿಸಿದ್ದಾರೆ. ಮನುಷ್ಯತ್ವದ ನೆಲೆಯನ್ನಾಧರಿಸಿ ರೂಪಿತವಾದ ಈ ಯಾವುದೇ ಚಿಂತನೆಗಳಲ್ಲಿ ಮಹಿಳೆಯ ವಿಶಿಷ್ಟ ಸಮಸ್ಯೆಗಳು ಕೇಂದ್ರಕ್ಕೆ ಬಂದಿಲ್ಲ. ಹೀಗೆ ವರ್ಗ, ಜಾತಿ, ವರ್ಣ, ಜನಾಂಗಗಳ ನೆಲೆಯಿಂದ ದೌರ್ಜನ್ಯ-ಹಿಂಸೆಯನ್ನು ಗಮನಿಸಿದಾಗ ಮಹಿಳೆ ಅದೃಶ್ಯವಾಗುತ್ತಾಳೆ. ಆದ್ದರಿಂದಲೇ ಸ್ತ್ರೀವಾದಿ ಚಿಂತನೆಗಳು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ ಎಂಬ ಪರಿಕಲ್ಪನೆಯನ್ನು ಹುಟ್ಟುಹಾಕಿದವು. ಜಾತಿ, ವರ್ಗ, ವರ್ಣಗಳಂತೆಯೇ 'ಲಿಂಗಾಧಾರಿತ' ನೆಲೆಯಲ್ಲಿಯೂ ದೌರ್ಜನ್ಯದ ಚರ್ಚೆಗಳಾಗಬೇಕೆಂದು ಪ್ರತಿಪಾದಿಸಿದವು. ತದನಂತರದಲ್ಲಿ 'ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು' ಪರಿಕಲ್ಪನೆಯಾಗಿ ಗ್ರಹಿಸುವುದು ಪ್ರಾರಂಭವಾಯಿತು.

ಈ ಹಿನ್ನೆಲೆಯಲ್ಲಿ ಚರಿತ್ರೆಯನ್ನು ಅವಲೋಕಿಸಿದಾಗ ಮನುಷ್ಯ ಸಂತತಿಯ ಆರಂಭದಿಂದಲೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸಮಸ್ಯೆಯ ಹೊಸತೇನಲ್ಲ. ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಗಮನದಲ್ಲಿರಿಸಿಕೊಂಡು ಚರ್ಚಿಸುವುದಾದರೆ, ಇಲ್ಲಿನ ಕೌಟುಂಬಿಕ ಮತ್ತು ಸಾಮಾಜಿಕ ಪರಿಸರದಲ್ಲಿ ಮಹಿಳಾ ಬದುಕು ದಮನಗೊಂಡಿರುವುದಕ್ಕೆ ಹಲವಾರು ದಾಖಲೆಗಳು ದೊರೆಯುತ್ತವೆ. ಆದರೆ ಇದನ್ನೊಂದು ಸಾಮಾಜಿಕ ಸಮಸ್ಯೆಯಾಗಿ

ಸ್ವೀಕರಿಸದಿರುವುದು ಗಮನಾರ್ಹ. ಮಹಿಳಾ ಬದುಕಿನಲ್ಲಿ ನಡೆಯುತ್ತಿರುವ ಆಕ್ರಾಮಕ ಸಂಗತಿಯೊಂದು ಹೊರಹಾಕದಂತಹ ಸಂಕೀರ್ಣ ಸಮಾಜ ವ್ಯವಸ್ಥೆಯನ್ನು ಗಮನಿಸಿದರೆ, ಮಹಿಳಾ ಬದುಕಿನ ಬಗ್ಗೆ ಪುರುಷ ಸಂಸ್ಕೃತಿಗಿರುವ ನಿರ್ಲಕ್ಷ್ಯವೂ ಗೋಚರಿಸುತ್ತದೆ.

ಸಾಮಾನ್ಯವಾಗಿ ಲಿಂಗಾಧಾರಿತ ನೆಲೆಯಲ್ಲಿ ಬೆಳೆದು ಬಂದ ಚಿಂತನೆಗಳು ಯಾವುದೇ ವ್ಯಕ್ತಿಯಿಂದ ಕೌಟುಂಬಿಕ ಮತ್ತು ಸಾರ್ವಜನಿಕ ವಲಯದಲ್ಲಿ ಪ್ರತ್ಯಕ್ಷ-ಪರೋಕ್ಷವಾಗಿ ಮಹಿಳೆಯ ಇಚ್ಛೆಗೆ ವಿರುದ್ಧವಾಗಿ, ಒತ್ತಾಯ ಪೂರ್ವಕವಾಗಿ ನಡೆಯುವ ಬೌದ್ಧಿಕ, ಮಾನಸಿಕ, ಭಾವನಾತ್ಮಕ, ದೈಹಿಕ ಹಿಂಸೆಯನ್ನು 'ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ'ವೆಂದು ಗ್ರಹಿಸಲಾಗಿದೆ. ಭಾರತೀಯ ಸಂವಿಧಾನ ಮತ್ತು ಈವರೆಗೂ ಈ ಸಂಬಂಧಿತ ಜಾರಿಯಾದ ಕಾನೂನುಗಳು ಈ ವ್ಯಾಖ್ಯಾನವನ್ನು ತಾತ್ವಿಕವಾಗಿ ಒಪ್ಪಿಕೊಂಡು ನಡೆದಿವೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನ ಮೇಲಾಳ್ತನವು ಸ್ವೀಕಾರಾರ್ಹವಾಗಿರುವುದರಿಂದ, ಮಹಿಳೆಯರ ವಿರುದ್ಧದ ಹಿಂಸಾತ್ಮಕ ಕ್ರಿಯೆಗಳೆಲ್ಲವೂ ಸಹ ಸಾಮಾಜಿಕತೆಯಲ್ಲಿ 'ಹಿಂಸೆ'ಯೆಂದು ನೋಡುವುದಿಲ್ಲ. ಸ್ವತಃ ಮಹಿಳೆಯರು ಸಹ ಇದನ್ನು ಬದುಕಿನ ಭಾಗವೇನೋ? ಎಂಬಂತೆ ಸ್ವೀಕರಿಸಿ, ಪೋಷಿಸುತ್ತಾ ಜೀವನ ಸಾಗಿಸುತ್ತಿರುವುದು ಈ ಸಾಮಾಜಿಕ ಅಂತರ್ಗತಗೊಳಿಸುವಿಕೆಯಿಂದಲೇ ಆಗಿದೆ. ಇದಕ್ಕೆ ಧರ್ಮ, ಸಂಸ್ಕೃತಿ, ಇತ್ಯಾದಿಗಳ ಚಹರೆಯನ್ನು ರೂಪಿಸಲಾಗಿದೆ. ಹೀಗಾಗಿಯೇ ಎಲ್ಲೆಡೆಯು ಪುರುಷರು ಮಹಿಳೆಯ ಮೇಲೆ ಎಸಗುವ ದೌರ್ಜನ್ಯದ ಘಟನೆಗಳನ್ನು ಇಂದಿಗೂ ದೌರ್ಜನ್ಯವೆಂದು ವ್ಯಾಖ್ಯಾನಿಸುವುದು ಕಷ್ಟಕರ ಸಂಗತಿಯಾಗಿದೆ. ಸಾಮಾಜಿಕ ನೀತಿ-ನಿಯಮ, ನಂಬಿಕೆಗಳು, ಕುಟುಂಬ, ಸಮುದಾಯ, ಗುಂಪುಗಳಿಂದ-ಗುಂಪಿಗೆ ಭಿನ್ನವಾಗಿವೆ. ಸಾಮಾನ್ಯ ಹಂತದಿಂದಲೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಗ್ರಹಿಸಿಕೊಳ್ಳಬೇಕಾಗಿದೆ.

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಸ್ತ್ರೀ-ಪುರುಷರೀರ್ವರಿಂದಲೂ ನಡೆಯುತ್ತದೆಯಾದರೂ ಪ್ರಮಾಣದಲ್ಲಿ ವ್ಯತ್ಯಾಸವನ್ನು ಗಮನಿಸಿದಾಗ ಪುರುಷರು ಎಸಗುವ ಪ್ರಮಾಣ ಎಣಿಕೆಗೆ ಸಿಗದಷ್ಟೆ ಎಲ್ಲೆ ಮೀರಿದೆಯೆಂಬುದು ಸಹಜವಾದ ಸಂಗತಿಯಾಗಿದೆ. ಅದರಲ್ಲೂ ಮಹಿಳೆಯರು ಮಹಿಳೆಯರ ಮೇಲೆ ದೌರ್ಜನ್ಯ ಎಸಗುವ ಕಾರಣಗಳು ಸಹ ಪುರುಷ ಮೂಲದಿಂದಲೇ ಹುಟ್ಟುತ್ತವೆ. ಉದಾ:- ಹೆಣ್ಣಿಗೆ ಹೆಣ್ಣೆ ಶತ್ರುವೆಂದು ಹೇಳುತ್ತಾ 'ಅತ್ತೆ-ಸೊಸೆ' ಸಂಬಂಧದ ಹಿನ್ನೆಲೆಯಲ್ಲಿ ಅತ್ತೆಯೂ-ಸೊಸೆಯ ಮೇಲೆ ಎಸಗುವ ದೌರ್ಜನ್ಯವನ್ನು ಸಾಕಷ್ಟು ಸಂದರ್ಭಗಳಲ್ಲಿ ಪ್ರತಿಪಾದಿಸಲಾಗುತ್ತದೆ. ಈ ತೆರನಾದ ಶತೃತ್ವಕ್ಕೆ ಈ ಎರಡು ಪಾತ್ರಗಳಲ್ಲಿನ ಮಹಿಳೆಯರಿಗಿರುವ ಅಭದ್ರತೆ, ಆತಂಕಗಳೇ ಕಾರಣ ಮತ್ತು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬದಲ್ಲಿ 'ಅತ್ತೆ'ಗೆ ದಕ್ಕಿರುವ 'ಅಧಿಕಾರ' ಪುರುಷ ಮಾದರಿಯಲ್ಲೆ ನಿಭಾಯಿಸುವಂತಿರುವ ಸಾಮಾಜೀಕರಣವು ಅಧೀನ ನೆಲೆಯ ಹೆಣ್ಣಿನ ಮೇಲಿನ ಆಕ್ರಮಣಕ್ಕೆ ಕಾರಣವಾಗುತ್ತದೆ. ಆದರೆ ಇದೇ ಸಮಾಜ ವ್ಯವಸ್ಥೆಯಲ್ಲಿ 'ಗಂಡಿಗೆ ಗಂಡೆ ಶತ್ರು'ವಾಗಿರುವ ಸಾಕಷ್ಟು ಉದಾಹರಣೆಗಳು ಕಂಡು ಬರುತ್ತದೆ. ಉದಾ: ಪ್ರೇಯಸಿಗಾಗಿ ಆಕೆಯ ಗಂಡನ

ಕೊಲೆ ಎಂದು ದಿನ ಪತ್ರಿಕೆಗಳಲ್ಲಿ ಇಂತಹವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದು. ಆದರೆ ಇಲ್ಲಿ ಅಪರಾಧಿಯ ಸ್ಥಾನದಲ್ಲಿ *ಮಾತ್ರ ಮಹಿಳೆಯದಾಗಿ ಚಿತ್ರಿಸಲಾಗುತ್ತದೆ.* ಹೀಗೆ ಸಂಗತಿಗಳು ಸ್ತ್ರೀ-ಪುರುಷರ ಸಂದರ್ಭಗಳಲ್ಲಿ ವಿಭಿನ್ನವಾಗಿ ತಿರುಚಲ್ಪಡುತ್ತವೆ ಅಲ್ಲದೆ ಬಹುತೇಕ ವಾಗಿ ವ್ಯವಸ್ಥೆಯಲ್ಲಿ ಇವುಗಳು ಪರಿಗಣನೆಗೆ ಬರುವುದಿಲ್ಲ. ಹೆಣ್ಣಾಗಿರುವ ಕಾರಣದಿಂದಲೇ ಈ ಎರಡು ಸಂದರ್ಭಗಳಲ್ಲಿನ ಪರಿಣಾಮ ಹೆಣ್ಣಿನ ಮೇಲಿನ ಆಕ್ರಮಣವೇ ಆಗಿದೆಯೆಂಬುದು ಮುಖ್ಯವಾಗಿ ಗ್ರಹಿಸಬೇಕಾದ ಸಂಗತಿ.

ಇತ್ತೀಚಿನ ಜಾಗತಿಕ ಸಂಗತಿಗಳಲ್ಲಿ ಲಿಂಗಾಧಾರಿತ ದೌರ್ಜನ್ಯವು ಸಹ ಪ್ರಮುಖವಾದ ಸಂಗತಿಯಾಗಿದೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಲಯಗಳಿಗೂ ವಿಸ್ತರಿಸುವ ಈ ಅಂಶವು ಮಹಿಳಾ ಹಕ್ಕುಗಳನ್ನು ಮತ್ತು ಅಂತಸ್ತಿನ ಸಂದರ್ಭದಲ್ಲಿಟ್ಟು ನೋಡಿದಾಗ ಲಿಂಗಾಧಾರಿತ ದೌರ್ಜನ್ಯವು ಮಹಿಳೆಯನ್ನು ನಿಯಂತ್ರಣಕ್ಕೊಳಪಡಿಸುವ ಸಂಗತಿ ಯಾಗಿದೆ. ಸಂಸ್ಕೃತಿಗೆ ಸಂಬಂಧಿತವಾದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ*ಗಳ ಕುರಿತು ರಾಷ್ಟ್ರ ಮಟ್ಟಗಳಾಚೆಗೂ* ದಾಖಲೆಗಳಾಗಿವೆ. CEDAW ಒಡಂಬಡಿಕೆಯಲ್ಲಿ ಸ್ತ್ರೀ ವಾದಿ ಚಳುವಳಿಗಳಿಗೆ ಸಂಯುಕ್ತ ಸಂಸ್ಥಾನದ ಮೂಲಕ ಕೆಲವು ಅವಕಾಶಗಳನ್ನು ಒದಗಿಸಿದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಅಂಕಿ-ಅಂಶಗಳ ಪ್ರಕಾರ ಶೇಕಡಾ ೧೮ ಪ್ರತಿಶತ ಮಹಿಳೆಯರು ಲೈಂಗಿಕ ಕಿರುಕುಳಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಇಂತಹ ಸ್ಥಿತಿಯು ಅಭಿವೃದ್ಧಿ ಹೊಂದಿದ ದೇಶಗಳೆಂದು ಗುರುತಿಸಲ್ಪಡುವ ದೇಶಗಳಲ್ಲಿಯೂ ಕಾಣಬಹುದು. ಆದರೆ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯದ ಕುರಿತು ಖಚಿತವಾದ ದಾಖಲೆಗಳು ಮತ್ತು ಅಂಕಿ-ಅಂಶಗಳನ್ನು ಸ್ಪಷ್ಟವಾಗಿ ಒದಗಿಸಿಲ್ಲ. ಯುಎಸ್‌ನ ವರದಿಯಂತೆ, ಪ್ರತಿವರ್ಷವು ಮೂರರಿಂದ ನಾಲ್ಕು ಮಿಲಿಯನ್‌ನಷ್ಟು ಮಹಿಳೆಯರು ವಿವಿಧ ಬಗೆಯ ದೌರ್ಜನ್ಯಕ್ಕೊಳಗಾಗು ತ್ತಿದ್ದಾರೆ. ಪ್ರಪಂಚದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಸಂಬಂಧಿಸಿದಂತೆ ಸ್ವೀಡನ್ ದೇಶ ಪ್ರಥಮ ಸ್ಥಾನದಲ್ಲಿದೆ.

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ಮೂಲಭೂತವಾದ ಮಾನವ ಹಕ್ಕು ಗಳ ವಿರೋಧಿ ನೆಲೆಯದಾಗಿದ್ದು ಅದು ಕೇವಲ ಮಹಿಳೆಯ ಸ್ಥಾನಮಾನಕ್ಕಷ್ಟೆ ಧಕ್ಕೆ ತರುವು ದಿಲ್ಲ. ಅವಳ ಸಮಗ್ರ ಬದುಕನ್ನು ಕಲುಷಿತಗೊಳಿಸುತ್ತದೆ. ತತ್ಪರಿಣಾಮವಾಗಿ ಅವಳ ಉತ್ಪಾದನೆ ಮತ್ತು ಕಾರ್ಯ ಸಮರ್ಥತತೆಯನ್ನು ಕುಗ್ಗಿಸುತ್ತದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ದೈಹಿಕ, ಬೌದ್ಧಿಕ ಮತ್ತು ಭಾವನಾತ್ಮಕ ಹಿಂಸೆಯನ್ನು ಒಳಗೊಂಡಿದ್ದು ಬಹು ವಿಧದ ದೌರ್ಜನ್ಯಗಳಲ್ಲಿ ಅದು ಬದುಕಿನ ಸಾಮಾನ್ಯ ಸಂಗತಿಯೆನ್ನುವ ಮೂಲಕ ಕಡೆಗಣಿಸಲ್ಪ ಟ್ಟಿದೆ. ಧರ್ಮ, ಸಂಸ್ಕೃತಿ, ಸಾಂಪ್ರದಾಯಿಕ ನಂಬಿಕೆಗಳ ಪಾಲುದಾರಿಕೆಯಿಂದ ಅನೇಕ ವಿಧದ ದೌರ್ಜನ್ಯಗಳು ಕ್ಷಮಾರ್ಹವೆಂದು, ಅವುಗಳು ಅಪರಾಧಗಳೇ ಅಲ್ಲವೆಂದಾಗಿವೆ. ಹೀಗೆ ದೌರ್ಜನ್ಯವು ಪ್ರಮುಖವಾಗಿ ಕುಟುಂಬದ ಒಳ ಮತ್ತು ಹೊರ ಬದುಕಿನ ಎಲ್ಲ ಹಂತಗಳಲ್ಲೂ ಸಹ ಜೀವಂತವಾಗಿರುವುದನ್ನು ಗುರುತಿಸಿದ ನ್ಯಾಷನಲ್ ಕ್ರೈಮ್ಸ್ ರಿಕಾರ್ಡ್ಸ್ ಬ್ಯೂರೊ

ಸಲ್ಲಿಸುವ ೧೯೯೩ರ ವರದಿಯಂತೆ, ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಅಪರಾಧಗಳ ಸಂಖ್ಯೆಯ ಬೆಳವಣಿಗೆಯು ೨೦೧೦ರ ವೇಳೆಗೆ ದೇಶದ ಜನಸಂಖ್ಯೆಗಿಂತಲೂ ಹೆಚ್ಚಾಗುತ್ತದೆ (ಸೇನ್ ಆ್ಯಂಡ್ ಶಿವಕುಮಾರ್, ೨೦೦೧). ಎಂಬ ಈ ಹೇಳಿಕೆಯು ಸತ್ಯವಾದುದಕ್ಕೆ ಸಾಕಷ್ಟು ದಾಖಲೆಗಳು ದೊರೆಯುತ್ತವೆ. ಲಿಂಗಾಧಾರಿತ ತಾರತಮ್ಯವೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಮೂಲ ಕಾರಣವಾಗಿದೆ. ಈ ರೀತಿಯ ಕೃತ್ಯಗಳು ಸಮಾಜ ವ್ಯವಸ್ಥೆಯಲ್ಲಿನ ಸ್ತ್ರೀ-ಪುರುಷರ ಅಸಮಾನ ಸಂಬಂಧಗಳನ್ನು ಹೊರಹಾಕುತ್ತವೆ. ಹಾಗಾಗಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವೆಂದರೆ ಲಿಂಗಾಧಾರಿತ ದೌರ್ಜನ್ಯಕ್ಕೆ ಸಂಬಂಧಿಸಿದ ಯಾವುದೇ ಕೃತ್ಯದ ಪರಿಣಾಮವಾಗಿದೆ. ಒತ್ತಾಯ ಪೂರ್ವಕವಾಗಿ-ಅವಳ ಇಚ್ಛಾನುಸಾರವೆನ್ನುವಂತೆ ಅವಳ ಸ್ವಾತಂತ್ರ್ಯವನ್ನು ಅಪಹರಿಸಲು, ಅವಳ ಖಾಸಗಿ-ಸಾರ್ವಜನಿಕ ಬದುಕಿನ ಮೇಲೆ ನಿಯಂತ್ರಣ ಸಾಧಿಸುವುದು, ಅವಳ ಅಭಿವೃದ್ಧಿಯ ಮೂಲ, ಮೂಲಭೂತ ಚಟುವಟಿಕೆ, ಚಲನಶೀಲತೆಯ ಮೇಲೆ ಶಾಶ್ವತ ನಿರ್ಬಂಧಗೊಳಿಸುವುದು. ಹೀಗೆ ಹಿಂಸಾತ್ಮಕ ಕೃತ್ಯಗಳ ಮೂಲಕ ಭಯವನ್ನು ಸೃಷ್ಟಿಸಿ, ನಿಯಂತ್ರಣಕ್ಕೆಳೆದುಕೊಳ್ಳುವ ಪರಿಣಾಮಕಾರಿ ತಂತ್ರಗಾರಿಕೆಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ. ಈ ಬಗೆಯ ದೌರ್ಜನ್ಯಗಳು ವಾಸ್ತವವಾಗಿ ಮಹಿಳೆಯ ಸಾಧನೆಯಲ್ಲಿ-ಅಭಿವೃದ್ಧಿಯಲ್ಲಿ ತೊಡಕುಂಟು ಮಾಡಲು ಬಳಸುವ ಅಸ್ತ್ರವಾಗಿವೆ. ಈ ಕ್ರಮವು ಮಹಿಳೆಯರ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ.

ಇಡೀ ಮಹಿಳಾ ಅಸ್ತಿತ್ವವನ್ನೇ ಇಲ್ಲವಾಗಿಸುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಕುರಿತು ಸಾಕಷ್ಟು ಚಿಂತನೆಗಳು ನಡೆದರೂ ಸಹಿತ ಇದನ್ನು ಗುರುತಿಸುವಲ್ಲಿ ಮತ್ತು ಅದನ್ನು ನಿವಾರಿಸುವಲ್ಲಿ ಪ್ರಯತ್ನಗಳು ಮಂದಗತಿಯಲ್ಲಿಯೇ ನಡೆದಿವೆಯೆನ್ನಬಹುದು. ಉದಾ: ೧೯೬೧ರಲ್ಲಿ ಜಾರಿಯಾದ ವರದಕ್ಷಿಣೆ ನಿಷೇಧ ಕಾಯಿದೆಯು ಹಲವಾರು ತಿದ್ದುಪಡಿಗೊಳಗಾದರೂ, ಮಹಿಳೆಯ ಬದುಕಿನಲ್ಲಿ ಇಂದಿಗೂ ಅಂತಹ ಬದಲಾವಣೆಗಳು ಕಂಡುಬಂದಿಲ್ಲ. ಜೊತೆಗೆ ಮಹಿಳೆಯ ಇತರ ಎಲ್ಲಾ ಸಮಸ್ಯೆಗಳು ಸಹ ಇದರಡಿಯಲ್ಲಿ ಮುಚ್ಚಿಹಾಕಲಾಗುತ್ತಿದೆ. ಈ ಬಗೆಯ ಹಲವಾರು ಮಹಿಳಾ ಕಾನೂನುಗಳು ಸ್ತ್ರೀವಾದಿ ಹೋರಾಟದಿಂದ ಪಡೆಯಲಾಗಿದೆಯಾದರೂ ಮಹಿಳಾ ಬದುಕಿನ ಹಲವಾರು ಸಮಸ್ಯೆಗಳಿಗೆ ಪರಿಹಾರ ಕೊಡುವಲ್ಲಿ ವಿಫಲವಾಗುತ್ತಿವೆ. ಕಾನೂನುಗಳ ಪರಿಗಣನೆಯು ತರ್ಕಬದ್ಧವಾದ ಉತ್ತರಗಳನ್ನು ಹೇಳುವ ಮಟ್ಟಿಗೆ ಸೀಮಿತವಾಗಿವೆ. ಆದರೆ ಜೀವನ ತರ್ಕವನ್ನು ಆಧರಿಸಿ ರೂಪಿತಗೊಂಡಿಲ್ಲ. ಮಹಿಳೆಯರ ವಾಸ್ತವ್ಯದ ಬದುಕಿಗೆ ಕಾನೂನುಗಳು ಇತ್ಯಾತ್ಮಕವಾದ ಪ್ರತಿಕ್ರಿಯೆಗಳನ್ನು ನೀಡುವ ಜರೂರಿದೆ.

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸಮಸ್ಯೆಯ ಕುರಿತು ಈಗಾಗಲೇ ಸಾಕಷ್ಟು ಚಿಂತನೆಗಳು ಬೆಳೆದು ಬಂದಿವೆ. ಜಾಗತಿಕ ಮಟ್ಟದಲ್ಲಿ ಚರ್ಚೆಯಾಗುತ್ತಿರುವ ಈ ಸಂಗತಿಯನ್ನು ಕುರಿತು ಮಾನವಶಾಸ್ತ್ರ, ಅಪರಾಧಶಾಸ್ತ್ರ, ಮನಃಶಾಸ್ತ್ರ ಮತ್ತು ಸಮಾಜಶಾಸ್ತ್ರದಂತಹ ವಿವಿಧ ಸಾಂಪ್ರದಾಯಿಕ ಜ್ಞಾನಶಿಸ್ತುಗಳಲ್ಲಿ ಚಿಂತನೆ ನಡೆದಿವೆಯಾದರೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸ್ವರೂಪ ಮತ್ತು ಪರಿಮಾಣಗಳನ್ನು ಖಚಿತವಾಗಿ ವ್ಯಾಖ್ಯಾ

ಒಟ್ಟು ಸ್ವರೂಪವು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಪ್ರಕೃತಿಯೇ ಮಾಡಿದ ಅನ್ಯಾಯವು ಕಾರಣವೆಂದು ಹೇಳಲಾಗುತ್ತದೆ. ಸಾಂಪ್ರದಾಯಿಕ ಸಂಶೋಧನಾ ವಿಧಿ-ವಿಧಾನಗಳನ್ನು ಅಳವಡಿಸಿಕೊಂಡು ಅಧ್ಯಯನ ನಡೆಸುವಲ್ಲಿ ಪ್ರಧಾನ ಲಿಂಗೀಯ ಪರವಾದ ಫಲಿತಗಳೇ ಬಂದಿವೆಯೆಂಬುದನ್ನು ಸ್ತ್ರೀವಾದಿಗಳು ಪ್ರತಿಪಾದಿಸಿದ್ದಾರೆ. ವಸ್ತುನಿಷ್ಠತೆಯನ್ನೇ ಪ್ರಮುಖವಾಗಿ ಪರಿಗಣಿಸುವ ಸಾಂಪ್ರದಾಯಿಕ ಚಿಂತನೆಗಳಲ್ಲಿ ಸಂಕುಚಿತ ಮತ್ತು ಮೇಲ್ನೆಲೆಯ ಅಂಶಗಳನ್ನು ಮಾತ್ರ ಗ್ರಹಿಸಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ವ್ಯಾಖ್ಯಾನಿಸಿದ್ದಾರೆ. ಇಂತಹ ಲೈಂಗಿಕತಾವಾದಿ ತಾತ್ವಿಕತೆಯನ್ನು ಆಧರಿಸಿ ರೂಪಿತವಾಗಿರುವ ಕಾನೂನುಗಳು ಸಹ ಮಹಿಳಾ ಬದುಕನ್ನು ಸುಧಾರಿಸುವಲ್ಲಿ ಯಶಸ್ವಿಯಾಗುವುದಕ್ಕಿಂತ, ಹೆಚ್ಚು ವೈಫಲ್ಯಗಳೇ ಆಗಿವೆ. ಅಲ್ಲದೆ ಮಹಿಳೆಯ ಬುದುಕು ಸಾಮಾಜಿಕತೆಯ ಮೂಲದಿಂದ ನಿರ್ವಚನಗೊಳ್ಳುವುದರಿಂದ, ವಾಸ್ತವದ ಗ್ರಹಿಕೆ ಮತ್ತು ಸಾಮಾಜಿಕತೆಯ ಹಿನ್ನೆಲೆಯನ್ನಾಧರಿಸಿಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಗ್ರಹಿಸಿ ಸಿದ್ಧಾಂತಗಳನ್ನು ರೂಪಿಸುವುದು ಸೂಕ್ತವಾದುದು.

**ಸ್ತ್ರೀವಾದಿ ಸಿದ್ಧಾಂತಗಳಲ್ಲಿ ಈ ಕುರಿತ ವಿವಿಧ ಆಯಾಮಗಳು**

೧೯೬೦ರ ಕೊನೆ ಮತ್ತು ೧೯೭೦ರ ದಶಕದ ಪ್ರಾರಂಭದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ನಿಧಾನವಾಗಿ ಅಲ್ಲಲ್ಲಿ ಕೇಳಲ್ಪಟ್ಟು ಮುಂಬರುವ ದಿನಗಳಲ್ಲಿ ಗಂಭೀರವಾದ ಸಾಮಾಜಿಕ ಸಮಸ್ಯೆಯಾಯಿತು. ಈ ಹಿಂದೆ ಮಹಿಳೆಯರ ವಿರುದ್ಧ ದೌರ್ಜನ್ಯಗಳು ಇರಲೇ ಇಲ್ಲವೆಂದಲ್ಲ. ಮಹಿಳೆಯರು ಮನೆಯೊಳಗಿನ ನಾಲ್ಕು ಗೋಡೆಯ ಮಧ್ಯದಲ್ಲಿರುವುದರಿಂದ ಅವಳ ಮೇಲೆ ನಡೆಯುವ ದೌರ್ಜನ್ಯ-ಹಿಂಸೆಗಳು ಅದರೊಳಗೆ ಅಡಕವಾಗಿದ್ದವು. ಗೃಹಬಂಧನದಿಂದ ಹೊರಬಂದ ಮಹಿಳೆ ಸಾಮಾಜಿಕ ಬದುಕಿಗೆ ಮುಖಾಮುಖಿಯಾಗಲು ಪ್ರಾರಂಭಿಸಿದಾಗಿನಿಂದ, ಅವಳ ಬದುಕಿನ ಬಹುಪಾಲು ಸಂಗತಿಗಳು ಅನಾವರಣಗೊಂಡವು. ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯವನ್ನು ಅರ್ಥೈಸಿಕೊಳ್ಳಲು ಸುದೀರ್ಘ ಚಿಂತನೆಯನ್ನು ನಡೆಸುವ ಮೂಲಕ ಆಧಾರವನ್ನು ರೂಪಿಸಿಕೊಳ್ಳಲು, ಆಗಾಗ್ಗೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯ ದಮನದ ಕೆಲವು ಆಯಾಮಗಳನ್ನು ತಿಳಿದುಕೊಳ್ಳುವುದು ಸೂಕ್ತ ಸಂಗತಿಯಾಗಿದೆ. ಆರಂಭದಲ್ಲಿ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು ಆರ್ಥಿಕ ಶೋಷಣೆ, ಲೈಂಗಿಕತೆ, ಜಾತಿ-ವರ್ಗ-ಗ್ರಾಮ-ನಗರ ಮತ್ತು ಸಂಸ್ಕೃತಿ ಇತ್ಯಾದಿಗಳ ಮಧ್ಯದ ಸಂಬಂಧಗಳನ್ನು ಸ್ಥೂಲವಾಗಿ ಪರೀಕ್ಷೆಗೊಳಪಡಿಸಬೇಕಾಗಿದೆ. ಆರ್ಥಿಕ ಶೋಷಣೆಯ ಪಾತ್ರವು ದೌರ್ಜನ್ಯದಲ್ಲಿ ಮುಖ್ಯವಾಗಿ ಗುರುತಿಸಲಾಗಿದೆ. ಈ ಮೂಲಕ ಮಹಿಳೆಯನ್ನು ನಿಯಂತ್ರಣದಲ್ಲಿರಿಸಿಕೊಳ್ಳುವ ಪ್ರಯತ್ನ. ಆರ್ಥಿಕ ಅವಲಂಬನೆ ಹಾಗೂ ಶೋಷಣೆಯಿಂದಾಗಿ ಮಹಿಳಾ ಸಮುದಾಯ ಅಧಿಕಾರವನ್ನು ಪಡೆಯುವಲ್ಲಾಗಲಿ ಮತ್ತು ಹಿಂಸೆ-ದೌರ್ಜನ್ಯಗಳನ್ನು ಪ್ರತಿಭಟಿಸುವಲ್ಲಿ ಅಸಮರ್ಥವಾಗುವುದರಿಂದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದಲ್ಲಿ ಇದನ್ನು ಪ್ರಮುಖವಾಗಿ ಪ್ರತಿನಿಧಿಸಲಾಗಿದೆ.

ಮಹಿಳೆಯ ಒಟ್ಟು ಸಮಸ್ಯೆಗಳ ಮೂಲ ಲೈಂಗಿಕತೆಯೇ ಆಗಿದೆ. ಸಾಮಾಜಿಕವಾಗಿ ಕಟ್ಟಲ್ಪಟ್ಟ ಲೈಂಗಿಕತೆಯ ವ್ಯಾಖ್ಯಾನ ಅವಳ ಅಸ್ತಿತ್ವದ ದಮನವನ್ನೇ ಬಯಸುತ್ತದೆ. ಇಂದಿಗೂ ರೂಢಿಯಲ್ಲಿರುವ ವಿವಿಧ ಬಗೆಯ ದೌರ್ಜನ್ಯಗಳತ್ತ ಗಮನಹರಿಸಿದಾಗ ಬಹುಪಾಲು ಸಂಗತಿಗಳಲ್ಲಿ ಲೈಂಗಿಕತೆಯ ಪ್ರಶ್ನೆ ಪ್ರಮುಖವಾಗಿ ಬೆಳಕಿಗೆ ಬರುತ್ತದೆ. ಮಹಿಳೆಯ ಸಮಗ್ರ ಚಹರೆಯನ್ನೇ ಅವಳ ದೇಹ ಮತ್ತು ಅದರಿಂದ ಲಭ್ಯವಾಗುವ ಸೇವೆಯನ್ನೇ ಆಧರಿಸಿರುವುದರಿಂದ ಎಲ್ಲ ಬಗೆಯ ಒತ್ತಡ - ದಬ್ಬಾಳಿಕೆ ಮತ್ತು ದೌರ್ಜನ್ಯಗಳಲ್ಲಿ ಇದು ಕಾಣಿಸುವುದು.

ಎಲ್ಲ ಜಾತಿ-ವರ್ಗ-ವರ್ಣಗಳಲ್ಲಿ ಮಹಿಳೆಯೂ ಸೇರಿಕೊಂಡಿರುವುದರಿಂದ, ಆಯಾ ಬಗೆಯ ಪರಿಸರಕ್ಕನುಗುಣವಾಗಿ ಅಲ್ಲಿನ ಹಿಂಸೆ - ದೌರ್ಜನ್ಯದ ಸ್ವರೂಪವು ಕಾಣಿಸಿಕೊಳ್ಳುತ್ತದೆ. ಉದಾ: ಒಬ್ಬ ಸುಶಿಕ್ಷಿತ ಮಹಿಳೆ ಮತ್ತು ಅನಕ್ಷರಸ್ಥ ಮಹಿಳೆ ಇರ್ವರನ್ನು ಹೋಲಿಸಿದಾಗ ಇಬ್ಬರ ಮೇಲೂ ಹಿಂಸೆ-ದೌರ್ಜನ್ಯಗಳಾಗುತ್ತಿರುವುದಕ್ಕೆ ಉದ್ದೇಶ ಒಂದೇ ಆಗಿದೆ, ಆದರೆ ಸ್ವರೂಪದಲ್ಲಿ ಭಿನ್ನತೆಗಳಾಗುತ್ತವೆ. ಹಾಗಾಗಿ ಆಯಾಯ ಪರಿಸ್ಥಿತಿ, ಸನ್ನಿವೇಶಗಳಿಗನುಗುಣವಾಗಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯವನ್ನು ವಿವರಿಸಿಕೊಳ್ಳಬೇಕಾಗುತ್ತದೆ. ಈ ಎಲ್ಲ ಅಂಶಗಳಿಗೂ ಪೂರಕವಾಗಿ ಸಂಸ್ಕೃತಿ, ರೂಢಿ, ಆಚರಣೆಗಳು ಕಾಣಿಸಿಕೊಳ್ಳುತ್ತವೆ. ಈ ನಿಟ್ಟಿನಲ್ಲಿ ಮೊದಲು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಚರ್ಚೆಯನ್ನು ಪ್ರಾರಂಭಿಸಿದವರು 'ತೀವ್ರವಾದಿ ಸ್ತ್ರೀವಾದಿ'ಗಳು. ವಿವಾಹ ಮತ್ತು ಕುಟುಂಬ ಸಂಸ್ಥೆಗಳೇ ಮಹಿಳಾ ಶೋಷಣೆಯ ಕೇಂದ್ರಬಿಂದುವೆಂದು ತಮ್ಮ ಸಿದ್ಧಾಂತದಲ್ಲಿ ಪ್ರತಿಪಾದಿಸಿದರು.

### ತೀವ್ರವಾದಿ ಸ್ತ್ರೀವಾದ ಮತ್ತು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆ

ಅರವತ್ತರ ದಶಕದ ಉತ್ತರಾರ್ಧ ಮತ್ತು ಎಪ್ಪತ್ತರ ದಶಕದ ಪ್ರಾರಂಭದಲ್ಲಿ ಸ್ತ್ರೀವಾದದ ಎರಡನೆ ಅಲೆಯೆಂದೆ ತೀವ್ರವಾದಿ ಸ್ತ್ರೀವಾದವನ್ನು ಗುರುತಿಸಲಾಗುತ್ತದೆ. ಈ ಸ್ತ್ರೀವಾದವು ಪುರುಷನನ್ನು ಶತ್ರುವೆಂದೇ ಪರಿಭಾವಿಸಿತ್ತೆಂಬ ಆರೋಪವು ಇದೆ. ಮೊಟ್ಟಮೊದಲು ಮಹಿಳಾ ಶೋಷಣೆಯ ಪ್ರಶ್ನೆಯನ್ನು ಹುಟ್ಟು ಹಾಕಿರುವುದೇ ತೀವ್ರವಾದಿ ಸ್ತ್ರೀವಾದಿಗಳು, ವರ್ಗ, ಜನಾಂಗ ಮೂಲವಾದ ದೌರ್ಜನ್ಯಕ್ಕಿಂತ ಲೈಂಗಿಕ ದಮನವು ಮೊದಲನೆಯದು. "ಲೈಂಗಿಕ ದಾಸ್ಯ ಮತ್ತು ಒತ್ತಾಯದ ತಾಯ್ತನಗಳ ಆಕರವಾದ ಕುಟುಂಬವೇ ಹೆಣ್ಣಿನ ಶೋಷಣೆಯ 'ಕೀಲಿಕೈ' ಎಂಬುದನ್ನು ಪ್ರತಿಪಾದಿಸಿತು. ಕುಟುಂಬವೆಂಬುದು ಮಹಿಳೆಯ ರಕ್ಷಣೆಯ ತಾಣವೆಂಬುದು ಭ್ರಮಾತ್ಮಕ ಕಲ್ಪನೆ. ವ್ಯಾಲರಿ ಸೊಲಾಸಿಸ್, ಜೋರಿನ್ ಮುಂದುವರೆದಂತೆ ಮೇರಿಡಾಲಿ ಮತ್ತು ಸೂಸನ್ ಗ್ರಿಫೆನ್‌ರು "ಪುರುಷಪ್ರಧಾನ ವ್ಯವಸ್ಥೆಯಲ್ಲಿ ಲಿಂಗದ ಕಾರಣದಿಂದಾಗಿಯೇ ಹೆಣ್ಣು ದಮನಕ್ಕೊಳಗಾಗಿದ್ದಾಳೆ. ಪುರುಷ ಸಮುದಾಯ ಈ ಶ್ರೇಷ್ಠತೆಯನ್ನು ಬಳಸಿಕೊಂಡು ತನ್ನತನ ಮತ್ತು ಅಧಿಕಾರಗಳನ್ನು ಗಟ್ಟಿಗೊಳಿಸಿಕೊಂಡಿದೆ" ಎನ್ನುವುದು ಈ ಚಿಂತಕಿಯರ ಅಭಿಮತ.[೨] ಈ ಬಗೆಯ ತಂತ್ರಗಾರಿಕೆಯಿಂದ ಪಡೆಯಲಾದ ಅಧಿಕಾರವನ್ನು ನಿರಂತರವಾಗಿ ಉಳಿಸಿಕೊಳ್ಳಲು ಪುರುಷ ಪ್ರದಾನ ವ್ಯವಸ್ಥೆ 'ಸ್ತ್ರೀತ್ವ'ವನ್ನು ಹತ್ತಿಕ್ಕಲು ಹಿಂಸೆ, ದಬ್ಬಾಳಿಕೆ,

## ಸಮಾಜವಾದಿ ಸ್ತ್ರೀವಾದ ಮತ್ತು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ

"ಜೀತದ ಅನುಭವವನ್ನು ಮೊಟ್ಟಮೊದಲು ಅನುಭವಿಸಿದ ಮಾನವ ಜೀವಿಯೆಂದರೆ ಮಹಿಳೆ. ಪುರುಷ ಜೀತದಾಳು ಹುಟ್ಟುವ ಮೊದಲೇ ಮಹಿಳೆ ಜೀತದಾಳಾಗಿದ್ದಳು" ಎಂದು ಅಗಸ್ಟ್‌ಬೆಬರ್ ವುಮೆನ್ ಆ್ಯಂಡ್ ಸೊಶಿಯಲಿಜಮ್ ಕೃತಿಯಲ್ಲಿ ಗುರುತಿಸಿದ್ದಾನೆ.[೮] ಈ ಹಿನ್ನೆಲೆಯಲ್ಲಿ ಅಗಸ್ಟ್ ಬೆಬೆಲ್‌ನು. ಮಹಿಳೆಯು ಕೇವಲ ಬಂಡವಾಳಶಾಹಿಯಿಂದ, ಉತ್ಪಾದನಾ ವಲಯದಾಚೆಗಿರುವುದರಿಂದ ಹಿಂಸೆ-ದೌರ್ಜನ್ಯಕ್ಕೆ ಬಲಿಯಾಗುತ್ತಾಳೆಂಬುದನ್ನು ತಿರಸ್ಕರಿಸುತ್ತಾನೆ. ಸಮಾಜವಾದ ಬರದೆ ಲಿಂಗ ಸಮಾನತೆ ಅಸಾಧ್ಯವೆಂಬುದಕ್ಕೆ ಒತ್ತು ಕೊಡುತ್ತಾನೆ. ಮಹಿಳೆಯೊಬ್ಬಳು ಸೋವಿಯತ್ ರಷ್ಯಾಯಾದ ಸಮಾಜ ಕಲ್ಯಾಣ ಇಲಾಖೆಯ ಮಂತ್ರಿಯಾಗಿ, ವಿದೇಶೀ ರಾಯಭಾರಿಯಾಗಿರುವುದು ಚಾರಿತ್ರಿಕ ಮಹತ್ವ ಘಟನೆಯನ್ನಾಗಿಸಿದ ಅಲೆಗ್ಝಾಂಡ್ರು ಕೊಲಂಬೈಯವರು ಬೆಬಲ್ ಚಿಂತನೆಗೆ ಪೂರಕವಾಗಿದ್ದಾರೆ. ಹಾಗೆಯೇ ತಾಯಿಯಾಗಿ, ಹೆಣ್ಣಾಗಿ ಶತಮಾನದುದ್ದಕ್ಕೂ ದೌಜನ್ಯದ ಬಲಿಪಶುವಾಗಿದ್ದಾಳೆಂದು ಹೇಳುತ್ತಾರೆ. ಸಮಾಜವಾದಿ ಸ್ತ್ರೀವಾದಿಗಳು, ಚರಿತ್ರೆಯನ್ನು ಹೆಣ್ಣಿನ ಆರ್ಥಿಕ ಮತ್ತು ಭೌತಿಕ ದಾಸ್ಯದ ಚರಿತ್ರೆಯೆಂದೆ ವಿಶ್ಲೇಷಿಸುತ್ತಾರೆ. ಸಾಂಪ್ರದಾಯಿಕ ಮಾರ್ಕ್ಸ್‌ವಾದವು ಕಡೆಗಣಿಸಿರುವ ಕೆಲವು ಮಹಿಳಾ ಸಂಗತಿಗಳನ್ನು ಪ್ರಸ್ತಾಪಿಸುತ್ತಾ ಶೀಲಾ ರೊಬಾತಮ್ ಮಹಿಳೆ ಕುಟುಂಬ ಮತ್ತು ಕೆಲಸದ ಸ್ಥಳಗಳಲ್ಲಿ ವಿಶಿಷ್ಟ ಅನುಭವವನ್ನು ಉತ್ಪಾದನಾ ಸಂಬಂಧದಲ್ಲಿ ಪಡೆಯುತ್ತಾಳೆಂದು ಹೇಳುತ್ತಾರೆ. "ಮಿಶೆಲ್ ಬ್ಯಾರೆಟ್" ತನ್ನ "ವಿಮೆನ್ಸ್ ಅಪ್ರೆಶನ್ ಟುಡೆ" ಕೃತಿಯಲ್ಲಿ ಅಸಮಾನತೆಗೆ ಉತ್ಪಾದನೆ ಮತ್ತು ಸಂತಾನೋತ್ಪಾದನೆಯೇ ಕಾರಣವಾಗಿವೆಯೆಂದು ಹೇಳುವುದರೊಂದಿಗೆ, ವಿಭಕ್ತ ಕುಟುಂಬಗಳೆ ವಿಶೇಷವಾಗಿ ಆರ್ಥಿಕ ಅಧಿಕಾರದ ಮೂಲಕ ಮಹಿಳೆಯರ ಮೇಲೆ ದಬ್ಬಾಳಿಕೆ ನಡೆಸಲು ಪುರುಷನಿಗೆ ಅನುಕೂಲ ಕಲ್ಪಿಸಿಕೊಡುತ್ತವೆ. ಸಾಮಾಜಿಕ ಸಂಸ್ಥೆಯಲ್ಲೊಂದಾದ ಕುಟುಂಬದಲ್ಲಿನ ಲಿಂಗ ತಾರತಮ್ಯದ ವಿಚಾರಧಾರೆಯು ಲಿಂಗಾಧಾರಿತ ಶ್ರಮವಿಭಜನೆಗೆ ವಿಸ್ತರಿಸುತ್ತದೆಯಾದ್ದರಿಂದ ಕೆಲಸದ ಸ್ಥಳಗಳಲ್ಲಿ ಮತ್ತು ಮನೆಯಲ್ಲಿ ಹೆಣ್ಣಿನ ಪಾತ್ರಗಳು ದಮನಕ್ಕೊಳಗಾಗುತ್ತವೆಯೆಂದು ವಿವರಿಸಿದ್ದಾರೆ.

ಸಮಾಜವಾದಿ ಸ್ತ್ರೀವಾದವು 'ಪಿತೃಪ್ರಧಾನತೆ'ಯೆ ಎಲ್ಲ ಬಗೆಯ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಮೂಲ ಆಧಾರವಾಗಿದೆ. ಈ ಸಂಬಂಧಿ ಮೂಲದಿಂದ ಜನಿಸುವ, ಗುರುತಿಸಿಕೊಳ್ಳುವ ಯಾವುದೇ ಸಂಗತಿಯು ಸಹ ಮಹಿಳೆಯರ ವಿರುದ್ಧ ದೌರ್ಜನ್ಯಕ್ಕೆ ಪ್ರೇರಣೆಯಾಗಿದೆಯೆಂಬ ನಿಲುವನ್ನು ತಳೆಯುತ್ತದೆ.

ಆರಂಭದಲ್ಲಿ ಬಂದಿರುವ ಸ್ತ್ರೀವಾದಿ ಸಿದ್ಧಾಂತಗಳು ಮೊದಲಿನಿಂದಲೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳನ್ನು ಪ್ರಸ್ತಾಪಿಸುತ್ತಲೆ ಬಂದಿವೆ. ಪ್ರತಿಯೊಂದು ಸಿದ್ಧಾಂತವು ಸಹ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಒಂದೊಂದೆ ಅಂಶಗಳನ್ನು ಕಾರಣವಾಗಿಸಿ ಅದರತ್ತ ಹೆಚ್ಚಿನ ಗಮನಹರಿಸಿರುವುದು ಸ್ಪಷ್ಟವಾಗಿದೆ. ಆದರೆ ಸಮಾಜವಾದಿ ಸ್ತ್ರೀವಾದಿ

ಸಿದ್ಧಾಂತವು ಮಾತ್ರ ಪಿತೃಪ್ರಧಾನತೆಯೆ ಎಲ್ಲ ಬಗೆಯ ಮಹಿಳೆಯ ಮೇಲಿನ ಆಕ್ರಮಣಕ್ಕೂ ಮೂಲ ತಳಹದಿಯೆಂಬುದನ್ನು ಸ್ಪಷ್ಟಪಡಿಸುತ್ತದೆ. ತೀರ ಇತ್ತೀಚೆಗೆ ಕಾಣಸಿಕೊಳ್ಳುತ್ತಿರುವ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು ೧೫ ಸಿದ್ಧಾಂತ ಗಳಲ್ಲಿ ಗುರುತಿಸಲಾಗಿದೆ. ಈ ಸಿದ್ಧಾಂತಗಳನ್ನು ಮೂರು ಹಂತಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ. ಅಂತರ್ ವ್ಯಕ್ತಿಗತ ಸಿದ್ಧಾಂತ (Intral Endividual Theory). ಮನೋ ಸಾಮಾಜಿಕ ಸಿದ್ಧಾಂತ (Socio Psychological Theory). ಸಮಾಜೋ ಸಾಂಸ್ಕೃತಿಕ ಸಿದ್ಧಾಂತ (Socio Cultural Theory) ಎಂದು Gellel and Straurವರು ೧೯೭೫ರಲ್ಲಿ ಪ್ರಸ್ತಾಪಿಸಿದರು. ನಂತರ ಇದೇ ವರ್ಷದಲ್ಲಿ Barnett, Mileer - Perrim and Perrim ಎನ್ನುವವರು ಮೈಕ್ರೊ ಓರಿಯೆಂಟೆಡ್ ಮತ್ತು ಮ್ಯಾಕ್ರೊ ಓರಿಯೆಂಟೆಡ್ ಥೇರಿಸ್ ಎಂದು ಅದೇ ವಿಶೇಷ ಲಕ್ಷಣಗಳನ್ನು ಹೊಂದಿರುವುದನ್ನು ಈ ಸಿದ್ಧಾಂತಗಳಡಿಯಲ್ಲಿ ಪ್ರತಿಪಾದಿಸುತ್ತಾರೆ. ಈ ಬಗೆ ಯನ್ನು ಬಹುತೇಕ ಚಿಂತಕರು ಬಳಸಿದ್ದಾರೆ. ಇತ್ತಿಚೀನ ದಿನಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಮಾದರಿಗಳು ಬಹುಮುಖಿ ಆಯಾಮಗಳಲ್ಲಿ ಬಳಕೆಯಾಗುತ್ತಿರುವುದು ನಿಶ್ಚಿತವಾಗಿದ್ದು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಈ ಅಧ್ಯಯನದಲ್ಲಿ ಮೈಕ್ರೊ ಓರಿಯೆಂಟೆಡ್ ಸಿದ್ಧಾಂತವು ಒಳಗೊಂಡಿರುವ ಸಾಮಾಜಿಕ ಕಲಿಕಾ ಸಿದ್ಧಾಂತ ಮತ್ತು ಮ್ಯಾಕ್ರೊ ಓರಿಯೆಂಟೆಡ್ ಥೇರಿಸ್ ಒಳಗೊಂಡಿರುವ ಸ್ತ್ರೀವಾದಿ ಸಿದ್ಧಾಂತವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸ ಲಾಗುತ್ತಿದೆ.

### ಸಾಮಾಜಿಕ ಕಲಿಕಾ ಸಿದ್ಧಾಂತ

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಚೌಕಟ್ಟನ್ನು ವ್ಯಾಖ್ಯಾನಿಸುವಲ್ಲಿ ಸಾಮಾಜಿಕ ಕಲಿಕಾ ಸಿದ್ಧಾಂತವು ಹೆಚ್ಚು ಜನಪ್ರಿಯತೆಯನ್ನು ಪಡೆದಿದೆ. ದೌರ್ಜನ್ಯಕ್ಕೆ ತೆರೆದುಕೊಂಡವರು ಮತ್ತು ಅನುಭವಿಸಿದವರೀರ್ವರ ವೈಯಕ್ತಿಕ ಕಲಿಕೆಯು ಹೇಗೆ ಅವರ ವರ್ತನೆಗಳುದ್ದಕ್ಕೂ ಸೂಚಿಸುತ್ತವೆಯೆಂಬುದನ್ನು ಮುಖ್ಯವಾಗಿ ಪರಿಗಣಿಸುತ್ತದೆ. ಈ ಮಾದರಿ ಪರಿಕಲ್ಪನೆಯ ದೃಷ್ಟಿಕೋನದ ಪ್ರಭಾವದಿಂದ ಅಪರಾಧಿಯ ವರ್ತನೆಗಳನ್ನು ನೋಡುವ ಕೆಲಸ ಮೊದಲಿ ನಿಂದಲೂ ನಡೆದಿದೆ. ಸಾಮಾಜಿಕ ಕಲಿಕಾ ಸಿದ್ಧಾಂತವು ಶಾಸ್ತ್ರೀಯವಾದ ಮತ್ತು ಪ್ರಮುಖ ಪರಿಕಲ್ಪನೆಗಳನ್ನು ಬಳಸಲು ಈಗಾಗಲೇ ಮನೋವೈಜ್ಞಾನಿಕ ಜ್ಞಾನಶಿಸ್ತಿನಿಂದ ನಿರ್ಬಂಧಿತ ವಾಗಿದೆ. ಉತ್ತೇಜನ ಮತ್ತು ಜವಾಬ್ದಾರಿಗಳ ಸಂಯೋಜನೆಯಲ್ಲಿ ಕಲಿಕೆಯು ಸಾಗುತ್ತದೆ. ಈ ಕಲಿಕೆಯು ಸಂಭವಿಸಿದಂತೆಲ್ಲಾ ವರ್ತನೆಗಳು ಭದ್ರವಾಗುತ್ತವೆ. ಮಹಿಳೆಯರ ವಿರುದ್ಧ ನಡೆ ಯುವ ದೌರ್ಜನ್ಯಕ್ಕೆ ಈ ಸಿದ್ಧಾಂತವನ್ನು ಅನ್ವಯಿಸುವುದಾದರೆ, ದೌರ್ಜನ್ಯವು ತಲೆಮಾರು ಗಳಿಂದಲೂ ಎಲ್ಲೆಡೆಯೂ ಸಂಚರಿಸುತ್ತಲೇ ಇದೆ. ಹಾಗೂ ಇದು ಕುಟುಂಬದೊಳಗಿನ ಸಾಮಾಜೀಕರಣದ ಚೌಕಟ್ಟಿನೊಳಗೆ ಕಲಿಯಲ್ಪಡುತ್ತದೆ. ಕುಟುಂಬವೇ ಇದರ ಪ್ರಾಥಮಿಕ ಮಧ್ಯವರ್ತಿಯೆಂದು ಹೇಳಲಾಗುತ್ತದೆ. ಕುಟುಂಬ ಮೂಲದಿಂದ ವಿಶೇಷವಾಗಿ ಯಾರು ದೌರ್ಜನ್ಯವನ್ನು ಅನುಭವಿಸಿದ್ದಾರೊ ಮತ್ತು ನಡೆವ ದೌರ್ಜನ್ಯಗಳಿಗೆ ಸಾಕ್ಷಿಯಾಗಿದ್ದಾರೊ

ವ್ಯಕ್ತಿಯ ವ್ಯಕ್ತಿತ್ವಗಳ ರೂಪಿಕೆಯಲ್ಲಿ ಸಾಮಾಜಿಕ ಕಲಿಕಾ ಸಿದ್ಧಾಂತವು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಹಾಗಾಗಿಯೇ ಮಹಿಳೆಯರ ವಿರುದ್ಧ ಎಸಗುವ ಆಕ್ರಮಣಗಳನ್ನು ಮತ್ತು ಸಾಮಾಜಿಕ ಕಲಿಕೆಯನ್ನಾಧರಿಸಿ ಪ್ರತಿಪಾದಿಸುವ ಈ ಚಿಂತನೆಯು ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಪೂರಕವಾಗಿ ನಿಲ್ಲುತ್ತದೆ.

**ಸ್ತ್ರೀವಾದಿ ಸಿದ್ಧಾಂತ**

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಕುರಿತು ಸ್ತ್ರೀವಾದಿ ವಿಶ್ಲೇಷಣೆಯೆಂದರೆ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಲಿಂಗಸಂಬಂಧಿಯಾಗಿ ಸಂರಚನೆಗೊಂಡ ಅಧಿಕಾರದ ಸಂಬಂಧಗಳ ಮಧ್ಯದಲ್ಲಿ ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ಮಾಡುವುದು ಹಾಗೂ ಪುರುಷ ಪ್ರಧಾನ ಸಮಾಜದ ಸಂರಚನೆಯ ಐತಿಹಾಸಿಕ ಹಿನ್ನೆಲೆಯನ್ನು ಮತ್ತು ಸಾಮಾಜೀಕರಣದಲ್ಲಿ ಅಂತರ್ಗತಗೊಳಿಸಲಾಗುವ ಸ್ತ್ರೀ-ಪುರುಷರ ಸ್ಥಿರ ಮಾದರಿ ಪಾತ್ರಗಳು ಅಥವಾ ಲಿಂಗ ನಿರ್ದಿಷ್ಟ ಪಾತ್ರಗಳೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಇರುವ ಕಾರಣಗಳ ಪ್ರಧಾನ ಲಕ್ಷಣಗಳಲ್ಲಿ ಒಂದಾಗಿದೆ. ಇದನ್ನೇ ಸಂಶೋಧಕರು ಸಾಂಪ್ರದಾಯಿಕ ವಿವಾಹಗಳಲ್ಲಿ ಪುರುಷ ಪ್ರಧಾನತೆಯು ಉಳಿಸಿಕೊಂಡು ಬಂದಿರುವ ತಂತ್ರಗಾರಿಕೆಯೆಂದು ಹೇಳಿದ್ದಾರೆ. ಈ ದೌರ್ಜನ್ಯದ ಕುರಿತ ಸ್ತ್ರೀವಾದಿಗಳ ವಿವರಣೆಯೆಂದರೆ ಪುರುಷ ಪ್ರಧಾನತೆ ಮತ್ತು ಸಾಂಸ್ಕೃತಿಕ ಸಿದ್ಧಾಂತಗಳ ಮಧ್ಯೆ ಇರುವ ಸಂಬಂಧದತ್ತ ಹೆಚ್ಚು ಗಮನಹರಿಸುತ್ತದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಮೂಲವೆಂದರೆ, ಸಾಮಾಜಿಕ ಸಂರಚನೆಯಲ್ಲಿ ಮಹಿಳೆಗೆ ದತ್ತವಾದ ಅಧೀನ ಸ್ಥಾನಮಾನ. ಈ ಅಧೀನತೆಯು ಸಾಂಪ್ರದಾಯಿಕ ಕುಟುಂಬ ಮತ್ತು ಸಂಸ್ಕೃತಿಯ ಪೂರ್ವಾರ್ಜಿತವಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಸ್ಪಷ್ಟಗೊಳಿಸಬೇಕಾದರೆ ಪುರುಷ ಪ್ರಧಾನ ವ್ಯವಸ್ಥೆಯ ಐತಿಹಾಸಿಕ ಹಿನ್ನೆಲೆಯಿಂದ ಮತ್ತು ಅದಕ್ಕೆ ಅಡ್ಡಿಯಾಗಿರುವ ಸಾಂಸ್ಕೃತಿಕ ಕಾರಣಗಳಿಂದ ಹೊರಬರುವ ಅಗತ್ಯತೆಯನ್ನು ಹೇಳುತ್ತದೆ. ಮಹಿಳೆಯರನ್ನು ದಮನಗೊಳಿಸುವ ಪುರುಷಾಧಿಕಾರ ಮತ್ತು ಅದನ್ನು ಸಮರ್ಥಿಸುವ ಸಾಮಾಜಿಕ ನಿಯಂತ್ರಣವು ದೌರ್ಜನ್ಯದ ವಿಧಾನಗಳಲ್ಲೊಂದಾಗಿದೆ. ದೌರ್ಜನ್ಯವಿಲ್ಲದ ಸ್ಥಳ ನಿರ್ಮಾಣವಾಗುವುದು ಕೇವಲ ಸಮಾನತಾ ಪ್ರತಿಪಾದಕ ಸಮಾಜಗಳಲ್ಲಿ, ಸ್ತ್ರೀವಾದಿ ದೃಷ್ಟಿಕೋನವನ್ನಿರಿಸಿಕೊಂಡು ಹೊರಟಿರುವ ಬೇರೆ ಬೇರೆ ಸಂಶೋಧನೆಗಳು ಹೇಳುವಂತೆ 'ದಾಂಪತ್ಯ ವಿಷಯ ಸಂಬಂಧಿತ ದೌರ್ಜನ್ಯ'ಗಳನ್ನು ಎದುರಿಸುತ್ತಿರುವುದರ ಮೂಲವು ವಿವಾಹಗಳಲ್ಲಿರುವ ಅಸಮಾನತೆ ಮತ್ತು ಸಹ ಸಂಬಂಧಗಳಲ್ಲಿಯೇ ನಡೆಯುವ ವಿವಾಹಗಳೇ ಕಾರಣವೆಂದು ಸಲಹೆ ಮಾಡಿದ್ದಾರೆ. ಅಸಮಾನ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಾಚಾರದ ಹೊಣೆಯು ಪುರುಷನದೇ ಆದರೂ, ಅದನ್ನು ಮರೆಮಾಚುವುದರೊಂದಿಗೆ, ಅದರ ಪರಿಣಾಮ ಮತ್ತು ಆರೋಪಗಳಿಂದ ಅದರ ಹೊಣೆಗಾರಿಕೆಯನ್ನು ಮಹಿಳೆಗೆ ಹೇರಲಾಗಿದೆ. ಇವೆಲ್ಲದರ ಪರಿಣಾಮವಾಗಿ ಸ್ತ್ರೀವಾದಿ ಚಿಂತನೆಗಳು, ಅತ್ಯಾಚಾರ ಕೇವಲ ಲೈಂಗಿಕ ತೃಪ್ತಿಯಷ್ಟೇ ಅಲ್ಲ. ಅದು ಕೇವಲ ಪ್ರಾಥಮಿಕ ಉದ್ದೇಶವಷ್ಟೇ. ಅತ್ಯಾಚಾರದ ನೈಜತೆಯೆಂದರೆ ಒಂದು ವಸ್ತುವಿನ

ಮೇಲೆ ನಿಯಂತ್ರಣ ಸಾಧಿಸುವುದು ಹಾಗೂ ದಬ್ಬಾಳಿಕೆಗೊಳಪಡಿಸುವುದು ಎಂಬ ನಿಲುವನ್ನು ತಾಳಿದ್ದಾರೆ.

ಪುರುಷ ಪ್ರಧಾನ ಪರಿಕಲ್ಪನೆಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಮೂಲ ಕಾರಣ ಮತ್ತು ಜವಾಬ್ದಾರಿ. ಅದು ನಾಶವಾಗದಂತೆ ನಿತ್ಯ ದಮನವನ್ನು ಪ್ರೋತ್ಸಾಹಿಸಿ ಪ್ರಭಾವಗೊಳಿಸುವಂತೆ ಮಹಿಳೆಯರನ್ನು ರೂಪಿಸಲಾಗುತ್ತಿಯೆಂಬುದು ಸ್ತ್ರೀವಾದದ ವಿವರಣೆಯಾಗಿದೆ.

ಡ್ಯೂಮ್ ಎನ್ನುವ ಚಿಂತಕರು ಪುರುಷ ಪ್ರಧಾನತೆಯ ಪರಿಕಲ್ಪನೆಗನುಗುಣವಾಗಿ, ಸಮಾಜ ವ್ಯವಸ್ಥೆಯಲ್ಲಿ ಪುರುಷ ದಬ್ಬಾಳಿಕೆ ಹಾಗೂ ವಿಶೇಷ ಪ್ರಯೋಜಗಳನ್ನು ಒದಗಿಸುವುದು ಬಹಳ ಸಾಮಾನ್ಯವಾದಂತಹ ಸಂಗತಿ. ಪುರುಷ ಪ್ರಧಾನತೆಯ ಪರಿಕಲ್ಪನೆಯಿಂದ ಮುಂದುವರೆದು ಅದನ್ನಾಧರಿಸಿ ರಚಿತವಾಗುವ ಪುರುಷ ಪ್ರಧಾನ ಸಂರಚನೆಯೇ ದೌರ್ಜನ್ಯಕ್ಕೆ ಮೂಲ ಕಾರಣವೆಂದು ಅಭಿಪ್ರಾಯ ಪಡುತ್ತಾರೆ.[೬] *ಒಟ್ಟಾರೆಯಾಗಿ ಈ ಎರಡು ಸಿದ್ಧಾಂತಗಳು ಪುರುಷ ಪ್ರಧಾನತೆ ಮತ್ತು ಅಲ್ಲಿನ ಸಾಮಾಜಿಕ ಕಲಿಕೆಯನ್ನು ಆಧರಿಸಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ವಿಸ್ತರಿಸುತ್ತವೆ.*

• • •

ಒಂದು ಶಿಸ್ತಿನಿಂದ, ಮಾನವೀಯತಾ ದೃಷ್ಟಿಯಿಂದ, ಸೇವಾ ಮನೋಭಾವನೆಯಿಂದ ನರ್ಸಿಂಗ್ ವೃತ್ತಿಯು ಬೆಳೆದು ಜನಪ್ರಿಯವಾಗಿದೆ. ಐರ್ಲೆಂಡಿನ ಕ್ಯಾಥೋಲಿಕ್ ಚರ್ಚ್‌ನವರೂ ಮತ್ತು ಇಂಗ್ಲೆಂಡಿನ ಸೇಂಟ್ ಜಾನ್ಸ್ ಚರ್ಚಿನವರೂ ಆಸ್ಪತ್ರೆಗಳಲ್ಲಿ ಚಿಕ್ಕವಯಸ್ಸಿನ ಮಹಿಳೆಯರು ದಾದಿವೃತ್ತಿಯಲ್ಲಿ ತರಬೇತಿ ಹೊಂದಲು ಕಾರಣರಾದರು.

ಪ್ರಾಚೀನ ಕಾಲದಿಂದ ಆಧುನಿಕಾಲ ಅಂದರೆ ಸುಮಾರು ಹತ್ತೊಂಬತ್ತನೆಯ ಶತಮಾನದ ವರೆಗೆ ದಾದಿವೃತ್ತಿಯನ್ನು ಹೀನ ಕೆಲಸವೆಂದು ತಿಳಿಯಲಾಗಿತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಅಂದರೆ ೧೮೬೦ರಲ್ಲಿ ನೈಟಿಂಗೇಲ್ ಪ್ರಥಮ ಬಾರಿಗೆ ಲಂಡನ್ನಿನ ಸೇಂಟ್ ಥಾಮಸ್ ಆಸ್ಪತ್ರೆಯಲ್ಲಿ ದಾದಿಯರ ತರಬೇತಿಯ ಶಾಲೆಯನ್ನು ಪ್ರಾರಂಭಿಸಿದಳು. ಆ ಮೂಲಕ ದಾದಿವೃತ್ತಿಯು ವೃತ್ತಿ ನೈಪುಣ್ಯತೆಯನ್ನು ಪಡೆಯಿತು. ನೈಟಿಂಗ್ ಪ್ರಥಮ ಆಧುನಿಕ ದಾದಿಯೆನಿಸಿಕೊಂಡಳು. ಅಂದಿನಿಂದ ನೈಟಿಂಗೇಲ್ ಸೇವಾಕ್ರಮವೆಂಬ ದಾದಿಯ ಸೇವಾ ನಿಯಮ ರೂಪುಗೊಂಡಿತು.

೧೮೫೪-೧೮೫೬ರ ಅವಧಿಯಲ್ಲಿ ನಡೆದ ಬ್ರಿಟನ್ ಟರ್ಕಿಯಲ್ಲಿ ನಡೆಸಿದ ಕ್ರಿಮೆಯನ್ ಯುದ್ಧ (Crimean War)ದ ಗಾಯಗೊಂಡ ಸೈನಿಕರ ಶುಶ್ರೂಷೆಗಾಗಿ ನೈಟಿಂಗೇಲ್ ನೇಮಕಗೊಂಡಳು. ಕೇವಲ ಎರಡು ವರ್ಷಗಳಲ್ಲಿ ಇವಳ ಸೇವೆಯಿಂದ ಸೇನೆಯ ಗಾಯಾಳುಗಳ ಸಾವು ಶೇಕಡಾ ೪೦ ರಿಂದ ಶೇಕಡಾ ೨ಕ್ಕೆ ಇಳಿಯಿತು. ಇದರಿಂದ ನೈಟಿಂಗೇಲ್ ಕೀರ್ತಿ ಜಗತ್ತಿನಾದಂತ ವ್ಯಾಪಿಸಿತು.

ಕ್ರಿಮೆಯನ್ ಯುದ್ಧದ ಸೈನಿಕರ ಶುಶ್ರೂಷೆಯ ನಂತರ ದಾದಿಯರ ವೃತ್ತಿಯ ಘನತೆ ಹೆಚ್ಚಾಯಿತು. ಅಲ್ಲದೆ ಸಾರ್ವಜನಿಕರು ೪೪,೦೦೦ ಪೌಂಡ್ ಹಣವನ್ನು ನರ್ಸಿಂಗ್ ಶಾಲೆ ತೆರೆಯಲು ದಾನ ನೀಡಿದರು. ಈ ಹಣದಿಂದ ೧೮೬೦ರಲ್ಲಿ ಲಂಡನ್ ಸೇಂಟ್ ಥಾಮಸ್ ಆಸ್ಪತ್ರೆಯಲ್ಲಿ ನರ್ಸಿಂಗ್ ತರಬೇತಿ ಶಾಲೆಯನ್ನು ನೈಟಿಂಗೇಲ್ ಸ್ಥಾಪಿಸಿದಳು. ೧೮೮೭ರ ವೇಳೆಗೆ ಈ ಶಾಲೆಯಲ್ಲಿ ತರಬೇತಿಯನ್ನು ಪಡೆದ ದಾದಿಯರು ಆಸ್ಟ್ರೇಲಿಯಾ, ಕೆನಡಾ, ಭಾರತ, ಶ್ರೀಲಂಕಾ, ಜರ್ಮನಿ, ಸ್ವೀಡನ್ ಮತ್ತು ಯುಎಸ್‌ಎ ಮುಂತಾದ ಕಡೆಗಳಲ್ಲಿ ಸೇವೆ ಸಲ್ಲಿಸುವುದರ ಮೂಲಕ ದಾದಿಯರ ಸೇವೆ ಒಂದು ಗೌರವಯುತ ವೃತ್ತಿಯೆನಿಸಿಕೊಂಡಿತು. ನಂತರ ದಾದಿಯರ ಸೇವಾ ಕ್ಷೇತ್ರ ವಿಶಾಲವಾಗುವುದಕ್ಕೆ ಯುನಿಸೆಫ್(UNICEF)ನವರೂ, ವಿಶ್ವ ಆರೋಗ್ಯ ಸಂಸ್ಥೆ (WHO)ನವರೂ ಹಾಗೂ ರೆಡ್‌ಕ್ರಾಸ್‌ನವರೂ ತುಂಬಾ ಶ್ರಮಿಸುತ್ತಿದ್ದಾರೆ.

## ಭಾರತದಲ್ಲಿ ದಾದಿಯ ವೃತ್ತಿ

ಮಹಿಳೆಯರ ದಾದಿತನ ಅಶೋಕನ ಕಾಲದಲ್ಲೂ ಬಹಳ ಉತ್ತುಂಗ ಸ್ಥಿತಿಯಲ್ಲಿತ್ತು ಎಂದು ತಿಳಿದು ಬರುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ದಾದಿಯರ ಉಲ್ಲೇಖಗಳಿವೆ. ಆದರೆ, ಹದಿನೈದನೆಯ ಶತಮಾನದವರೆಗೂ ಅಂದರೆ ವಾಸ್ಕೋಡಿಗಾಮ ಭಾರತಕ್ಕೆ ಬರುವವರೆಗೂ ನರ್ಸಿಂಗ್ ವಿಚಾರದಲ್ಲಿ ಹೆಚ್ಚಿನ ಮಾಹಿತಿ ಇರಲಿಲ್ಲ. ಆಗ ಪೋರ್ಚ್‌ಗೀಸರು ಯುರೋಪಿನ ಮಾದರಿಯಲ್ಲೇ ಕೆಲವು ಡಿಸ್ಪೆನ್ಸರಿಗಳನ್ನು ತೆರೆದಿದ್ದರು. ಗೋವಾ, ಮದ್ರಾಸ್,

(ಚೆನ್ನೈ)ಗಳಿಗೆ ವೈದ್ಯರನ್ನು ಯುರೋಪಿನಿಂದಲೇ ಕರೆಸಿದ್ದರು. ಪ್ರಥಮ ಬಾರಿಗೆ ಈಸ್ಟ್ ಇಂಡಿಯಾ ಕಂಪನಿಯವರು ೧೬೬೪ರಲ್ಲಿ ತನ್ನ ಸೈನಿಕರಿಗಾಗಿ ಮದ್ರಾಸ್‌ನಲ್ಲಿ ಮಿಲಿಟರಿ ಆಸ್ಪತ್ರೆ ತೆರೆದರು. ೧೭೯೭ರಲ್ಲಿ ಡಾ. ಜಾನ್ ಅಂಡರ್‌ವುಡ್‌ರ ನೆರವಿನಿಂದ ಮದ್ರಾಸಿನಲ್ಲಿ ಬಡವರಿಗಾಗಿ ಹೆರಿಗೆ ಆಸ್ಪತ್ರೆ ಪ್ರಾರಂಭವಾಯಿತು. ೧೮೫೪ರಲ್ಲಿ ಸೂಲಗಿತ್ತಿ(Midwives)ಯರ ಮೊದಲನೆಯ ತರಬೇತಿ ಶಾಲೆಯು ತೆರೆಯಲ್ಪಟ್ಟಿತು.

ಇಂಗ್ಲೆಂಡಿನ ಥಾಮಸ್ ಆಸ್ಪತ್ರೆಯ ನರ್ಸಿಂಗ್ ಪದವೀಧರರು ಭಾರತಕ್ಕೆ ಕಳುಹಿಸಲ್ಪಟ್ಟರು. ಆ ಮೂಲಕ ದೆಹಲಿಯಲ್ಲಿ ಸೇಂಟ್ ಸ್ಟೇಫನ್ ಆಸ್ಪತ್ರೆಯು ೧೮೬೭ರಲ್ಲಿ ಹೆಣ್ಣು ಮಕ್ಕಳಿಗಾಗಿ ಪ್ರಥಮ ನರ್ಸಿಂಗ್ ತರಬೇತಿ ಶಾಲೆಯನ್ನು ಪ್ರಾರಂಭಿಸಿತು. ೧೮೭೧ರಲ್ಲಿ ಪ್ರಥಮ ಸರ್ಕಾರಿ ನರ್ಸಿಂಗ್ ತರಬೇತಿ ಶಾಲೆಯು ಮದ್ರಾಸಿನಲ್ಲಿ ಪ್ರಾರಂಭವಾಯಿತು. ಇದು ಆರು ತಿಂಗಳು ಡಿಪ್ಲೊಮಾ ಕೋರ್ಸ್ ಆಗಿದ್ದು ಆರು ಜನ ವಿದ್ಯಾರ್ಥಿನಿಯರು ಮಾತ್ರ ಪ್ರವೇಶ ಪಡೆದಿದ್ದರು. ೧೮೯೦-೧೯೦೦ರ ಅವಧಿಯಲ್ಲಿ ನಾಲ್ಕು ಜನ ಮಹಿಳಾ ಸೂಪರಿಡೆಂಟ್, ನಾಲ್ಕು ಜನ ತರಬೇತಿ ಪಡೆದ ದಾದಿಯರು ಇಂಗ್ಲೆಂಡಿನಿಂದ ಮದ್ರಾಸಿಗೆ ನೇಮಕಗೊಂಡರು. ಈ ಅವಧಿಯಲ್ಲಿ ಕ್ರೈಸ್ತ ಮಿಷನರಿ ಮತ್ತು ಸರ್ಕಾರದ ವತಿಯಿಂದ ದೇಶದ ಮೂಲೆ ಮೂಲೆಗಳಲ್ಲಿ ಅನೇಕ ದಾದಿಯರ ತರಬೇತಿ ಶಾಲೆಗಳು ಸ್ಥಾಪನೆಗೊಂಡವು. ೧೮೯೭ರಲ್ಲಿ ಡಾ. ಬಿ.ಸಿ. ರಾಯ್ ದಾದಿಯರ ಸೇವೆಯ ಘನತೆಯನ್ನು ಹೆಚ್ಚಿಸಲು ಉತ್ತಮ ಕೆಲಸ ನಿರ್ವಹಿಸಿದರು.

ಇಷ್ಟಾದರೂ ಆಗ ದೇಶದಲ್ಲಿ ಹಿಂದೂ ಮಹಿಳೆಯರು ದಾದಿ ವೃತ್ತಿಗೆ ಬರಲು ಸಿದ್ಧರಿರಲಿಲ್ಲ. ಕಾರಣ ಮುಸ್ಲಿಂ ಮಹಿಳೆಯರಿಗೆ ಈ ವೃತ್ತಿಯ ಬಗ್ಗೆ ಹೆಚ್ಚಿನ ಒಲವಿರಲಿಲ್ಲ. ಏಕೆಂದರೆ ದಾದಿವೃತ್ತಿ ಕೆಳದರ್ಜೆಯದೆಂದು ತಿಳಿಯಲ್ಪಟ್ಟಿತ್ತು ಮತ್ತು ಅರ್ಥವಾಗದ ಇಂಗ್ಲೀಷ್ ಭಾಷೆಯ ತೊಡಕು ಬೇರೆ ಅಡ್ಡಿಯಾಗುತ್ತಿತ್ತು. ಆದರೆ ಆಂಗ್ಲೋ ಇಂಡಿಯನ್, ಇಂಡಿಯನ್ ಕ್ರಿಶ್ಚಿಯನ್ ಮಹಿಳೆಯರು ಮಾತ್ರ ದಾದಿಯರ ವೃತ್ತಿಗೆ ಬರುತ್ತಿದ್ದರು. ಶ್ರೀಮತಿ ಕಾಶೀಬಾಯಿ ಗಣಪತ್ ಎನ್ನುವಾಕೆಯೇ ೧೮೯೧ರಲ್ಲಿ ದಾದಿ ತರಬೇತಿ ಹೊಂದಿದ ಪ್ರಥಮ ಹಿಂದೂ ಮಹಿಳೆ.

೧೯೦೮ರಲ್ಲಿ ಭಾರತದ ತರಬೇತಿ ಪಡೆದ ದಾದಿಯರ ಸಂಘ (The Trained Nurses Association of India) ಸ್ಥಾಪನೆಯೊಂದಿಗೆ ದಾದಿ ವೃತ್ತಿಯ ಘನತೆಯ ಹೆಚ್ಚಳಕ್ಕೆ ಕಾರಣವಾಯಿತು. ೧೯೧೮ರಲ್ಲಿ ದೆಹಲಿ ಮತ್ತು ಕರಾಚಿಯಲ್ಲಿ ಆರೋಗ್ಯ ವೀಕ್ಷಕ ತರಬೇತಿ ಶಾಲೆಗಳು ಪ್ರಾರಂಭವಾದವು. ಇಲ್ಲಿ ತರಬೇತಿ ನೀಡಲು ಮಿಸ್‌ಗ್ರಿಫ್ಟಿನ್ ಮತ್ತು ಗ್ರಾಹಂ ಎಂಬ ಇಬ್ಬರು ಇಂಗ್ಲೀಷ್ ಮಹಿಳೆಯರು ನೇಮಕಗೊಂಡರು. ೧೯೨೬ರಲ್ಲಿ ಮದ್ರಾಸ್ ಸರ್ಕಾರ ಪ್ರಥಮ ನರ್ಸಿಂಗ್ ನೊಂದಾವಣೆ ಪರಿಷತ್ ಸ್ಥಾಪಿಸಿತು. ೧೯೪೬ರಲ್ಲಿ ದೆಹಲಿ ಮತ್ತು ವೆಲ್ಲೂರ್‌ಗಳಲ್ಲಿ ನಾಲ್ಕು ವರ್ಷದ ಪದವಿ ನರ್ಸಿಂಗ್ ಕೋರ್ಸ್‌ಗಳನ್ನು ಸ್ಥಾಪಿಸಲಾಯಿತು. ೧೯೩೧-೩೯ರ ಅವಧಿಯಲ್ಲಿ ರಾಕ್‌ಫೆಲ್ಲರ್ ಫೌಂಡೇಷನ್ಸ್ (Rockefeller Foundatons) ಅಡಿಯಲ್ಲಿ ದೆಹಲಿ, ಮದ್ರಾಸ್, ಬೆಂಗಳೂರು, ಲಕ್ನೌ, ತಿರುವನಂತಪುರ, ಪೂನಾ, ಕಲ್ಕತ್ತಾಗಳಲ್ಲಿ ಆರೋಗ್ಯ ಕೇಂದ್ರಗಳು ಸ್ಥಾಪನೆಗೊಂಡವು.

೧೯೪೭ರ ನಂತರ ಸಾಮುದಾಯಿಕ ಅಭಿವೃದ್ಧಿ ಯೋಜನೆ ಮತ್ತು ಆರೋಗ್ಯ ಸೇವೆಗಳ ವಿಸ್ತರಣೆಯು ದಾದಿಯರಿಗೆ ಹೆಚ್ಚಿನ ಬೇಡಿಕೆಯನ್ನು ಸೃಷ್ಟಿಸಿತು. ಇದರಿಂದ ಅನೇಕ ವಿಭಾಗ ಗಳಲ್ಲಿ ಆಯ, ಸೂಲಗಿತ್ತಿ, ದಾದಿ, ಸಹಾಯಕ ದಾದಿ, ಸಹಾಯಕ ಸೂಲಗಿತ್ತಿ, ಸಾರ್ವಜನಿಕ ಜನಾರೋಗ್ಯ ದಾದಿ, ಆರೋಗ್ಯ ಸಂದರ್ಶಕಗಳು, ದಾದಿ ವೃತ್ತಿಯ ಉಪಾಧ್ಯಾಯಿನಿ, ಮೆಟ್ರಿನ್, ಡಿಸ್ಟ್ರಿಕ್ಸ್ ನರ್ಸಿಂಗ್ ಸೂಪರಿನ್‌ಟೆನ್‌ಡೆಂಟ್ ಮುಂತಾದ ಉದ್ಯೋಗಗಳು ಸೃಷ್ಟಿಯಾದವು. ೧೯೪೯ರಲ್ಲಿ ಭಾರತದ ನರ್ಸಿಂಗ್ ಕೌನ್ಸಿಲ್ (The Indian Nursing Council) ಸ್ಥಾಪನೆ ಯಾಯಿತು. ೧೯೫೬ರಲ್ಲಿ ಶ್ರೀಮತಿ ಅಂದ್ರೇನ್‌ವಾಲ ಭಾರತ ಸರ್ಕಾರದ ನರ್ಸಿಂಗ್ ಸಲಹೆ ಗಾರರಾಗಿ ನೇಮಕಗೊಂಡರು. ೧೯೬೦ರಲ್ಲಿ ದೆಹಲಿಯ ನರ್ಸಿಂಗ್ ಕಾಲೇಜಿನಲ್ಲಿ ಎರಡು ವರ್ಷದ ನರ್ಸಿಂಗ್ ಸ್ನಾತಕೋತ್ತರ ಪದವಿ ಕೋರ್ಸ್ ಪ್ರಾರಂಭಿಸಲ್ಪಟ್ಟಿತು. ೧೯೬೩ರಲ್ಲಿ ತಿರುವನಂತಪುರದಲ್ಲಿ ಎರಡು ವರ್ಷದ ಪೋಸ್ಟ್ ಸರ್ಟಿಫಿಕೇಟ್ ಬ್ಯಾಚುಲರ್ ಡಿಗ್ರಿ ಪ್ರೋಗ್ರಾಂ ಪ್ರಾರಂಭವಾಯಿತು. ಅಲ್ಲದೆ ಅಂತಾರಾಷ್ಟ್ರೀಯ ನರ್ಸಿಂಗ್ ಕೌನ್ಸಿಲ್, CMA of India ರಾಜ್ಯ ಮಟ್ಟದ ನೊಂದಾಣಿ ಕೌನ್ಸಿಲ್ ಮುಂತಾದವು ದಾದಿ ವೃತ್ತಿಗೆ ಸಂಬಂಧಿಸಿದ ಬಡ್ತಿ, ಉತ್ತಮೀ ಕರಣ ಮುಂತಾದವುಗಳೊಂದಿಗೆ ಸಂಬಂಧ ಹೊಂದಿವೆ. ಹೀಗೆ ದಾದಿಯರ ತರಬೇತಿ ಶಾಲೆಗಳ ಸ್ಥಾಪನೆಯೊಂದಿಗೆ ಅನೇಕ ಮಹಿಳೆಯರಿಗೆ ಉದ್ಯೋಗ ದೊರೆತು ಆರ್ಥಿಕವಾಗಿ ಸಹಾಯವಾಗಿ ಜೀವನೋಪಾಯಕ್ಕೆ ಮಾರ್ಗದರ್ಶಕವಾಗಿದೆ. ಇದರ ಮೂಲಕ ಭಾರತದಲ್ಲಿ ನರ್ಸಿಂಗ್ ಕ್ಷೇತ್ರ ವಿಸ್ತರಣೆಗೊಂಡಿದೆ.

### ದಾದಿ ಎಂಬ ಪದದ ಅರ್ಥ ವಿವರಣೆ

**ದಾದಿಯೆಂದರ** ಹಲವಾರು ಅರ್ಥಗಳಿವೆ.

೧. ಸಾಕು ತಾಯಿ, ಮಕ್ಕಳನ್ನು ಸಾಕುವವಳು (A foster Mother)

೨. ತಾಯಿಗೆ ಬದಲಾಗಿ ಹಾಲುಕೊಟ್ಟು ಸಾಕುವವಳು (A Wet Nurse)

೩. ದಾಸಿ, ಸೇವಕಿ, ಆಳು (A Women Servant)

೪. ಆಸ್ಪತ್ರೆಯಲ್ಲಿ ರೋಗಿಗಳ ಸೇವೆ ಮಾಡುವವಳು (A Mid wife)

**ಸೂಲಗಿತ್ತಿ ಎಂದರೆ** : ಹೆರಿಗೆ ಸಮಯದಲ್ಲಿ ಸಹಾಯ ಮಾಡುವವರು (A Mid wife)

**ಶುಶ್ರೂಷಕಿ ಎಂದರೆ** : ಸೇವೆ ಅಥವಾ ಉಪಚಾರ ಮಾಡುವಳು (Service Nursing Ministration). ಹೀಗೆ ಬೇರೆ ಬೇರೆ ಅರ್ಥಗಳಿದಾಗ್ಯೂ, ಆಸ್ಪತ್ರೆಯಲ್ಲಿ ರೋಗಿಗಳ ಸೇವೆ ಮಾಡುವವಳನ್ನು ಆಧುನಿಕ ಅರ್ಥದಲ್ಲಿ 'ದಾದಿ (Nurse) ಎಂದು ಕರೆಯಲಾಗುವುದು. ಅವಳು ಸಲ್ಲಿಸುವ ಸೇವೆಗೆ "ದಾದಿತನ" (Nursing) ಎಂದು ಕರೆಯಲಾಗುವುದು. ಅಲ್ಲದೆ ದಾದಿ, ಸೂಲಗಿತ್ತಿ, ಶುಶ್ರೂಷಕಿ ಎಂಬ ಪದಗಳು ಸಮಾನಾರ್ಥಕ ಪದಗಳಾಗಿ ಬಳಕೆಯಾಗಿವೆ.

### ದಾದಿ ವೃತ್ತಿಗೆ ಬರುವವರ ಹಿನ್ನೆಲೆ

ದಾದಿಯರ ತರಬೇತಿ ಬರುವ ಮಹಿಳೆಯರು ಮುಖ್ಯವಾಗಿ ತುಂಬಾ ಬಡತನದ ಸ್ಥಿತಿ ಯಲ್ಲಿರುವವರು, ಜೀವನೋಪಾಯಕ್ಕಾಗಿ ದಾರಿಯಿಲ್ಲದವರು, ವಿಧವೆಯರು ಹಾಗೂ ಬಾಳಿನಲ್ಲಿ

ನೊಂದು ಬೆಂದವರು ಮತ್ತು ಹೆಚ್ಚಿನ ವಿದ್ಯಾಭ್ಯಾಸಕ್ಕೆ ದಾರಿ ಇಲ್ಲದವರು ಆಗಿರುತ್ತಾರೆ. ಅಲ್ಲದೆ ಕಡಿಮೆ ದರ್ಜೆಯ ವಿದ್ಯಾಭ್ಯಾಸದವರಿಗೂ ಸುಲಭದಲ್ಲಿ ದೊರೆಯಬಹುದಾದ, ಹೆಚ್ಚಿನ ಆರ್ಥಿಕ ಸೌಲಭ್ಯವಿರುವ ಮತ್ತು ಜೀವನ ಭದ್ರತೆ ಕೊಡುವ ಕೆಲಸವಾಗಿರುವುದರಿಂದ ಹೆಚ್ಚಿನ ಸಂಖ್ಯೆಯ ಬಡ ಮಹಿಳೆಯರೇ ಈ ತರಬೇತಿಗೆ ಬರುತ್ತಾರೆ. ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ದಲಿತ ಮತ್ತು ಬುಡಕಟ್ಟು ಮಹಿಳೆಯರೂ ಸಹ ದಾದಿಯರ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ಸಮಾಜ ಕಲ್ಯಾಣ ಇಲಾಖೆ ಇವರಿಗೆ ಉಚಿತವಾದ ತರಬೇತಿಯನ್ನು ನೀಡುತ್ತಿದೆ. ಅದೂ ಕೂಡ ಒಂದು ಕಾರಣವಾಗಿವೆ. ಬೆಂಗಳೂರು ನಗರದಲ್ಲಿ ಕೆಲಸ ನಿರ್ವಹಿಸುತ್ತಿರುವ ದಾದಿಯರು ದೇಶದ ವಿವಿಧ ರಾಜ್ಯಗಳಿಂದ ಬಂದವರಾಗಿದ್ದಾರೆ. ಇವರಲ್ಲಿ ಕೇರಳ ರಾಜ್ಯದಿಂದ ಬಂದವರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿದೆ. ದಾದಿಯರನ್ನು ಉದ್ಯೋಗಕ್ಕೆ ಕರೆತರುವ ಒಂದು ಜಾಲವೇ ಇದೆ.

### ಮಹಿಳಾ ದಾದಿಯರು

ಪುರುಷರಿಗೆ ಹೋಲಿಸಿದಾಗ ಈ ವೃತ್ತಿಯಲ್ಲಿ ಮಹಿಳಾ ದಾದಿಯರೇ ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಅಲ್ಲದೆ ಪುರುಷರಿಗಿಂತಲೂ ಮಹಿಳೆಯರಿಗೆ ಪ್ರಮುಖವಾದ ಸ್ಥಾನವಿದೆ. ಏಕೆಂದರೆ, ಮಹಿಳೆಯರ ಸಂಯಮಗುಣ, ಸಹನಶೀಲತೆ, ಮೃದು ಮಧುರತೆ, ದಯೆ, ಕರ್ತವ್ಯ ಪ್ರಜ್ಞೆ ಮತ್ತು ಎಲ್ಲವನ್ನು ಒಗ್ಗಿಸಿಕೊಳ್ಳುವ, ಅಂದರೆ ಪರಿಸ್ಥಿತಿಗೆ ಹೊಂದಿಕೊಂಡು ನಡೆಯುವ ಸಹಾಯಗುಣ ಮಹಿಳೆಯರಲ್ಲಿ ಇರುವುದರಿಂದ ಈ ಕ್ಷೇತ್ರದ ಎಲ್ಲಾ ವಿಭಾಗಗಳಲ್ಲೂ ಸೇವೆ ಸಲ್ಲಿಸಲು ಇವರು ಉಪಯುಕ್ತರು. ಮಹಿಳಾ ವಾರ್ಡಿಗೆ ಮಹಿಳಾ ದಾದಿಯರನ್ನು ನೇಮಿಸಿದರೆ, ರೋಗಿಗಳು ಯಾವ ಸಂಕೋಚವೂ ಇಲ್ಲದೆ ಚಿಕಿತ್ಸೆ ಪಡೆಯುತ್ತಾರೆ. ಅದೇ ವಾರ್ಡಿಗೆ ಪುರುಷ ರನ್ನು ನೇಮಿಸಿದರೆ ಹೆಚ್ಚಿನ ಅಥವಾ ಬಿಚ್ಚು ಮನಸ್ಸಿನಿಂದ ಚಿಕಿತ್ಸೆ ಮಾಡಿಸಿಕೊಳ್ಳಲು ನಿರಾಕರಿಸುತ್ತಾರೆ. ಅದೇ ಮಹಿಳಾ ದಾದಿಯರನ್ನು ಪುರುಷರ ವಾರ್ಡಿಗೆ ನೇಮಿಸಿದರೆ ಅಲ್ಲಿಯೂ ನಿಸ್ಸಂಕೋಚವಾಗಿ, ತಾಯಿಯಂತೆ, ಸಹೋದರಿಯಂತೆ ಪುರುಷ ರೋಗಿಗಳ ಮನಮೆಚ್ಚಿಸಿ ಚಿಕಿತ್ಸೆ ನೀಡಬಲ್ಲಳು ಎಂಬ ಧೋರಣೆಯು ಆರೋಪಿತವಾದುದೆಂಬಂತೆ ಕಂಡುಬರುತ್ತದೆ. ಸಿದ್ಧಪಡಿ ಯಚ್ಚುಗಳೆಂಬಂತೆ ಪರಿಗಣಿಸಲಾಗುತ್ತಿದೆ. ಮಹಿಳೆಯೇ ಈ ವೃತ್ತಿಗೆ ಸೂಕ್ತವಾದವಳು; ಮಹಿಳೆ ಯಲ್ಲದೆ ಬೇರಾರು ಈ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಲಾರರು ಎಂಬ ಅಂಶವು ದಾದಿಯ ಪಾತ್ರಕ್ಕೆ ಮಹಿಳೆಯರ ಚಿತ್ರವನ್ನು ಭದ್ರವಾಗಿ ಅಂಟಿಸಿದೆ.

ರೋಗಿಗಳ ಸೇವೆಯಲ್ಲಿ ವೈದ್ಯನ ಪಾತ್ರವೆಷ್ಟಿದೆಯೋ ಅದಕ್ಕೆ ಸಮನಾಗಿ ದಾದಿಯರ ಪಾತ್ರ ಇದೆ. ವೈದ್ಯರಿಂದ ವೈದ್ಯಕೀಯ ಕ್ಷೇತ್ರಕ್ಕೆ ಎಷ್ಟು ಉಪಯೋಗವಿದೆಯೋ, ಅಷ್ಟೇ ಉಪಯೋಗವೂ ದಾದಿಯರಿಂದಲೂ ಇದೆ. ಆದರೆ ಸಾಮಾಜಿಕವಾಗಿ ದಾದಿಯರ ವೃತ್ತಿಯು ಕೀಳುಮಟ್ಟದೆಂದು ಪರಿಗಣಿಸಲ್ಪಟ್ಟಿದೆ. ಅದಕ್ಕೆ ಮಹಿಳೆಯರೇ ಈ ವೃತ್ತಿಯನ್ನು ಕೈಗೊಳ್ಳುತ್ತಿರುವುದೂ ಕಾರಣಗಳಲ್ಲಿ ಒಂದಾಗಿರಬಹುದು. ಆಸ್ಪತ್ರೆಯ ವ್ಯವಸ್ಥೆಯಲ್ಲಿ ದಾದಿಯರಿಗೆ ಅತಿ ಕಡಿಮೆ ವೇತನ ಮತ್ತು ಕೆಳಮಟ್ಟದ ಸ್ಥಾನಮಾನ ಹಾಗೂ ಹೆಚ್ಚಿನ ಕೆಲಸವನ್ನು ನೀಡಲಾಗಿದೆ.

ಮಹಿಳೆಯರು ಇದೇ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಲು ಮತ್ತೊಂದು ಕಾರಣವೂ ಇದೆ. ಸಾಮಾನ್ಯವಾಗಿ ಮಹಿಳೆಯರನ್ನು ನಿರ್ಬಂಧದಲ್ಲಿಯೇ ಇಡಲು ಬಯಸುತ್ತದೆ ಈ ಸಮಾಜ. ಹಾಗೆ ನೋಡಿದರೆ ದಾದಿಯರ ತರಬೇತಿಗೆ ಬರುವ ಮಹಿಳೆ ಕಡ್ಡಾಯವಾಗಿ ವಸತಿನಿಲಯ ದಲ್ಲಿಯೇ ಉಳಿದುಕೊಳ್ಳಬೇಕು. ಅಲ್ಲಿಯೇ ತರಬೇತಿಯನ್ನು ಪಡೆಯಬೇಕು. ಆದ್ದರಿಂದ ಅವಳು ನಿಯಂತ್ರಣದಲ್ಲಿರಲು ಸಾಧ್ಯವಾಗುತ್ತದೆ. ಮತ್ತು ತರಬೇತಿಯನ್ನು ಮುಗಿಸಿದ ನಂತರ ಯುವ ದಾದಿಯರಿಗೆ ಊಟ ವಸತಿ ಸಹಿತ ಖಾಸಗಿ ಆಸ್ಪತ್ರೆಗಳಲ್ಲಿ ಸುಲಭವಾಗಿ ಕೆಲಸವೂ ದೊರೆ ಯುತ್ತದೆ. ಖಾಸಗಿ ಆಸ್ಪತ್ರೆಗಳಿಗೂ ಇಂಥವರೇ ಬೇಕಾಗಿರುತ್ತದೆ. ಇದರಿಂದ ದಿನದ ೨೪ ಗಂಟೆಗಳೂ ದಾದಿಯರು ಸೇವೆಗೆ ಲಭ್ಯವಾಗಿ ಬಿಡುತ್ತಾರೆ. ಅನೇಕ ಖಾಸಗಿ ಆಸ್ಪತ್ರೆಗಳಲ್ಲಿ ದಾದಿಯರು ಕೃತಕ ಜೀವನ ನಡೆಸುತ್ತಿದ್ದಾರೆ. ಅವರಿಗೆ ಯಾವುದೇ ರೀತಿ ಸ್ವತಂತ್ರವಿಲ್ಲವಾಗಿ ಜೀತದಾಳುಗಳ ರೀತಿ ದುಡಿಯಬೇಕಾಗಿದೆ. ಇಂಥ ದಾದಿಯರು ಪುರುಷ ನರ್ಸ್‌ಗಳಿಂದ, ಆಸ್ಪತ್ರೆಯ ಮಾಲಿಕರಿಂದ, ವೈದ್ಯರಿಂದ ಮತ್ತು ರೋಗಿಗಳಿಂದಲೂ ಲೈಂಗಿಕ ಕಿರುಕುಳಗಳಿಗೆ ಒಳಗಾಗಿರುವ ಪ್ರಕರಣಗಳು ವರದಿಯಾಗಿವೆ.

ಕೆಲವೊಂದು ಮಧ್ಯವರ್ತಿ ವ್ಯಕ್ತಿಗಳು ಕೆಲಸ ಕೊಡಿಸುವುದಾಗಿ ನಂಬಿಸಿ ಬೇರೆ ಬೇರೆ ರಾಜ್ಯ ಗಳಿಂದ ಕರೆತಂದು ಅವರನ್ನು ದುರುಪಯೋಗ ಮಾಡಿಕೊಂಡಿರುವ ಉದಾಹರಣೆಗಳು ಇವೆ. ಇಂಥ ಕೆಲವು ಪ್ರಕರಣಗಳು ಸಂಶೋಧಕಿಯರು ಪೂರ್ವ ಸಮೀಕ್ಷೆ ಮಾಡುವ ಕಾಲಕ್ಕೆ ಕಂಡು ಬಂದಿವೆ.

**ಸಾಹಿತ್ಯಾವಲೋಕನ**

ಕಥೆರಿನೆ ಬೆನೆಟ್ ದಾದಿಯು 'ಜರ್ನಲ್ ಆಫ್ ನರ್ಸಿಂಗ್' ೧೯೯೩ರಲ್ಲಿ ಪ್ರಕಟಗೊಂಡಿ ರುವ ಫೆಮಿನಿಸಂ ಎಂಬುದರಲ್ಲಿ ಹೇಳುವಂತೆ ಸ್ತ್ರೀವಾದಿ ನರ್ಸ್‌ಗಳು ಬೇರೆ ನರ್ಸ್‌ಗಳಿಗಿಂತಲೂ ವಿಭಿನ್ನವಾಗಿ ಕಂಡುಬರುತ್ತಾರೆ. ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಕುರಿತಂತೆ ಸಾಂಪ್ರ ದಾಯಿಕ ವ್ಯಾಖ್ಯಾನವನ್ನು ತಿರಸ್ಕರಿಸುತ್ತಾರೆ. ಅವರಿಗೆ ಅನ್ಯಾಯ ಮತ್ತು ಅವರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಅರಿವಿರುತ್ತದೆಂಬುದನ್ನು ಗಮನಿಸಿದ್ದಾರೆ.

ಜೂಲಿ ಹಂಟ್ ಎಂಬ ದಾದಿಯು 'ನರ್ಸಿಂಗ್ ಮೊನೋಗ್ರಾಪ್ ಇನ್ ೧೯೯೮' ಎಂಬು ದರಲ್ಲಿ ಪ್ರಕಟಗೊಂಡಿರುವ 'ಮಿಸ್‌ಕಸ್ಸೆಪ್ಸ್‌ನ್' ಎಂಬ ಲೇಖನದಲ್ಲಿ ಸ್ತ್ರೀವಾದ ಮತ್ತು ಸ್ತ್ರೀವಾದಿಗಳು ದಾದಿಯ ವೃತ್ತಿಯು ಮಹಿಳೆಯರು ಕೈಗೊಳ್ಳುವ ಕೆಲಸ ಮತ್ತು ಆದ್ದರಿಂದ ಇದಕ್ಕೆ ಯಾವುದೇ ಮೌಲ್ಯವಿಲ್ಲ ಎಂಬುದರ ಬಗ್ಗೆ ವಿರೋಧವಾದ ವಾದವನ್ನು ಹೊಂದಿದ್ದಾರೆ. ಈ ರೀತಿಯ ತಾರತಮ್ಯವನ್ನು ವಿರೋಧಿಸುವ ದಾದಿಯರಿಗೆ ಸ್ತ್ರೀವಾದಿಗಳೆಂಬ ಹಣೆಪಟ್ಟಿಗೆ ಒಳಗಾಗುತ್ತಾರೆ ಎಂಬುದನ್ನು ಗುರುತಿಸಿದ್ದಾಳೆ.

ಅಲಿಸನ್ ಜಗ್ಗರ್ ಎಂಬುವವರು ತಮ್ಮ 'ಜಸ್ಟ್ ಮೆಥೆಡ್ಸ್ : ಆ್ಯನ್ ಇಂಟರ್ ಡಿಸಿಪ್ಲಿನರಿ ಫೆಮಿನಿಸ್ಟ್ ರೀಡರ್'(೨೦೦೮) ಎಂಬುದರಲ್ಲಿ ಸ್ತ್ರೀವಾದಿ ಸಂಶೋಧಕರು ಜಾಗತಿಕ ಮಟ್ಟದಲ್ಲಿ ಲಿಂಗಸಂಬಂಧಿ ಬಿಕ್ಕಟ್ಟುಗಳನ್ನು ಬಗೆಹರಿಸುವ ಸೂಕ್ತ ಸಂಶೋಧನಾ ವಿಧಾನಗಳ ತಂತ್ರಗಾರಿಕೆ

ಗಳ ಬಗ್ಗೆ ವಿವರಿಸುತ್ತಾರೆ. ಸ್ತ್ರೀವಾದಿಗಳಿಗೆ ಅಂತಹ ಸಂಶೋಧನಾ ವಿಧಾನಗಳ ಅಗತ್ಯವಿದೆ. ನರ್ಸಿಂಗ್ ವೃತ್ತಿಯನ್ನು ಪುನರ್‌ನಿರ್ವಚಿಸಿ ಆರೋಗ್ಯ ವಿಜ್ಞಾನದಲ್ಲಿ ಮಹಿಳೆ ಮತ್ತು ಪುರುಷನ ನಿಜವಾದ ಪಾತ್ರಗಳೇನು ಎಂಬುದನ್ನು ತಿಳಿಯಬೇಕಾಗಿದೆ. ಅಲ್ಲದೆ ಇಬ್ಬರು ಜೊತೆಯಲ್ಲಿ ದುಡಿಯುತ್ತಾ ಲಿಂಗನ್ಯಾಯ ಮತ್ತು ಲಿಂಗಸಮಾನತೆಗಾಗಿ ಹೋರಾಟದ ಅಗತ್ಯವನ್ನು ತಿಳಿಸಿದ್ದಾರೆ.

**ಪರಾಮರ್ಶನ ಗ್ರಂಥಗಳು**


೧. ಅಂತರ್ಜಾಲ ಮಾಹಿತಿ, ವಿಕಿಪಿಡಿಯಾ ವಿಶ್ವಕೋಶ.

೨. ಅಂತರ್ಜಾಲ ಮಾಹಿತಿ, ಸ್ಕೂಲ್ ಹಿಸ್ಟ್ರಿ ಕೊ.ಯುಕೆ

೩. ಐಬಿಎಚ್. ಕನ್ನಡ, ಕನ್ನಡ - ಇಂಗ್ಲೀಷ್ ಅರ್ಥಕೋಶ, ಬೆಂಗಳೂರು, ೨೦೦೭.

೪. ಗಿರಿಜಾ ಟಿ. ಮಹಿಳೆ ಮತ್ತು ದಾದಿಯರ ವೃತ್ತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೩.

೫. ಬರ್ಟ್‌ಕಿ. ಎಸ್.ಎಲ್, ಟುವಾರ್ಡ್ ಎ ಪೆನೊಮೆನೊಲೊಜಿ ಆಫ್ ಫೆಮಿನಿಸ್ಟ್ ಕಾನ್ಸ ಯಸ್ನೆಸ್, ಸೋಷಿಯಲ್ ಥಿಯರಿ ಅಂಡ್ ಪ್ರಾಕ್ಟೀಸ್, ೩(೪) : ೪೨೫-೪೫೫, ೧೯೮೦.

೬. ಬುನ್‌ಟಿಂಗ್.ಎಸ್. ಅಂಡ್ ಕ್ಯಾಮ್‌ಬೆಲ್ ಜೆ.ಸಿ., ಫೆಮಿನಿಸಂ ಅಂಡ್ ನರ್ಸಿಂಗ್ : ಎಸ್ಟಾರಿಕಲ್ ಪ್ರೆಸ್ಪೆಕ್ಟೀವ್, ಅಂಡಾನ್ಸ್ ಇನ್ ನರ್ಸಿಂಗ್ ಸೈನ್ಸ್, ೧೨(೪): ೧೧೨೪, ೧೯೯೦.

೭. ಕಾರ್‌ಟರ್ ಎಚ್., ಕನ್‌ಪಾರ್ಮಿಂಗ್ ಪೆಟ್ರಿಯಾರ್ಕಲ್ ಆಟಿಬ್ಯೂಡ್ ಇನ್ ದಿ ಫೈಟ್ ಫಾರ್ ಪ್ರೊಫೆಷನಲ್ ರೆಕಗ್ನಿಷನ್, ಜರ್ನಲ್ ಆಫ್ ಅಡ್ವಾನ್ಸ್ ನರ್ಸಿಂಗ್, ೧೯:೩೬೭೩೭೨, ೧೯೯೪.

೮. ಚಿನ್.ಪಿ.ಎಲ್. ನರ್ಸಿಂಗ್ ಪ್ಯಾಟೆರ್ನ್ಸ್ ಆಫ್ ನೋಯಿಂಗ್ ಅಂಡ್ ಫೆಮಿನಿಸ್ಟ್ ಡಾಟ್, ನರ್ಸಿಂಗ್ ಅಂಡ್ ಹೆಲ್ತ್ ಕೇರ್, ೧೯:೨೭೧-೧೭೫, ೧೯೮೮.

೯. ಚಿನ್.ಪಿ.ಎಲ್. ಅಂಡ್ ವೀಲರ್.ಸಿ.ಇ., ಫೆಮಿನಿಸಂ ಅಂಡ್ ನರ್ಸಿಂಗ್ ಔಟ್‌ಲುಕ್, ೩೩(೨):೭೪-೭೭, ೧೯೮೫.

೧೦. ಕೊಲ್ಲಿಯಾರ್ ಎಂ, ಇನ್ವಿಸಿಬಲ್ ಕೇರ್ ಅಂಡ್ ಇನ್ವಿಸಿಬಲ್ ವುಮೆನ್ ಯಾಸ್ ಹೆಲ್ತ್ ಕೇರ್ ಪ್ರೊವೈಡರ್, ಇಂಟರ್‌ನ್ಯಾಷನಲ್ ಜರ್ನಲ್ ಆಫ್ ನರ್ಸಿಂಗ್ ಸ್ಟಡೀಸ್, ೨೩ (೨):೯೫-೧೧೨, ೧೯೮೬.

೧೧. ಹಾಲ್ ಜೆ.ಎಂ., ಅಂಡ್ ಸ್ಟೇವೆನ್ಸ್.ಪಿ.ಇ., ರಿಗೋರ್ ಇನ್ ಫೆಮಿನಿಸ್ಟ್ ರಿಸರ್ಚ್, ಅಡ್ವಾನ್ಸ್ ಇನ್ ನರ್ಸಿಂಗ್ ಸೈನ್ಸ್, ೧೩(೩):೧೬-೨೯, ೧೯೯೨.


• • •

೧೫

# ಕುಂಚಿ ಕೊರವ ಮಹಿಳೆಯರ ಆರೋಗ್ಯದ ಸ್ಥಿತಿ
## (ಬಿಜಾಪುರ ಜಿಲ್ಲೆಯನ್ನು ಅನುಲಕ್ಷಿಸಿ)

ಶ್ರೀದೇವಿ. ಎಲ್.
ಡಾ. ಆರ್. ಸುನಂದಮ್ಮ

**ಪೀಠಿಕೆ**

ಪ್ರತಿಯೊಬ್ಬ ಮನುಷ್ಯನ ಏಳಿಗೆ ಅವರ ಆರೋಗ್ಯದ ಮೇಲೆ ನಿಂತಿರುತ್ತದೆ. "ಆರೋಗ್ಯವೇ ಭಾಗ್ಯ" ಎಂಬ ನಾಣ್ಣುಡಿಯಂತೆ ಆರೋಗ್ಯವಂತರು ಜೀವನದಲ್ಲಿ ಏನೆಲ್ಲಾ ಸಾಧಿಸಬಹುದಾಗಿದೆ. ಹಾಗಾದರೆ ಆರೋಗ್ಯದ ಮಟ್ಟ ಸ್ತ್ರೀ ಪುರುಷರಲ್ಲಿ ನೋಡಿದಾಗ ಹೆಚ್ಚು ಅನಾರೋಗ್ಯಕ್ಕೆ ಒಳಗಾಗುವವರು ಮಹಿಳೆಯರಾಗಿದ್ದಾರೆ. ಸರ್ವೇಸಾಮಾನ್ಯವಾಗಿ ೭೫% ಮಹಿಳೆಯರು ರಕ್ತಹೀನತೆ, ಬೆನ್ನುನೋವು, ತಲೆಸುತ್ತು, ಅಶಕ್ತತೆ ಮತ್ತು ಇತರೆ ಕಾಯಿಲೆಗಳಿಂದ ಬಳಲುತ್ತಾರೆ. ಎಲ್ಲಾ ಪುರುಷರು ಆರೋಗ್ಯವಂತರು ಎಂದು ಹೇಳಲಾಗುವುದಿಲ್ಲ. ಪುರುಷ ಮತ್ತು ಸ್ತ್ರೀಯರ ಜೀವಿತಾವಧಿ ನೋಡಿದಾಗ ಪುರುಷರಿಗಿಂತ ಮಹಿಳೆಯರು ಹೆಚ್ಚು ಕಾಲ ಜೀವಿಸುತ್ತಾರೆ ನಿಜ. ಹಾಗಂತ ಅವರು ಉತ್ತಮ ಆರೋಗ್ಯದಿಂದ ಬದುಕುತ್ತಾರೆಂದರ್ಥವಲ್ಲ. ಮನೆ ಕೆಲಸ, ಮಕ್ಕಳ ಲಾಲನೆ ಪಾಲನೆ, ಮನೆಯ ಇತರೇ ಸದಸ್ಯರ ನೋಡಿಕೊಳ್ಳುವಿಕೆ ಮತ್ತು ಬಿಡುವಿಲ್ಲದ ಕೆಲಸದಿಂದ ಯಾವಾಗಲು ಬೆನ್ನು ನೋವು, ರಕ್ತಹೀನತೆ, ತಲೆ ನೋವು, ಖಿನ್ನತೆಯಂತಹ ಕಾಯಿಲೆಗಳ ಜೊತೆಗೆ ಲೈಂಗಿಕ ರೋಗಗಳಿಗೆ ತುತ್ತಾಗುತ್ತ ಬದುಕಿನ ಒತ್ತಡದಿಂದ ಖಿನ್ನತೆ ಆತಂಕಕ್ಕೂ ಒಳಗಾಗುತ್ತಾರೆ. ಸಮತೋಲನ ಆಹಾರ ಲಭ್ಯವಿಲ್ಲದ ಕಾರಣ ಕಬ್ಬಿಣಾಂಶದ ಕೊರತೆಯಿಂದಾಗಿ ರಕ್ತಹೀನತೆಯಿಂದ ಬಳಲುತ್ತಾರೆ.

"ಭಾರತದಲ್ಲಿ ತಾಯಂದಿರ ಆರೋಗ್ಯದಲ್ಲಿ ಸುಧಾರಣೆಗೆ ತರುವುದರ ಮೂಲಕ ಮಕ್ಕಳ ಸರ್ವಾಗೀಣ ಅಭಿವೃದ್ಧಿಗಾಗಿ ೧೯೭೫ ರಲ್ಲಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಜಾರಿಗೊಳಿಸಲಾಯಿತು. ಪೂರಕ ಪೌಷ್ಠಿಕ ಆಹಾರ, ರೋಗ ನಿರೋಧಕ ಲಸಿಕೆ, ಆರೋಗ್ಯ ತಪಾಸಣೆ ಶಾಲಾ

ಪೂರ್ವ ಶಿಕ್ಷಣ ನೀಡುವುದು, ಯೋಜನೆಯ ಮುಖ್ಯ ಗುರಿಯಾಗಿದೆ. ದೇಶಾದ್ಯಂತ ಸುಮಾರು ೬ ಲಕ್ಷ ಅಂಗನವಾಡಿ ಕೇಂದ್ರಗಳಲ್ಲಿ ೧.೨ ದಶಲಕ್ಷ ಕಾರ್ಯಕರ್ತೆಯರು ಮತ್ತು ಅವರ ಸಹಾಯಕಿಯರು ಸೇವೆ ಸಲ್ಲಿಸುತ್ತಿದ್ದಾರೆ. ೬೩.೮೧ ಲಕ್ಷ ಗರ್ಭಿಣಿ ಬಾಣಂತಿಯರು, ೨೯೫.೮೯ ಲಕ್ಷ ೦-೦೬ ವರ್ಷದ ಒಳಗಿನ ಮಕ್ಕಳು ಸೌಲಭ್ಯ ಪಡೆಯುತ್ತಿದ್ದಾರೆ. ಆದಾಗ್ಯೂ ದೇಶದಲ್ಲಿ ಶೇಕಡಾ ೭೦ ರಷ್ಟು ಮಹಿಳೆಯರು ಮತ್ತು ಶೇಕಡಾ ೭೫ ರಷ್ಟು ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಮಹಿಳೆಯರು ಗರ್ಭಪಾತ, ರಕ್ತಹೀನತೆ, ನಂಜು ಮುಂತಾದ ರೋಗಗಳಿಗೆ ಬಲಿಯಾಗುತ್ತಿದ್ದಾರೆ. ಸರಕಾರ ಒದಗಿಸುತ್ತಿರುವ ಆರೋಗ್ಯ ಸೌಲಭ್ಯಗಳು ಶೇಕಡಾ ೨೦ ರಷ್ಟು ಜನರಿಗೂ ಲಭ್ಯವಿಲ್ಲ.[೧] ಇಂತಹ ಸ್ಥಿತಿಯಲ್ಲಿ ಅತ್ಯಂತ ಕೆಳಸ್ಥರದಲ್ಲಿರುವ ಕುಂಚಿ ಕೊರವರಿಗೆ ಸರಕಾರಿ ಕಾರ್ಯಕ್ರಮಗಳು ತಲುಪುವುದು ದುಸ್ಥರವೇ ಆಗಿದೆ. ದಿನನಿತ್ಯದ ಜೀವನ ನಿರ್ವಹಣೆಗೆ ಪರದಾಡುವ ಇವರು ಆರೋಗ್ಯ ಸೌಲಭ್ಯಗಳನ್ನು ಪಡೆಯುವ ಸ್ಥಿತಿಯಲ್ಲಿಯೇ ಇಲ್ಲ. ಬಸುರಿ, ಬಾಣಂತಿ ಆರೈಕೆಯಾಗಲಿ, ಶಿಶು ಅಭಿವೃದ್ಧಿ ಯೋಜನೆಯ ಫಲಾನುಭವಿಗಳಾಗಲಿ ಆಗದ ಸ್ಥಿತಿ ಇವರಲ್ಲಿದೆ. ಅಗತ್ಯವಾಗಿ ಈ ಸೌಲಭ್ಯಗಳು ಬೇಕಾಗಿರುವುದು ಈ ಸಮುದಾಯಕ್ಕೆ ಅಂಗನವಾಡಿ ಕೇಂದ್ರಗಳು ಅಗತ್ಯವಿದ್ದರು ಲಭ್ಯವಿಲ್ಲ.

"ಕರ್ನಾಟಕ ರಾಜ್ಯದಲ್ಲಿ ೪೮ ಸಾವಿರ ಅಂಗನವಾಡಿ ಕೇಂದ್ರಗಳಿದ್ದು ೭೦೦ ಕೋಟಿ ವೆಚ್ಚದಲ್ಲಿ (ಐ.ಸಿ.ಡಿ.ಎಸ್) ಯೋಜನೆಯನ್ನು ಅನುಷ್ಠಾನಗೊಳಿಸಿದೆ".[೨] ಬಿಜಾಪುರ ನಗರದ ಕುಂಚಿ ಕೊರವ ಓಣಿಯಲ್ಲಿ ಅಂಗನವಾಡಿ ಕೇಂದ್ರವು ಇರಲಿಲ್ಲ, ಮೇ ೬ ೨೦೧೧ರಲ್ಲಿ ಅಂಗನವಾಡಿ ಕೇಂದ್ರವು ಸ್ಥಾಪನೆಯಾಗಿದೆ. ಇದರಿಂದ ಮಕ್ಕಳಿಗೆ ಗರ್ಭಿಣಿಯರಿಗೆ ಪೌಷ್ಟಿಕ ಆಹಾರ, ಲಸಿಕೆ, ಮತ್ತು ಮಕ್ಕಳಿಗೆ ಶಿಕ್ಷಣ ದೊರಕುವಂತಾಗಿದೆ.

ಪ್ರಸ್ತುತ ಕುಂಚಿಕೊರವರ ಮಹಿಳೆಯರ ಆರೋಗ್ಯ ಸ್ಥಿತಿಯ ಕುರಿತು ಗಮನಹರಿಸುವಾಗ ಮೂಲತ ಕುಂಚಿ ಕೊರವರು ಅಲೆಮಾರಿಗಳಾಗಿದ್ದು, ಸರಕಾರದ ಪಟ್ಟಿಯಲ್ಲಿ ಇವರನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಗಿದೆ. ಇವರು ಈಗ ಅಲೆಯುವುದನ್ನು ಬಿಟ್ಟು, ಒಂದು ಕಡೆಗೆ ನೆಲೆನಿಂತಿದ್ದಾರೆ. ಬಿಜಾಪುರ ಜಿಲ್ಲೆಯಲ್ಲಿ ಸಿಂದಗಿ, ಇಂಡಿ, ಮುದ್ದೇಬಿಹಾಳ, ಬಿಜಾಪುರ ತಾಲೂಕು ಈ ನಾಲ್ಕು ತಾಲೂಕುಗಳಲ್ಲಿ ಕಂಡುಬರುತ್ತಾರೆ. ಕುಂಚಿಕೊರವರು ಆರೋಗ್ಯದ ಅನೇಕ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ. ಇವರಲ್ಲಿ ಮಹಿಳೆಯರಿಗೆ ರಕ್ತಹೀನತೆ, ಲೈಂಗಿಕ ರೋಗಗಳು, ಗರ್ಭಕೋಶದ ಸೋಂಕು/ಕ್ಯಾನ್ಸರ್, ಹೆಚ್.ಐ.ವಿ, ಗರ್ಭಪಾತ, ಮತ್ತು ತಾಯಿ ಮರಣ, ಶಿಶು ಮರಣ ಹೆಚ್ಚು ಕಂಡುರುತ್ತದೆ. ೫ ವರ್ಷದೊಳಗಿನ ಮಕ್ಕಳಿಗೆ ಹೊಟ್ಟೆಬಾವು, ಅಂಗವಿಕಲತೆ, ಜಂತುಹುಳು, ಚರ್ಮ ರೋಗಗಳು, ಈ ಸಮುದಾಯದಲ್ಲಿ ಕಂಡುಬರುತ್ತಿವೆ. ಬಿಜಾಪುರ ಜಿಲ್ಲೆಯ ಕುಂಚಿ ಕೊರವರಲ್ಲಿ ಬಿಜಾಪುರ ನಗರ ಮತ್ತು ನಿಡಗುಂದಿಯ ಜನರಲ್ಲಿ ಹೆಚ್ಚು ಆರೋಗ್ಯದ ಸಮಸ್ಯೆಗಳು ಕಂಡುಬರುತ್ತವೆ. ಬಿಜಾಪುರದ ಉಳಿದ ಪ್ರದೇಶಗಳಲ್ಲಿ ಸಾಮಾನ್ಯವಾಗಿರುವ ಆರೋಗ್ಯದ ಸಮಸ್ಯೆಗಳಿವೆ.

## ಬಿಜಾಪುರ ಜಿಲ್ಲೆಯ ಕುಂಚಿ ಕೊರವ ಜನಸಂಖ್ಯೆಯು

### ಕೋಷ್ಟಕ ೧

| ಕ್ರ.ಸಂ | ಸ್ಥಳ | ಪುರುಷ ೧೮ ವರ್ಷ ಮೇಲ್ಪಟ್ಟವರು | ಮಹಿಳೆ ೧೬ ವರ್ಷ ಮೇಲ್ಪಟ್ಟವರು | ಗಂಡು ೦-೧೮ ವರ್ಷ | ಹೆಣ್ಣು ೦-೧೬ ವರ್ಷ | ಒಟ್ಟು | ಶೇಕಡಾವಾರು |
|---|---|---|---|---|---|---|---|
| ೧ | ಬಿಜಾಪುರ | ೩೨೬ | ೨೮೪ | ೧೯೨ | ೧೮೦ | ೯೮೨ | ೫೮.೦೧ |
| ೨ | ಜಂಬಗಿ | ೦೩ | ೦೨ | ೦೧ | - | ೦೬ | ೦.೦೩ |
| ೩ | ಯೋಗಾಪುರ | ೧೩ | ೧೨ | ೧೪ | ೧೩ | ೫೨ | ೩.೦ |
| ೪ | ಸಿಂದಗಿ | ೦೬ | ೦೬ | ೦೯ | ೧೫ | ೩೬ | ೨.೦೧ |
| ೫ | ಇಂಡಿ | ೧೬ | ೧೭ | ೨೩ | ೧೯ | ೭೫ | ೪.೦೪ |
| ೬ | ತಾಂಬಾ | ೦೮ | ೦೬ | ೦೯ | ೦೭ | ೩೦ | ೧.೦೭ |
| ೭ | ಚಡಚಣ | ೨೬ | ೨೪ | ೨೭ | ೧೬ | ೯೩ | ೫.೦೫ |
| ೮ | ಮುದ್ದೇಬಿಹಾಳ | ೨೪ | ೨೨ | ೨೮ | ೨೧ | ೯೫ | ೫.೦೬ |
| ೯ | ನಿಡಗುಂದಿ | ೩೭ | ೩೩ | ೨೯ | ೨೫ | ೧೨೪ | ೭.೦೩ |
| ೧೦ | ಆಲಮಟ್ಟಿ | ೨೮ | ೩೦ | ೩೧ | ೨೧ | ೧೧೦ | ೬.೦೫ |
| ೧೧ | ತಾಳಿಕೋಟ | ೨೩ | ೨೦ | ೨೨ | ೨೨ | ೮೭ | ೫.೦೧ |
| ೧೨ | ಒಟ್ಟು | ೫೧೦ | ೪೫೬ | ೩೮೫ | ೩೩೯ | ೧೬೯೦ | ೧೦೦ |

ಬಿಜಾಪುರ ಜಿಲ್ಲೆಯಲ್ಲಿ ಒಟ್ಟು ೧೬೯೦ ಕುಂಚಿ ಕೊರವರಿದ್ದು, ೫೧೦ ಪುರುಷರು, ೪೫೬ ಮಹಿಳೆಯರು, ೩೮೫ ಗಂಡು ಮಕ್ಕಳು, ೩೩೯ ಹೆಣ್ಣು ಮಕ್ಕಳಿದ್ದಾರೆ. ಬಿಜಾಪುರ ನಗರದಲ್ಲಿ ಒಟ್ಟು ಜನಸಂಖ್ಯೆ ೯೮೨ ಜನರು ವಾಸವಾಗಿದ್ದಾರೆ. ೩೨೬ ಪುರುಷರು, ೨೮೪ ಮಹಿಳೆಯರು, ೧೮೦ ಹೆಣ್ಣು ಮಕ್ಕಳು, ೧೯೨ ಗಂಡು ಮಕ್ಕಳಿದ್ದಾರೆ.

**ಒಟ್ಟು ಜಿಲ್ಲೆಯ ಮಾಹಿತಿ ೨೦೦೮ರಿಂದ ೨೦೧೧ರವರೆಗಿನ ಗರ್ಭಪಾತ, ತಾಯಿ ಮರಣ, ಶಿಶು ಮರಣದ**

**ಕೋಷ್ಟಕ ೨**

| ಕ್ರ.ಸಂ | ಸ್ಥಳ | ಗರ್ಭಪಾತ | ಶೇಕಡಾ ವಾರು | ಶಿಶು ಮರಣ | ಶೇಕಡಾ ವಾರು | ತಾಯಿ ಮರಣ | ಶೇಕಡಾ ವಾರ |
|---|---|---|---|---|---|---|---|
| ೧. | ಬಿಜಾಪುರ ನಗರ | ೨೦ | ೪.೩ | ೧೬ | ೫.೪ | ೦೬ | ೧.೩ |
| ೨. | ಯೋಗಾಪುರ | ೦೨ | ೦.೪ | ೦೨ | ೦.೬ | - | - |
| ೩. | ಜಂಬಗಿ | - | - | - | - | - | - |
| ೪. | ಸಿಂದಗಿ | ೦೧ | ೦.೨ | ೦೧ | ೦.೩ | - | - |
| ೫. | ಇಂಡಿ | ೦೨ | ೦.೪ | ೦೩ | ೧.೦ | - | - |
| ೬. | ತಾಂಬಾ | - | - | - | - | - | - |
| ೭. | ಚಡಚಣ | ೦೧ | ೦.೨ | ೦೩ | ೧.೦ | ೦೧ | ೦.೨ |
| ೮. | ಮುದ್ದೇಬಿಹಾಳ | ೦೧ | ೦.೨ | ೦೨ | ೦.೬ | ೦೧ | ೦.೨ |
| ೯. | ನಿಡಗುಂದಿ | ೦೩ | ೦.೬ | ೦೭ | ೨.೪ | ೦೨ | ೦.೪ |
| ೧೦. | ಆಲಮಟ್ಟಿ | ೦೩ | ೦.೬ | ೦೨ | ೦.೬ | - | - |
| ೧೧. | ತಾಳಿಕೋಟ | ೦೨ | ೦.೪ | ೦೧ | ೦.೩ | - | - |
| ೧೨. | ಒಟ್ಟು | ೩೫ | ೭.೩ | ೩೭ | ೧೨.೨ | ೧೦ | ೨.೧ |

ಜಿಲ್ಲೆಯಲ್ಲಿ ಒಟ್ಟು ೪೫೬ ಮಹಿಳೆಯರಿದ್ದು ೧೮ ವರ್ಷ ಮೇಲ್ಪಟ್ಟವರಿದ್ದು ಇದರಲ್ಲಿ ೩೫ ಜನರು ೩ ವರ್ಷಗಳಲ್ಲಿ ಗರ್ಭಪಾತಕ್ಕೆ ಒಳಗಾಗಿದ್ದಾರೆ. ಒಟ್ಟು ಬಿಜಾಪುರ ಜಿಲ್ಲೆಯಲ್ಲಿ ತಾಯಿ ಮರಣ, ಶಿಶು ಮರಣ ಗರ್ಭಪಾತಗಳು ಹೆಚ್ಚು ಕಂಡುಬರುತ್ತಿವೆ. ಈ ಪ್ರಮಾಣವು ಬಿಜಾಪುರ ನಗರ ಮತ್ತು ನಿಡುಗುಂದಿಯಲ್ಲಿ ಹೆಚ್ಚಿದೆ. ಉಳಿದ ಪ್ರದೇಶಗಳಲ್ಲಿ ಕಡಿಮೆ ಇದೆ. ಗರ್ಭಪಾತವು ಇವರಲ್ಲಿ ಆಗುವುದಕ್ಕೆ ಕಾರಣ ರಕ್ತಹೀನತೆ, ಮುಟ್ಟಿನ ಸ್ವಚ್ಛತೆ ಇಲ್ಲದಿರುವುದು, ಲೈಂಗಿಕ ಸೋಂಕಿನಿಂದ ಇವರಲ್ಲಿ ಗರ್ಭಪಾತಗಳಾಗುತ್ತವೆ. ಗಂಡು ಮಗುವಿನ ಅಪೇಕ್ಷೆಗಾಗಿ ಅವೈಜ್ಞಾನಿಕವಾಗಿ ಗರ್ಭಪಾತ ಮಾಡಿಸಿದರು, ವೈದ್ಯರ ಬಳಿ ತೋರಿಸದೇ ಇರುವುದರಿಂದ ಮಕ್ಕಳ ಮತ್ತು ಮಹಿಳೆಯರ ಜೀವಕ್ಕೆ ಅಪಾಯವಿರುವುದದಿಂದ ಶಿಶು ಮರಣ, ತಾಯಿ ಮರಣಕ್ಕೆ ಕಾರಣವಾಗಿದೆ. ೪೫೬ ಮಹಿಳೆಯರಲ್ಲಿ ೭.೩% ಗರ್ಭಪಾತ, ೨.೧% ತಾಯಿ ಮರಣ, ಕಂಡು ಬಂದರೆ, ೦-೦೬ ವರ್ಷದ ೨೯೧ ಮಕ್ಕಳದ್ದು ಶೇಕಡಾ ೧೨.೨%ರಷ್ಟು ಮಕ್ಕಳ ಮರಣ ಸಂಭವಿಸಿರುವುದು ಕಂಡು ಬರುತ್ತದೆ.

ಹೆಚ್.ಐ.ವಿ ಮತ್ತು ಅಂಗವಿಕಲತೆಯು ಪ್ರಮಾಣದ

ಕೋಷ್ಟಕ ೩

| ಕ್ರ.ಸಂ | ಸ್ಥಳ | ಹೆಚ್.ಐ.ವಿ. ಪ್ರಮಾಣ | ಶೇಕಡಾ ವಾರು | ಅಂಗವಿಕಲತೆ ಪ್ರಮಾಣ | ಶೇಕಡಾ ವಾರ |
|---|---|---|---|---|---|
| ೧. | ಬಿಜಾಪುರ ನಗರ | ೩೭ | ೨.೧ | ೦೩ | ೦.೧ |
| ೨. | ಜಂಬಗಿ | - | - | ೦೧ | ೦.೦೫ |
| ೩. | ಯೋಗಾಪುರ | - | - | - | - |
| ೪. | ಸಿಂದಗಿ | - | - | - | - |
| ೫. | ಇಂಡಿ | ೦೧ | ೦.೦೫ | ೦೧ | ೦.೦೫ |
| ೬. | ತಾಂಬಾ | ೦೧ | ೦.೦೫ | - | - |
| ೭. | ಚಡಚಣ | ೦೨ | ೦.೧ | - | - |
| ೮. | ಮುದ್ದೇಬಿಹಾಳ | - | - | ೦೧ | ೦.೦೫ |
| ೯. | ನಿಡಗುಂದಿ | ೦೪ | ೦.೨ | ೦೪ | ೦.೨ |
| ೧೦. | ಆಲಮಟ್ಟಿ | - | - | ೦೩<br>ಪೋಲೀಯೋ | ೦.೧ |
| ೧೧. | ತಾಳಿಕೋಟ | - | - | - | - |
| ೧೨. | ಒಟ್ಟು | ೪೫ | ೨.೬ | ೧೩ | ೦.೬ |

ಬಿಜಾಪುರ ಜಿಲ್ಲೆಯ ಕುಂಚಿ ಕೊರವರಲ್ಲಿ ಹೆಚ್.ಐ.ವಿ ಸೋಂಕಿತರ ಪ್ರಮಾಣ ಹೆಚ್ಚಿದೆ. ೧೭೯೦ ಜನಸಂಖ್ಯೆಯಲ್ಲಿ ೪೫ ಜನರು ಹೆಚ್.ಐ.ವಿ ಸೊಂಕಿತರು ಶೇಕಡಾ ೨.೬% ರಷ್ಟು ಕಂಡುಬರುತ್ತಾರೆ. ಬಿಜಾಪುರ ನಗರದಲ್ಲಿ ೨.೧% ಪ್ರಮಾಣದಲ್ಲಿದ್ದಾರೆ. ನಿಡುಗುಂದಿಯಲ್ಲಿ ೦.೨% ಪ್ರಮಾಣದಲ್ಲಿ ಹೆಚ್.ಐ.ವಿ ಇದೆ. ಉಳಿದ ಪ್ರದೇಶದಲ್ಲಿ ಸಾಮಾನ್ಯವಾಗಿದೆ. ಇವರಲ್ಲಿ ಲೈಂಗಿಕ ಶಿಕ್ಷಣದ ಮಾಹಿತಿಯಿಲ್ಲದ ಕಾರಣ ಈ ಕಾಯಿಲೆ ಹೆಚ್ಚಿದೆ. ಅಂಗವಿಕಲತೆಯ ಪ್ರಮಾಣ ಹೆಚ್ಚಳದಲ್ಲಿ ನಿಡುಗುಂದಿಯಲ್ಲಿ ಪ್ರಥಮ ಸ್ಥಾನ, ಎರಡನೇ ಸ್ಥಾನ ಬಿಜಾಪುರ ನಗರ, ಮೂರನೇ ಸ್ಥಾನ ಆಲಮಟ್ಟಿಯಲ್ಲಿ ಇದೆ. ಆಲಮಟ್ಟಿಯ ಒಂದು ಕುಟುಂಬದಲ್ಲಿ ಮೂರು ಮಕ್ಕಳು ಪೋಲಿಯೋದಿಂದ ಅಂಗವಿಕಲರಾಗಿದ್ದಾರೆ. ಅವರಿಗೆ ಅಂಗವಿಕಲ ವೇತನ ಮಾಡಿಸಲು ಪ್ರಯತ್ನಿಸಲಾಗುತ್ತಿದೆ. ಒಟ್ಟು ಕುಂಚಿ ಕೊರವರಲ್ಲಿ ೦.೬% ಪ್ರಮಾಣದಲ್ಲಿ ಅಂಗವಿಕಲತೆಯಿದೆ. ಇವರು ಮಕ್ಕಳಿಗೆ ಪೋಲಿಯೋ ಲಸಿಕೆ ಹಾಕಿಸದಿರುವುದು ಮತ್ತು ತಮ್ಮ ವೃತ್ತಿಯ ಕಾರಣವಾಗಿ ಮಕ್ಕಳ ಆರೋಗ್ಯದ ಕಡೆಗೆ ಲಕ್ಷ್ಯವಿಲ್ಲದಿರುವುದು ಬಸುರಿ, ಬಾಣಂತಿ ಆರೈಕೆಗಳಲ್ಲಿ ಕೊರತೆ, ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಳ್ಳದಿರುವುದು ಮುಖ್ಯ ಕಾರಣಗಳಾಗಿವೆ.

ಬಿಜಾಪುರ ನಗರದಲ್ಲಿ ಕುಂಚಿ ಕೊರವರ ಜನಸಂಖ್ಯೆ ೯೮೨ ಇದೆ. ಇವರು ಆರೋಗ್ಯಕ್ಕೆ ಸಂಬಂಧಿಸಿದಂತೆ ತಾಯಿ ಮರಣ, ಶಿಶು ಮರಣ, ಗರ್ಭಪಾತ, ಗರ್ಭಕೋಶದ ತೊಂದರೆ, ಹೆಚ್.ಐ.ವಿ. ಜಂತುಹುಳು, ಹೊಟ್ಟೆಬಾಹು, ಕಡಿಮೆ ತೂಕದ ಶಿಶು ಜನನ, ಇಂತಹ ಸಮಸ್ಯೆಗಳು ಇಲ್ಲಿ ಕಂಡುಬರುತ್ತವೆ. ಇವರು ಆರೋಗ್ಯದ ಸುರಕ್ಷೆಯನ್ನು ಮಾಡದೆ ನಿರ್ಲಕ್ಷ್ಯ ಮಾಡುವುದು. ಸರಿಯಾದ ಸಮಯಕ್ಕೆ ಚಿಕಿತ್ಸೆ ಪಡೆಯದಿರುವುದರಿಂದ ಆರೋಗ್ಯದ ಸಮಸ್ಯೆಗಳು ಹೆಚ್ಚಾಗಲು ಕಾರಣವಾಗಿವೆ.

**ತಾಯಿ ಮರಣ,**
**ಗರ್ಭಪಾತ ಮತ್ತು ಶಿಶು ಮರಣದ ಪ್ರಮಾಣ**
**(ಬಿಜಾಪುರ ನಗರಕ್ಕೆ ಸಂಬಂಧಪಟ್ಟ ಮಾಹಿತಿ)**
**ಕೋಷ್ಟಕ ೪**

| ಕ್ರ.ಸಂ | ವರ್ಷ | ಶಿಶುಮರಣ (೦೧-೦೬) | ಗರ್ಭಪಾತ | ತಾಯಿ ಮರಣ |
|---|---|---|---|---|
| ೧. | ೨೦೦೭-೦೮ | ೦೫ | ೦೭ | ೦೨ |
| ೨. | ೨೦೦೮-೦೯ | ೦೪ | ೦೫ | ೦೨ |
| ೩. | ೨೦೦೯-೧೦ | ೦೫ | ೦೫ | ೦೧ |
| ೪. | ೨೦೧೦-೧೧ | ೦೨ | ೦೩ | ೦೧ |
| | | | | (೧೩/೦೯/೨೦೧೧) |
| **೫.** | **ಒಟ್ಟು** | **೧೬** | **೨೦** | **೦೬** |

ಬಿಜಾಪುರ ನಗರದ ಒಟ್ಟು ೨೮೪ ಮಹಿಳೆಯರಲ್ಲಿ ೪೭ ಗರ್ಭಿಣಿಯರಲ್ಲಿ ೦೬ ತಾಯಿ ಮರಣದ ಪ್ರಮಾಣ ೨.೧% ಇದೆ. ಗರ್ಭಪಾತ ೭% ಕಂಡುಬಂದಿದೆ. ೦ ರಿಂದ ೦೬ ವರ್ಷದ ೧೩೫ ಮಕ್ಕಳಲ್ಲಿ ೧೧.೮% ಶಿಶು ಮರಣ, ಕಂಡುಬಂದಿದೆ. ಕರ್ನಾಟಕದಲ್ಲಿ ೧೦,೦೦೦ ಕ್ಕೆ ತಾಯಿ ಮರಣ ೧೯೫ ಇದ್ದರೆ, ಕುಂಚಿ ಕೊರವರಲ್ಲಿ ೧೦,೦೦೦ಕ್ಕೆ ೧೨೦೦ ತಾಯಿ ಮರಣ ಸಂಭವಿಸಿದಂತಾಗುತ್ತದೆ. ಇದು ಅತ್ಯಂತ ಚಿಂತಾಜನಕ ಸ್ಥಿತಿಯನ್ನು ಪರಿಚಯಿಸುತ್ತದೆ. ಇದು ಇವರ ಆರೋಗ್ಯದ ಸ್ಥಿತಿಯ ಜೊತೆಗೆ ಸರ್ಕಾರದ ನಿರ್ಲಕ್ಷ್ಯವನ್ನು ಸೂಚಿಸುತ್ತದೆ. "ಹೆರಿಗೆ ಸಂಬಂಧಿ ತಾಯಂದಿರ ಮರಣಕ್ಕೆ ಕರ್ನಾಟಕದಲ್ಲಿ ಪ್ರಮುಖ ಕಾರಣಗಳೆಂದರೆ ರಕ್ತದ ನಂಜುರೋಗ, ಸೆಪ್ಸಿಸ್, (೩೩%) ರಕ್ತಸ್ರಾವ (೨೭%), ರಕ್ತಹೀನತೆ (೧೩.೩%), ಮತ್ತು ಗರ್ಭಪಾತ (೭%) ರಕ್ತಸ್ರಾವ ಮತ್ತು ಹೆರಿಗೆ ತೊಂದರೆಗಳಿಂದ ಉಂಟಾಗುವ ಸಾವುಗಳನ್ನು ಹೆರಿಗೆ ಸಂಬಂಧಿ ಶುಶ್ರೂಷೆಯನ್ನು ಕಾಲಕ್ಕೆ ಸರಿಯಾಗಿ ಒದಗಿಸುವುದರ ಮೂಲಕ ಸಾವನ್ನು

ತಡೆಯಬಹುದು. ಇಕ್ಲಾಂಪ್ಸಿಯಾ, ಇದನ್ನು ನಿಯಮಿತವಾಗಿ ಪ್ರಸವಪೂರ್ವ ಆರೈಕೆ ನೀಡುವುದರ ಮೂಲಕ ತಡೆಗಟ್ಟಬಹುದು. ಎಲ್ಲಿ ಸೂಕ್ತವಾದ ಸೌಲಭ್ಯವಿದೆಯೋ ಅಂತಹ ಆಸ್ಪತ್ರೆಗಳಲ್ಲಿ ಗರ್ಭಪಾತವನ್ನು ನಿರ್ವಹಿಸಬೇಕು."[೩] ಇಲ್ಲಿಯ ಮಹಿಳೆಯರಿಗೆ ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡುವುದರಿಂದ ಮಕ್ಕಳನ್ನು ಹೆಚ್ಚಿಗೆ ಪಡೆಯುತ್ತಾರೆ. ಮತ್ತು ಮಕ್ಕಳಲ್ಲಿ ಅಂತರವಿರಲಾರದೆ ವರ್ಷದಲ್ಲಿ ಒಂದರಂತೆ ಮಕ್ಕಳನ್ನು ಹೆರುವುದು, ಹೆರಿಗೆಯ ಸಂದರ್ಭದಲ್ಲಿ ಸರಿಯಾದ ಆರೈಕೆ ಇಲ್ಲದಿರುವುದು, ಗರ್ಭಪಾತಗಳಾದರೂ ವೈದ್ಯರಬಳಿ ತೋರಿಸದಿರುವುದು, ಹೆರಿಗೆಗಳನ್ನು ಮನೆಯಲ್ಲಿ ಮಾಡಿಕೊಳ್ಳುವುದು, ಈ ಎಲ್ಲಾ ಕಾರಣಗಳ ಜೊತೆಗೆ ಪೌಷ್ಟಿಕ ಆಹಾರ ಇಲ್ಲದಿರುವುದು, ಗರ್ಭಿಣಿಯರಿಗೆ ಲಸಿಕೆ ಹಾಕಿಸದಿರುವುದು, ತಾಯಿಯ ಮರಣಕ್ಕೆ ಕಾರಣವಾಗಿದೆ. ಪೌಷ್ಟಿಕತೆಯ ಕೊರತೆ ಈ ಜನಾಂಗದಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ತಂಗಳು ಭಿಕ್ಷೆ ಸಂಗ್ರಹಿಸಿ ತಿನ್ನುವುದು ಇವರಿಗಿರುವ ಮತ್ತೊಂದು ಆರೋಗ್ಯ ಸಮಸ್ಯೆಯಾಗಿದೆ.

ಮಕ್ಕಳಿಗೆ ಚುಚ್ಚು ಮದ್ದು ಹಾಕಿಸದೇ ಇರುವುದು ಕಡಿಮೆ ತೂಕದ ಶಿಶು ಜನನ, ಶಿಶುಗಳಿಗೆ ಅನಾರೋಗ್ಯ ಉಂಟಾದರೆ ಚಿಕಿತ್ಸೆ ಪಡೆಯದೇ ಮನೆಮದ್ದು ಕೊಡುವುದು ಈ ಅಂಶಗಳು ಶಿಶು ಮರಣಕ್ಕೆ ಕಾರಣವಾಗಿವೆ. "ಶಿಶು ಮರಣಕ್ಕೆ ಅಪೌಷ್ಟಿಕತೆಯಿಂದಾಗಿ ಉಂಟಾಗುವ ಭ್ರೂಣದ ಮಂದ ಬೆಳವಣಿಗೆಯು ಮುಖ್ಯಕಾರಣವಾಗಿದೆ. ಒಟ್ಟು ಶಿಶು ಮರಣಗಳಲ್ಲಿ ೩೩% ರಿಂದ ೩೪% ಪ್ರಮಾಣದಲ್ಲಿ ಉಸಿರಾಟಕ್ಕೆ ಗಾಳಿಯಲ್ಲಿನ ಆಮ್ಲಜನಕದ ಕೊರತೆ, ಅಪಘಾತ, ದೈಹಿಕ ಗಾಯಗಳಿಂದ ಗಂಡು ಶಿಶುಗಳ ಮರಣ ಪ್ರಮಾಣ ೧೯ ಆದರೆ ಹೆಣ್ಣು ಶಿಶುಗಳು ಮರಣ ಪ್ರಮಾಣ ೨೧ ಆಗಿದೆ. ಕರಳು ಸೋಂಕು ರೋಗಗಳು, ಕ್ಷಯ ಸಂಬಂಧಿ ರೋಗಗಳು ಮತ್ತು ಗುಣಪಡಿಸಲಾಗದ ಆರು ರೋಗಗಳಾದ ಕ್ಷಯ, ಡಿಫ್ತಿರಿಯಾ, (ನಾಯಿಕೆಮ್ಮು) ಪರ್ಟ್ಯುಸಿಸ್, ಧನುರ್ವಾಯು, ಪೋಲಿಯೊ, ಮೈಲಿಟಿಸ್ (ಶೈಶವ ಪಾರ್ಶ್ವರೋಗ) ದಡಾರ".[೪] ಈ ರೋಗಗಳು ಶಿಶು ಮರಣಕ್ಕೆ ಹೆಚ್ಚು ಕಾರಣವಾಗಿವೆ. "ಭಾರತದಲ್ಲಿ ಶಿಶು ಮರಣ ಪ್ರಮಾಣವು ೨೦೦೧ರಲ್ಲಿ ೬೦ ಇದ್ದರೆ, ೨೦೦೭ರಲ್ಲಿ ಪ್ರತಿ ಸಾವಿರ ಮಕ್ಕಳಿಗೆ ೫೭ಕ್ಕೆ ಇಳಿದಿತ್ತು. ೨೦೦೮ರಲ್ಲಿ ೫೫ಕ್ಕೆ ಇಳಿದಿದೆ. ೨೦೦೯ರಲ್ಲಿ ೫೩ಕ್ಕೆ ಇಳಿಮುಖವಾಗಿರುವುದು ಕಂಡುಬಂದಿದೆ. ಪ್ರಪಂಚದಲ್ಲಿ ಶಿಶು ಮತ್ತು ಮಕ್ಕಳ ಮರಣದಲ್ಲಿ ೧೪೩ನೇ ಸ್ಥಾನವನ್ನು ಹೊಂದಿದೆ"[೫] ಹಂತಹಂತವಾಗಿ ಶಿಶುಮರಣ ಪ್ರಮಾಣ ಇಳಿಯುತ್ತಿದ್ದರೂ ಕುಂಚಿ ಕೊರವ ಜನರಲ್ಲಿ ಈ ಪ್ರಮಾಣವು ರಾಜ್ಯ ರಾಷ್ಟ್ರಕ್ಕಿಂತ ಹೆಚ್ಚಾಗಿರುವುದು ಕಂಡು ಬರುತ್ತದೆ. ಈ ದೃಷ್ಟಿಯಿಂದ ಸರ್ಕಾರ ತೀವ್ರನಿಗಾ ಇಡಬೇಕಾದ ಸಮುದಾಯ ಇದಾಗಿದೆ.

ಇವರಲ್ಲಿ ಗರ್ಭಿಣಿಯರಿದ್ದಾಗ ಚುಚ್ಚು ಮದ್ದುಗಳನ್ನು ಹಾಕಿಸಿಕೊಳ್ಳದೆ ಇರುವುದು. ಶಿಶು ಜನನವಾದ ನಂತರ ಮಕ್ಕಳಿಗೆ ರೋಗ ನಿರೋಧಕ ಲಸಿಕೆಗಳನ್ನು ಹಾಕಿಸದೇ ಇರುವುದು, ಶಿಶು ಮರಣಕ್ಕೆ ಹೆಚ್ಚು ಕಾರಣವಾಗಿದೆ. ಲಸಿಕೆಗಳಲ್ಲಿ ಪೋಲಿಯೊ ಒಂದನ್ನು ಹಾಕಿಸುತ್ತಾರೆ. ಅದನ್ನು ಬಿಟ್ಟರೆ ಉಳಿದ ಲಸಿಕೆಗಳನ್ನು ಹಾಕಿಸುವುದಿಲ್ಲ. ಕಾರಣ ಬೇರೆ ಲಸಿಕೆಗಳು ಹಾಕಿಸಿದರೆ ಅಂಗವಿಕಲರಾಗುತ್ತಾರೆ ಎಂಬ ಭಯದ ನಂಬಿಕೆಯಿಂದ ಯಾವುದೇ ಚುಚ್ಚುಮದ್ದುಗಳನ್ನು

ಹಾಕಿಸಿಕೊಳ್ಳಲು ಹಿಂಜರಿಯುತ್ತಾರೆ. ಗರ್ಭಪಾತಗಳು ಮೇಲಿಂದ ಮೇಲೆ ಆಗುತ್ತಿರುವುದರಿಂದ ಭ್ರೂಣದಲ್ಲಿ ಸೋಂಕು ತಗುಲಿ ಮಕ್ಕಳ ಮರಣಕ್ಕೆ ಕಾರಣವಾಗುತ್ತಿದೆ. ಜೊತೆಗೆ ಗರ್ಭಚೀಲದ ಸಮಸ್ಯೆಗೂ ಕಾರಣವಾಗಿದೆ. ಲೈಂಗಿಕ ಸೋಂಕುಗಳಿಂದ(ಎಸ್.ಟಿ.ಡಿ) ಶಿಶುಗಳಿಗೆ ಮತ್ತು ಮಹಿಳೆಯರಿಗೆ ಅನೇಕ ತೊಂದರೆಗಳಾಗುತ್ತಿವೆ. ಅವೈಜ್ಞಾನಿಕ ಗರ್ಭಪಾತ, ಅಶಕ್ತತೆಯಿಂದ, ಲೈಂಗಿಕ ಸೋಂಕಿನಿಂದ ಗರ್ಭಪಾತಗಳಾದರೂ ಸರಿಯಾಗಿ ಚಿಕಿತ್ಸೆ ಪಡೆಯದೇ ಇರುವುದು ಇವರ ಅನಾರೋಗ್ಯಕ್ಕೆ ಕಾರಣವಾಗಿದೆ. ಅನಕ್ಷರಸ್ಥರಾದ ಇವರಿಗೆ ಸಂತಾನೋತ್ಪತ್ತಿ ಆರೋಗ್ಯದ ಆಧುನಿಕ ಪದ್ಧತಿಗಳ ಬಗ್ಗೆ ಮಾಹಿತಿಯಿಲ್ಲ. ಆಸ್ಪತ್ರೆಯೆಂದರೆ ಖರ್ಚು ಎಂದು ಭಾವಿಸುತ್ತಾರೆ. ಸಂತಾನೋತ್ಪತ್ತಿ ಆರೋಗ್ಯಕ್ಕೆ ಹೆಚ್ಚು ಒತ್ತು ನೀಡದ ಈ ಸಮುದಾಯವು ಯಾವುದೇ ತರಬೇತಿ, ಅರಿವು ಕಾರ್ಯಕ್ರಮಗಳಲ್ಲಿ ಭಾಗವಹಿಸದಿರುವುದು, ಮುಖ್ಯವಾಹಿನಿಯಿಂದ ದೂರ ಇರುವುದು ಇದಕ್ಕೆ ಕಾರಣಗಳಾಗಿವೆ. ಹೆಣ್ಣಿನ ಆರೋಗ್ಯವನ್ನು ಮುಖ್ಯವಾಗಿ ಒಂದು ಆರೋಗ್ಯ ಸಮಸ್ಯೆಯೆಂದು ಇವರು ಭಾವಿಸದೆ ಅದೊಂದು ಯಾಂತ್ರಿಕ ಜೀವನ ಚಕ್ರದಂತೆ ನೋಡುತ್ತಾರೆ. ಹೀಗಾಗಿ ಬಸಿರು,ಬಾಣಂತಿ ಆರೈಕೆಗಳು ಇವರಿಗಿಲ್ಲ. ಆಸ್ಪತ್ರೆಗೆ ಹೋಗಿ ಗರ್ಭಿಣಿಯರು ತಪಾಸಣೆ, ಮಾರ್ಗದರ್ಶನ ಪಡೆಯುವುದಿಲ್ಲ.

**ಗರ್ಭಿಣಿಯರು ಮತ್ತು ಮಕ್ಕಳು ಚುಚ್ಚು ಮದ್ದು ಹಾಕಿಸಿಕೊಂಡ ವಿವರ ಕೋಷ್ಟಕ ೫**

| ಕ್ರ.ಸಂ | ವರ್ಷ | ಗರ್ಭಿಣಿಯರು | ಶೇಕಡಾ ಪ್ರಮಾಣ | ಗರ್ಭಿಣಿಯರು ಚುಚ್ಚು ಮದ್ದು ಹಾಕಿಸಿಕೊಂಡ ವಿವರ | ಶೇಕಡಾ ಪ್ರಮಾಣ | ಮಕ್ಕಳು ಲಸಿಕೆ ಹಾಕಿಸಿಕೊಂಡ ವಿವರ | ಶೇಕಡಾ ಪ್ರಮಾಣ |
|---|---|---|---|---|---|---|---|
| ೧. | ೨೦೦೭-೦೮ | ೧೨ | ೪.೨ | ೦೨ | ೦.೭ | ೦೩ | ೨.೨ |
| ೨. | ೨೦೦೮-೦೯ | ೧೫ | ೫.೨ | ೦೬ | ೨.೧ | ೦೫ | ೩.೭ |
| ೩. | ೨೦೦೯-೧೦ | ೦೯ | ೩.೧ | ೦೬ | ೨.೧ | ೦೪ | ೨.೯ |
| ೪. | ೨೦೧೦-೧೧ | ೧೧ | ೩.೮ | ೦೮ | ೨.೮ | ೦೯ | ೬.೬ |
| ೫. | ಒಟ್ಟು | ೪೭ | ೧೬.೩ | ೨೨ | ೭.೭ | ೨೧ | ೧೫.೫ |

ಗರ್ಭಿಣಿಯರು ಚುಚ್ಚು ಮದ್ದುಗಳನ್ನು ಹಾಕಿಸಿಕೊಂಡರೆ ಗರ್ಭದಲ್ಲಿ ಮಗು ಬೆಳೆದು ಹೆರಿಗೆ ಸಮಯದಲ್ಲಿ ಸಮಸ್ಯೆಯಾಗಿ ಹೆಂಗಸರು ತೀರಿಕೊಳ್ಳುತ್ತಾರೆ ಎಂದು ನಂಬಿರುವ ಮಹಿಳೆಯರು ವೈದ್ಯರ ಬಳಿ ತೋರಿಸದೇ ಹಾಗೆಯೇ ನರಳುತ್ತಾರೆ. ಲಸಿಕೆಗಳನ್ನು ಹಾಕಿಸಲು ತಿಳಿಸಿದರೂ ಮಕ್ಕಳು ಅಂಗವಿಕಲರಾಗುತ್ತಾರೆ, ಎಂದು ಯಾವುದೇ ಲಸಿಕೆಯನ್ನು ಹಾಕಿಸಿಕೊಳ್ಳುವುದಿಲ್ಲ.

ಐರನ್ ಗುಳಿಗೆಯನ್ನು ಕೊಟ್ಟರೂ ನುಂಗುವುದಿಲ್ಲ. ಮಗು ಗರ್ಭದಲ್ಲಿ ದೊಡ್ಡದಾಗಿ ಬೆಳೆದು ಸೀಜರಿನ್ ಮಾಡಲಾಗುತ್ತದೆ. ಮತ್ತು ಮಗುವಿನ ಸಾವು ಆಗುತ್ತದೆ ಎಂಬ ಮೂಢನಂಬಿಕೆಯಿಂದ ಇವರು ಚಿಕಿತ್ಸೆಯನ್ನು ಪಡೆಯಲು ಹಿಂಜರಿಯುತ್ತಾರೆ. ಆದರೆ ಇತ್ತೀಚೆಗೆ ಅವರಲ್ಲಿ ನಿರಂತರ ಅರಿವು ಮೂಡಿಸುತ್ತಿರುವುದರಿಂದ ೨೦೧೦-೨೦೧೧ರ ಸಾಲಿನ ೧೧ ಗರ್ಭಿಣಿಯರಲ್ಲಿ ೮ ಜನರು ಆಸ್ಪತ್ರೆಗೆ ಹೋಗಿ ತಪಾಸಣೆ ಮಾಡಿಸಿಕೊಂಡ್ದಾರೆ.

ಸದಾ ಕೆಲಸದಲ್ಲಿ ನಿರತರಾದ ಈ ಮಹಿಳೆಯರಿಗೆ ಯಾವುದೇ ಬಿಡವು ಇಲ್ಲದೆ ದುಡಿಯುತ್ತಾರೆ. ಅವರ ಜೊತೆ ೧೫ ದಿನದ ಕೂಸು ಇದ್ದರೂ ತಮ್ಮ ಜೊತೆ ಹೆಗಲಿಗೆ ಕಟ್ಟಿಕೊಂಡು ಊರು ಊರು ಅಲೆಯುತ್ತಾರೆ. ಬಿಸಿಲು, ಮಳೆ, ಗಾಳಿಯನ್ನು ಲೆಕ್ಕಿಸದೇ ತಮ್ಮ ವ್ಯಾಪಾರಮಾಡಿ ಆಹಾರ ಸಂಗ್ರಹಿಸುತ್ತಾರೆ. ಇದರಿಂದ ಗರ್ಭಿಣಿಯರಿಗೆ ಆರೈಕೆ ಇಲ್ಲದೇ ಇರುವುದು ಮತ್ತು ಹೆರಿಗೆಯಾಗಿ ೧೫-೨೦ ದಿನದ ಒಳಗೆ ತಮ್ಮ ವೃತ್ತಿಯಲ್ಲಿ ತೊಡಗುವುದರಿಂದ, ಆರೋಗ್ಯದ ಮೇಲೆ ತುಂಬಾ ಪರಿಣಾಮವಾಗುತ್ತಿದೆ. ಪೌಷ್ಟಿಕ ಆಹಾರ ಸೇವಿಸದೇ ಇರುವುದರಿಂದ ರಕ್ತ ಹೀನತೆ, ನರದೌರ್ಬಲ್ಯ, ಇತರೆ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಮುಟ್ಟು, ಬಸಿರು, ಬಾಣಂತನವನ್ನು ಲೆಕ್ಕಿಸದೇ, ಸ್ವಚ್ಛತೆ ಕಾಪಾಡದೇ ಇರುವುದರಿಂದ ಗರ್ಭಪಾತಗಳಾಗುವುದು ಸಾಮಾನ್ಯವಾಗಿವೆ. “ಅಗೋದು ಆಗತ್ತ ಹೋಗೋದು ಹೋಗುತ್ತ ಅಂಗಂತ ಮನ್ಯಾಗ ಕುಂತರ ಯಾರು ತಂದ ಕೊಡತಾರ ನಮಗ, ದುಡಿದ್ ಬೇಡಿ ತಂದರೆ ತಿನಾಕ ಸಿಗತ್‌ದ ಮನ್ಯಾಗಕುಂತರ ಉಪವಾಸ ಇರಬೇಕಾಗತೈತಿ” ಎಂದು ಇಲ್ಲಿಯ ಮಹಿಳೆಯರು ಹೇಳುತ್ತಾರೆ. ಕುಟುಂಬದ ಬಹುಪಾಲು ಹೊಣೆಗಾರಿಕೆ ಮಹಿಳೆಯರ ಮೇಲಿದೆ. ಪುರುಷರು ಹೆಚ್ಚಾಗಿ ಕಚ್ಚಾ ಸಾಮಗ್ರಿ ತಂದು ಮನೆಮುಂದೆ ಹಾಕಿದರೆ ತಮಗೆ ಖರ್ಚಿಗೆ ಬೇಕಾದಷ್ಟು ಪೊರಿಕೆ ಕಟ್ಟಿ ಮಾರಿ ತಮ್ಮ ಊಟಕ್ಕೆ ಕೊರತೆಯಿಲ್ಲದಂತೆ ನೋಡಿಕೊಳ್ಳುತ್ತಾರೆ. ಮಕ್ಕಳ ಬಗ್ಗೆ ಚಿಂತಿಸುವುದಿಲ್ಲ. ಸಂಸಾರದ ಬಗ್ಗೆಯೂ ಚಿಂತಿಸುವುದಿಲ್ಲ.

**ಕಾಯಿಲೆಗಳ**

**ಕೋಷ್ಟಕ ೬**

| ಕ್ರ.ಸಂ | ಕಾಯಿಲೆಗಳು | ಸಂಖ್ಯೆ | ಶೇಕಡವಾರು |
|---|---|---|---|
| ೧. | ಗರ್ಭಕೋಶದ ತೊಂದರೆ | ೨೩ | ೮.೦ |
| ೨. | ರಕ್ತಹೀನತೆ | ೧೫ | ೫.೨ |
| ೩. | ಎಸ್.ಟಿ.ಡಿ(ಲೈಂಗಿಕ ಸೋಂಕುಗಳು) | ೧೧ | ೩.೮ |
| ೪. | ಇತರ ಸಾಮಾನ್ಯ ಕಾಯಿಲೆಗಳು | ೧೫ | ೫.೨ |

೨೮೮ ಮಹಿಳೆಯರಲ್ಲಿ ೮% ಗರ್ಭಕೋಶದ ತೊಂದರೆಯಿಂದ ಗರ್ಭತೆಗಿಸಿಕೊಂಡಿದ್ದಾರೆ. ೫.೨% ಪ್ರಮಾಣದಲ್ಲಿ ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ೩.೮% ಲೈಂಗಿಕ ಸೋಂಕುಗಳಿಂದ ನರಳುತ್ತಿದ್ದಾರೆ. ಆರೋಗ್ಯಕ್ಕೆ ಸಂಬಂಧಿಸಿದಂತೆ ಕಾಯಿಲೆಗಳು ಬಂದರೂ ಸರಿಯಾದ ಚಿಕಿತ್ಸೆ

ಯನ್ನು ಪಡೆಯದೇ ಇರುವುದರಿಂದ ಇವರಲ್ಲಿ ಆರೋಗ್ಯದ ಸಮಸ್ಯೆ ಹೆಚ್ಚಾಗಲು ಕಾರಣವಾಗುತ್ತಿದೆ. ಲೈಂಗಿಕ ಸೋಂಕುಗಳಿಂದಲೇ ಹೆಚ್ಚು ಮಹಿಳೆಯರು ಗರ್ಭ ತೆಗೆಸಿಕೊಂಡಿದ್ದಾರೆ ಎಂದು ಚಿಕಿತ್ಸೆ ನೀಡಿದ ವೈದ್ಯರು ತಿಳಿಸುತ್ತಾರೆ. ಇವರು ಸೋಂಕನ್ನು ಪ್ರಾಥಮಿಕ ಹಂತದಲ್ಲಿ ಪರಿಕ್ಷಿಸಿಕೊಳ್ಳುವುದಿಲ್ಲ ಮತ್ತು ಚಿಕಿತ್ಸೆ ಪಡೆಯದ ಪರಿಣಾಮ ಗರ್ಭಕೋಶ ತೆಗೆಯುವ ಹಂತದಲ್ಲಿ ಇವರು ವೈದ್ಯರ ಬಳಿಹೋಗುತ್ತಾರೆ. ಕಾಯಿಲೆಯು ಉಲ್ಬಣಗೊಂಡು ತೀವ್ರಸ್ಥಿತಿಯಲ್ಲಿ ತಲುಪಿದಾಗ ವೈದ್ಯರು ಇವರಿಗೆ ಶಸ್ತ್ರಚಿಕಿತ್ಸೆ ಮಾಡಿದ್ದಾರೆ.

**ಗರ್ಭಕೋಶ ತೆಗೆಸಿದ ಮಹಿಳೆಯರ ವಿವರದ ಕೋಷ್ಟಕ ೭**

| ಕ್ರ.ಸಂ | ಮಹಿಳೆಯರ ವಯಸ್ಸಿನ ವಿವರ | ಸಂಖ್ಯೆ | ಶೇಕಡವಾರು |
|---|---|---|---|
| ೧. | ೨೫-೩೫ | ೦೯ | ೩.೧ |
| ೨. | ೩೫-೪೫ | ೦೮ | ೨.೮ |
| ೩. | ೪೫-೫೫ | ೦೬ | ೨.೧ |
| ೪. | ಒಟ್ಟು | ೨೩ | ೮.೦ |

ಕುಂಚಿ ಕೊರವರಲ್ಲಿ ತಾಯಿ ಮರಣ, ಶಿಶು ಮರಣಗಳ ಸಮಸ್ಯೆಗಳ ಜೊತೆಗೆ ಇಲ್ಲಿಯ ಮಹಿಳೆಯರಿಗೆ ಕಾಡುತ್ತಿರುವ ಬಹುದೊಡ್ಡ ಸಮಸ್ಯೆ ಗರ್ಭಕೋಶದ ತೊಂದರೆಯಾಗಿದೆ. ವೈದ್ಯಕೀಯ ಸಲಹೆಯ ಪ್ರಕಾರ ೪೦ ವರ್ಷ ದಾಟಿದ ಮಹಿಳೆಯರು ಗರ್ಭಚೀಲವನ್ನು ತೆಗೆಸಿಕೊಳ್ಳಬೇಕು ಎಂಬ ನಿಯಮ ವಿದೆ. ಆದರೆ ಇಲ್ಲಿಯ ಮಹಿಳೆಯರಿಗೆ ೨೮ ವರ್ಷದೊಳಗೆ ಗರ್ಭಕೋಶವನ್ನು ತೆಗೆಸಿಕೊಳ್ಳಬೇಕಾದ ಸಂದರ್ಭ ಒದಗಿದೆ. ಬಿಳಿಯ ಮತ್ತು ಕೆಂಪು ಮುಟ್ಟು ನಿರಂತರ ಹೋಗುವುದರಿಂದ, ಗರ್ಭದಬಾಹು, ಕ್ಯಾನ್ಸರ್ ಸಮಸ್ಯೆಯಿಂದ ಒಟ್ಟು ೨೩ ಮಹಿಳೆಯರು ಗರ್ಭಕೋಶ ತೆಗೆಸಿಕೊಂಡಿದ್ದಾರೆ. ೧೦ ವರ್ಷದ ಹಿಂದೆ ಈ ತೊಂದರೆಯಿಂದ ೫ ಜನ ಮಹಿಳೆಯರು ತೀರಿಕೊಂಡಿದ್ದಾರೆ. ಮುಟ್ಟು ಹೆಚ್ಚು ಹೋಗುತ್ತಿದ್ದರಿಂದ ಸರಿಯಾದ ಸಮಯಕ್ಕೆ ಚಿಕಿತ್ಸೆ ಪಡೆಯದಿರುವುದು, ಅವರ ಸಾವಿಗೆ ಕಾರಣವಾಗಿದೆ. ದುರಗವ್ವ ಎನ್ನುವ ಮಹಿಳೆಗೆ ಗರ್ಭಚೀಲ ತೆಗೆಸಿದ ಮೂರು ದಿನಗಳ ನಂತರ ತೀರಿಕೊಂಡಿದ್ದಾಳೆ. ಗಂಗವ್ವ ಎನ್ನುವ ಮಹಿಳೆಗೆ ಗರ್ಭದ ಬಾಹು ಬಂದು ಹೊಟ್ಟೆ ಉಬ್ಬಿಕೊಂಡು ತೀರಿಕೊಂಡಿದ್ದಾಳೆಂದು ಮಹಿಳೆಯರು ತಿಳಿಸಿದ್ದಾರೆ. ಈ ರೀತಿ ಸಮಸ್ಯೆಯನ್ನು ಅನುಭವಿಸುತ್ತಿರುವಾಗ ಗಂಗವ್ವ ಎನ್ನುವ ಮಹಿಳೆ ಸಾಸನೂರ ಆಸ್ಪತ್ರೆಗೆ ಮೊದಲು ತೋರಿಸಿದಳು. ಆಗ ಅವಳಿಗೆ ೩೨ ವರ್ಷ ವಯಸ್ಸು, ಗರ್ಭಕೋಶದ ಕ್ಯಾನ್ಸರ್ ಆಗಿದ್ದರಿಂದ ಗರ್ಭಕೋಶ ತೆಗೆಸಲಾಯಿತು. ಅಂದಿನಿಂದ ಇಲ್ಲಿಯ ಮಹಿಳೆಯರಿಗೆ ಸಾಮಾನ್ಯವಾಗಿ ಹೊಟ್ಟೆನೋವು, ರಕ್ತಸ್ರಾವ ಆಗುತ್ತಿದ್ದರೆ ಅವರು ಸುಲಭವಾಗಿ

ಬಿಜಾಪುರ ನಗರ ಪ್ರದೇಶದಲ್ಲಿರುವ ಸಾಸನೂರ ಆಸ್ಪತ್ರೆಗೆ ಹೋಗಿ ಗರ್ಭವನ್ನು ತೆಗೆಸಿಕೊಳ್ಳುತ್ತಾರೆ. ಚಿಕ್ಕ ವಯಸ್ಸಿನ ಮಹಿಳೆಯರಿಗೆ ಗರ್ಭಕೋಶದ ಸೋಂಕುತಾಗಿ ಗರ್ಭಚೀಲ ಹಾಳಾಗಿ ತೊಂದರೆ ಅನುಭವಿಸುತ್ತಿರುವುದರಿಂದ ಗರ್ಭಚೀಲವನ್ನೇ ತೆಗೆಸಿ ಹಾಕಲಾಗುತ್ತಿದೆ. ಇದರಿಂದ ಮತ್ತಷ್ಟು ಇತರೇ ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಈ ರೀತಿಯ ಸಮಸ್ಯೆ ಆಗಲು ಕಾರಣವೇನು ಎಂಬ ಮಾಹಿತಿಯನ್ನು ತಿಳಿಯಲು ದಿನಾಂಕ ೦೫/೧೧/೨೦೧೧ ರಂದು ಮಧ್ಯಾಹ್ನ ೩ ಗಂಟೆಗೆ ಸಾಸನೂರ ಆಸ್ಪತ್ರೆಗೆ ಹೋಗಿ ವೈದ್ಯರಿಗೆ ಕೇಳಿದಾಗ ಮೂರು ಕಾರಣಗಳು ತಿಳಿಸಿದರು.

೧. ಸ್ವಚ್ಛತೆ ಇಲ್ಲದಿರುವುದು(ಪೂವರ್ ಹೈಜನಿಕ್).

೨. ಫೆಲಿವಿಕ್ ಇನ್ಪೆಕ್ಷನ್.

೩. ಲೈಂಗಿಕ ಸೋಂಕು

೧. ಈ ಮೂರು ಅಂಶಗಳಿಂದ ಗರ್ಭಕೋಶದ ತೊಂದರೆಗೆ ಒಳಗಾಗುತ್ತಿದ್ದಾರೆ. ಮಹಿಳೆಯರಿಗೆ ಮುಟ್ಟಾದಾಗ, ಗರ್ಭವತಿಯಾದಾಗ, ಗರ್ಭಪಾತವಾದಾಗ, ಮತ್ತು ಹೆರಿಗೆ ಸಂದರ್ಭದಲ್ಲಿ ಸ್ವಚ್ಛತೆಯಿಂದಿರುವ ಪ್ರಜ್ಞೆ ಇಲ್ಲದಿರುವುದಕ್ಕೆ ಗರ್ಭಕೋಶ ತೆಗೆಯಲು ಕಾರಣವಾಗಿದೆ.

೨. ಈ ಜನರು ಬಾಂಬೆ, ಪೂನಾ, ಸತಾರ ಇತರೇ ಊರುಗಳಿಗೆ ವ್ಯಾಪಾರಕ್ಕೆ ವಲಸೆ ಹೋಗುವ್ರ ದರಿಂದ ಗಂಡಸರು ಕುಡಿತ, ಜೂಜು, ಮಟಕಾದಂತಹ ಅನೇಕ ದುಷ್ಟ ಅಭ್ಯಾಸಗಳ ಜೊತೆಗೆ ಹೊರಗಿನ ವೇಶ್ಯೆಯರೊಂದಿಗೆ ಸಂಬಂಧ ಹೊಂದಿರುವುದರಿಂದ ಅವರಿಗೆ ಲೈಂಗಿಕ ಕಾಯಿಲೆ ಗಳು ಬರುವುದು ಸಹಜವಾಗಿವೆ. ಇದರಿಂದ ಸುಲಭವಾಗಿ ಈ ರೋಗಗಳು ಈ ಮಹಿಳೆ ಯರಿಗೆ ತಗಲುತ್ತವೆ. ಅದರ ಜೊತೆ ಹೆಚ್.ಐ.ವಿ.ಯ ಪ್ರಮಾಣವು ಇವರಲ್ಲಿ ಹೆಚ್ಚಾಗಿ ರುವುದು ಕಂಡು ಬರುತ್ತದೆ.

೩. ಪೌಷ್ಟಿಕ ಆಹಾರ ಸೇವಿಸದೇ ಇರುವುದು ಮತ್ತು ಆರೋಗ್ಯದ ಬಗ್ಗೆ ಸರಿಯಾಗಿ ಕಾಳಜಿ ವಹಿಸದೇ ಇರುವುದು. ಸಮಯಕ್ಕೆ ಸರಿಯಾಗಿ ಚಿಕಿತ್ಸೆ ಪಡೆಯದೇ ಇರುವುದು ಇವರ ಆರೋಗ್ಯದ ಮೇಲೆ ಪರಿಣಾಮ ಬೀರಲು ಕಾರಣವಾಗಿವೆ.

ಮಹಿಳೆಯರು ದಿನವಿಡಿ ಬಿಡುವಿಲ್ಲದೆ ದುಡಿಯುತ್ತಾರೆ. "ಕುಟುಂಬ ನಿರ್ವಹಣೆಯ ಎಲ್ಲ ಜವಾಬ್ದಾರಿ ಇವಳದೆ. ಇವಳಿಗಾಗಿ ಯಾರು ಇರುವುದಿಲ್ಲ. ಸಾಯುವತನಕ ಗಂಡನನ್ನು ಸಾಕುವ ಇವಳನ್ನು ಯಾರು ಯಾವ ಕಾಲದಲ್ಲೂ ಸಾಕುವುದಿಲ್ಲ. ಅವರವರ ಹೊಟ್ಟೆ ಬಟ್ಟೆಗೆ ತಾವೆ ಹೊಣೆಗಾರರು. ಇದರಿಂದಾಗಿ ಇವರು ಸಂಪೂರ್ಣವಾಗಿ ಸ್ವಾವಲಂಬಿಗಳೆಂದರೂ ಪರಾವಲಂಬಿಯಂತೆ ಬದುಕುತ್ತಾರೆ."[೬] ಗಂಡಸರು ಹೆಂಡತಿ ಸಂಪಾದಿಸಿದ ಹಣವನ್ನು ಕಸಿದು ಕೊಂಡು ಹೊರಗೆ ಖರ್ಚು ಮಾಡಿ ಬರುತ್ತಾರೆ. ತಾವು ಲೈಂಗಿಕ ರೋಗಕ್ಕೆ ತುತ್ತಾಗುವುದಲ್ಲದೆ ತಮ್ಮ ಹೆಂಡತಿಗೆ ಲೈಂಗಿಕ ಕಾಯಿಲೆಗಳನ್ನು ಬಳುವಳಿಯಾಗಿ ಕೊಡುತ್ತಿದ್ದಾರೆ. ದುಡಿದು ಬದುಕುವುದು ಕಷ್ಟವಾದಂತಹ ಸ್ಥಿತಿ ಇರುವಾಗ ಜೊತೆಗೆ ಇಂತಹ ರೋಗಗಳಿಂದ ಬಳಲುತ್ತಾ ಬದುಕುವುದು ಈ ಮಹಿಳೆಯರಿಗೆ ನರಕವಾಗುತ್ತಿದೆ. ಹೆಚ್.ಐ.ವಿ ಸೋಂಕಿತ ಮಹಿಳೆಯರು

ಇದನ್ನು ಯಾರಿಗೂ ಹೇಳಲಾರದೆ, ಆ ನೋವನ್ನು ನುಂಗಿಕೊಂಡು ಬದುಕುತ್ತಿದ್ದಾರೆ. ತಮ್ಮ ಸಮುದಾಯಕ್ಕೆ ತಿಳಿದರೆ ಎಲ್ಲಿ ಎಲ್ಲರೂ ತಿರಸ್ಕಾರದಿಂದ ನೋಡುತ್ತಾರೆಂಬ ಕಾರಣಕ್ಕೆ ಯಾರಿಗೂ ಹೇಳಲಾರದೆ, ಎ.ಐ.ಆರ್.ಟಿ. ಚಿಕಿತ್ಸೆಯನ್ನು ಪಡೆಯಲಾರದೆ, ಇರುವಂತಹ ಸ್ಥಿತಿಯು ಇವರದಾಗಿದೆ.

**ಬಿಜಾಪುರ ನಗರದ ಕುಂಚಿಕೊರವರ ಹೆಚ್.ಐ.ವಿ ಪ್ರಮಾಣದ ಕೋಷ್ಟಕ ೮**

| ಕ್ರ.ಸಂ | ಹೆಚ್.ಐ.ವಿ ಸೋಂಕಿತರು | ಸಂಖ್ಯೆ | ಶೇಕಡವಾರು |
|---|---|---|---|
| ೧. | ಪುರುಷರು | ೧೪ | ೧.೪ |
| ೨. | ಮಹಿಳೆಯರು | ೧೩ | ೧.೩ |
| ೩. | ಗಂಡು ಮಕ್ಕಳು | ೦೬ | ೦.೬ |
| ೪. | ಹೆಣ್ಣು ಮಕ್ಕಳು | ೦೪ | ೦.೪ |
| ೫. | ಒಟ್ಟು | ೩೭ | ೩.೭ |

ಸುಮಾರು ಹತ್ತು ವರ್ಷಗಳ ಹಿಂದೆ ಏಡ್ಸ್‌ನಿಂದ ಬಳಲಿ ೩೦ ಜನರು ತೀರಿಕೊಂಡಿದ್ದಾರೆ. ಆಗ ಅವರಿಗೆ ಏಡ್ಸ್ ಎಂಬುದು ಅರಿವಿರಲಿಲ್ಲ. ಆದರೆ ಈಗ ಇವರಲ್ಲಿ ಸ್ವಲ್ಪ ಪ್ರಮಾಣದ ಜಾಗೃತಿ ಮೂಡಿದೆ. ಆದರೂ ಇವರಲ್ಲಿ ೩೭ ಜನರು ಹೆಚ್.ಐ.ವಿ ಸೋಂಕಿತರಿದ್ದಾರೆ. ಎರಡು ಮೂರು ವರ್ಷಗಳಿಂದ ಈ ಜನರು ಏ.ಐ.ಆರ್.ಟಿ ಚಿಕಿತ್ಸೆಯನ್ನು ಉಜ್ವಲಾ ಸಂಸ್ಥೆಯಲ್ಲಿ ಮತ್ತು ಸರಕಾರಿ ಆಸ್ಪತ್ರೆಯಲ್ಲಿ ಪಡೆಯುತ್ತಿದ್ದಾರೆ. ಇನ್ನೂ ಕೆಲವರು ಯಾರಿಗೂ ಹೇಳಲಾರದೆ ಹಾಗೆಯೆ ಮುಚ್ಚಿಟ್ಟುಕೊಂಡು ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ರೋಗ ಉಲ್ಬಣಗೊಂಡು ನರಳುತ್ತಿದ್ದಾರೆ.

ಈ ರೀತಿಯಾಗಿ ಆರೋಗ್ಯದ ಸಮಸ್ಯೆಯನ್ನು ಅನುಭವಿಸುತ್ತಿರುವ ಕುಂಚಿ ಕೊರವರ ಬಗ್ಗೆ ಪ್ರಯೋಗಾತ್ಮಕ ಸಂಶೋಧನೆಯನ್ನು ಕೈಗೊಂಡಾಗ ಇವರ ಆರೋಗ್ಯದ ಸುಧಾರಣೆಯ ಕಾರ್ಯಕ್ರಮಗಳಲ್ಲಿ ೨ ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಮಹಿಳಾ ಅಧ್ಯಯನ ಕೇಂದ್ರ, ನಗರಸಭೆ ಮತ್ತು ಆಲ್-ಆ-ಮೀನ್ ವೈದ್ಯಕೀಯ ಮಹಾ ವಿದ್ಯಾಲಯದ ಸಹಯೋಗದಲ್ಲಿ ದಿನಾಂಕ ೧೬/೦೩/೨೦೧೧ರಂದು ಮತ್ತು ದಿನಾಂಕ ೧೧/೦೫/೨೦೧೧ರಂದು ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಮೊದಲ ಶಿಬಿರದಲ್ಲಿ ಸ್ತ್ರೀರೋಗ ತಜ್ಞರು, ಕಣ್ಣಿನ ತಜ್ಞರು, ಚರ್ಮರೋಗ ತಜ್ಞರು, ಮಕ್ಕಳ ತಜ್ಞರು, ಸಾಮಾನ್ಯ ರೋಗ ತಜ್ಞರು ಬಂದು ಚಿಕಿತ್ಸೆಯನ್ನು ನೀಡಿದರು. ರೋಗದ ತೊಂದರೆ ಹೆಚ್ಚು ಇದ್ದವರಿಗೆ ಆಸ್ಪತ್ರೆಗೆ ಬರಲು ತಿಳಿಸಿದರು. ಅದರಂತೆ ಕಣ್ಣಿನ ತೊಂದರೆಗೆ ಒಳಪಟ್ಟ ೫ ಜನ ಮಹಿಳೆಯರಾದ ದುರಗವ್ವ ಇಂಡಿ, ಅಂಬವ್ವ ಕುಂಚಿ ಕೊರವ, ಹುಲಗವ್ವ ಗುನ್ನಾಪುರ, ಹುಲಗವ್ವ ಕುಂಚಿಕೊರವ, ಗಂಗವ್ವ ಎಡ್ರಾಮಿ ಇವರು ಅಲ್ ಆಮೀನ್

ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದರು. ಮೂರು ಮಹಿಳೆಯರಿಗೆ ಕನ್ನಡಕ ಕೊಡಲಾಗಿದೆ. ಒಬ್ಬ ಮಹಿಳೆಗೆ ಔಷಧಗಳನ್ನು ಕೊಡಲಾಗಿದೆ. ಮತ್ತೊಬ್ಬ ಮಹಿಳೆಯಾದ ಹುಲಗವ್ವ ಕುಂಚಿ ಕೊರವ ೬೯ ವರ್ಷದ ಮಹಿಳೆಗೆ ಕಣ್ಣಿನ ಶಸ್ತ್ರಚಿಕಿತ್ಸೆ ಮಾಡಲಾಗಿದೆ. ಹುಲಿಗವ್ವಳಿಗೆ ಮೊದಲು ದುರಗಮ್ಮನ ಕಿರಿಕಿರಿಯಿಂದ ಕಣ್ಣು ಕಾಣುವುದಿಲ್ಲ ವೆಂದು ನಂಬಿದ್ದಳು. ಅದರಿಂದ ದೇವಿಗೆ ಹರಿಕೆಯನ್ನು ಹೊತ್ತುಕೊಳ್ಳುತ್ತಲೇ ಇದ್ದಳು. ಆಸ್ಪತ್ರೆಯಿಂದ ಚಿಕಿತ್ಸೆ ಪಡೆಯಬೇಕು ಎಂಬ ಮಾಹಿತಿ ಇರದೇ, ತೊಂದರೆಗೆ ಒಳಗಾಗಿದ್ದಳು. ಈಗ ಚಿಕಿತ್ಸೆಯಾದಾಗಿನಿಂದ ತಾನೇ ಒಬ್ಬಳು ಓಡಾಡುತ್ತಾಳೆ. ಕಸಬರಿಗೆ ಕೆಲಸವನ್ನು ಮಾಡುತ್ತಾಳೆ. ಅದರಂತೆ ಮರಿಯಪ್ಪ ಎನ್ನುವನಿಗೆ ಕಾಲಿನ ತೊಂದರೆಯಾಗಿತ್ತು ಈ ಶಿಬಿರದಿಂದ ಮಾಹಿತಿಯನ್ನು ಪಡೆದ ನಂತರ ಶಸ್ತ್ರಚಿಕಿತ್ಸೆಯನ್ನು ಮಾಡಿಸಿಕೊಂಡಿದ್ದಾನೆ.

ಆಲ್ ಆಮೀನ್ ವೈದ್ಯಕೀಯ ಕಾಲೇಜಿನಲ್ಲಿ ಬಿ.ಪಿ.ಎಲ್. ಕಾರ್ಡ ಇದ್ದವರಿಗೆ ೭೫% ಉಚಿತ ವಾಗಿ ಚಿಕಿತ್ಸೆಯನ್ನು ಕೊಡಲಾಗುತ್ತದೆ. ಈ ಮಾಹಿತಿ ತಿಳಿದ ನಂತರ ಕುಂಚಿ ಕೊರವರೆಲ್ಲರೂ ಈ ಆಸ್ಪತ್ರೆಗೆ ಹೋಗುತ್ತಿದ್ದಾರೆ. ಈ ಶಿಬಿರದಿಂದ ಮಕ್ಕಳಿಗೆ ಮತ್ತು ಮಹಿಳೆಯರಿಗೆ ರಕ್ತ ಹೀನತೆಯನ್ನು ಹೊಗಲಾಡಿಸಲು ಪೌಷ್ಟಿಕಾಂಶದ ಗುಳಿಗೆಗಳನ್ನು ಉಚಿತವಾಗಿ ೧೫ ದಿನಗಳಂತೆ ೩ ತಿಂಗಳವರೆಗೆ ಕೊಡಲಾಯಿತು. ಅದರ ಜೊತೆಗೆ ಜಂತುಹುಳಗಳ ಸಮಸ್ಯೆ, ಇಸುಬು, ಕಜ್ಜಿಗೆ ಔಷಧಿಯನ್ನು ಹಂಚಲಾಯಿತು.ಇಂದು ಸಣ್ಣ ಮಕ್ಕಳ ಇಸುಬು ಮತ್ತು ಕಜ್ಜಿಯಿಂದ ಮುಕ್ತಿ ಹೊಂದಿದ್ದಾರೆ.

ಗರ್ಭಕೋಶದ ತೊಂದರೆಗೆ ಒಳಗಾದ ಮಹಿಳೆಯರಿಗೆ ನಗರಸಭೆಯಿಂದ ಭಾರಿ ಶಸ್ತ್ರಚಿಕಿತ್ಸೆಗೆ ತಲಾ ೨೦,೦೦೦ ಸಾವಿರದಂತೆ ೫ ಮಹಿಳೆಯರಿಗೆ ಸಹಾಯಧನವನ್ನು ಕೊಡಿಸಲಾಗಿದೆ. ಈ ಹಣದಿಂದ ಆರೋಗ್ಯ ಸುಧಾರಿಸಲು ಮತ್ತು ಉತ್ತಮ ಆಹಾರ ಸೇವಿಸುವಂತೆ ತಿಳಿಸಲಾಗಿದೆ. ೩ ಮಹಿಳೆಯರ ಹೆಸರಿಗೆ ೧೦,೦೦೦ ರೂ. ಡಿಪಾಜಿಟ್ ಮಾಡಿ, ಅದರ ಜೊತೆ ಬ್ಯಾಂಕ್ ಆಫ್ ಮಾಹರಾಷ್ಟ್ರದಲ್ಲಿ ಜೀವ ವಿಮೆಯನ್ನು ಮಾಡಿಸಲಾಗಿದೆ. ಇಲ್ಲಿಯ ಮಹಿಳೆಯರಿಗೆ ಗರ್ಭಕೋಶದ ತೊಂದರೆಯಾದರೆ ಆಲ್ ಆಮೀನ್ ಕಾಲೇಜನಲ್ಲಿ ಉಚಿತವಾಗಿ ಚಿಕಿತ್ಸೆ ಮಾಡುತ್ತಾರೆಂದು ತಿಳಿಸಲಾಗಿದೆ ಮತ್ತು ಚಿಕ್ಕ ವಯಸ್ಸಿನಲ್ಲಿ ಗರ್ಭಚೀಲವನ್ನು ತೆಗೆಸಿಕೊಳ್ಳ ಬಾರದು, ಅದಕ್ಕೆ ಮೊದಲಿನಿಂದಲೂ ಸರಿಯಾಗಿ ಆರೋಗ್ಯದ ಬಗ್ಗೆ ಕಾಳಜಿವಹಿಸಬೇಕೆಂದು ಡಾ. ಆರ್.ಸುನಂದಮ್ಮ, ಮಹಿಳಾ ಅಧ್ಯಯನ ವಿಭಾಗದ ಮುಖ್ಯಸ್ಥರು, ಮತ್ತು ಅಲ್ ಆ ಮೀನ್ ಕಾಲೇಜಿನ ಸ್ತ್ರೀರೋಗ ತಜ್ಞರಾದ ಡಾ. ತೊಬ್ಬಿಯವರು ಇವರಿಗೆ ಜಾಗೃತಿಯನ್ನು ಮೂಡಿಸಿದ್ದಾರೆ. ಈ ಜಾಗೃತಿಯಿಂದ ಇಲ್ಲಿಯ ಜನರು ಅಲ್ ಆ ಮೀನ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ಸಂತೋಷಗೊಂಡಿದ್ದಾರೆ. ಹೆಚ್.ಐ.ವಿ ತಡೆಗಟ್ಟಲು ವಲಸೆಯನ್ನು ತಡೆಯುವುದು ಮುಖ್ಯವಾಗಿದೆ. ಲೈಂಗಿಕತೆಯಿಂದ ಹರಡುವ ಕಾಯಿಲೆಗಳಿಗೆ ಸೂಕ್ತ ಚಿಕಿತ್ಸೆ ಇರುವುದರಿಂದ ಎಚ್ಚರವಹಿಸಿ ಸ್ತ್ರೀರೋಗ ತಜ್ಞರಲ್ಲಿ ಹೋಗಲು ತಿಳುವಳಿಕೆ ನೀಡಿ, ಪ್ರೋತ್ಸಾಹಿಸಲಾಗುತ್ತಿದೆ.

ಮೇ ೬ ೨೦೧೦ ರಂದು ಅಂಗನವಾಡಿ ಕೇಂದ್ರವಾದ ನಂತರ ಮಕ್ಕಳಿಗೆ ಮತ್ತು ಗರ್ಭಿಣಿ ಮಹಿಳೆಯರಿಗೆ ಪೌಷ್ಟಿಕ ಆಹಾರವನ್ನು ಕೊಡಲಾಗುತ್ತಿದೆ. ಮೊದಲು ಈ ಜನರು ಅಂಗನವಾಡಿ ಕೇಂದ್ರದಿಂದ ದೂರ ಇರುತ್ತಿದ್ದರು. ನಿಧಾನವಾಗಿ ಈ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ ಮತ್ತು ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳುತ್ತಾರೆ. ಜೂನ್ ತಿಂಗಳಲ್ಲಿ ಅತ್ಯಂತ ಕಡಿಮೆ ತೂಕವಿರುವ ೪ ಮಕ್ಕಳ ವರದಿಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಲ್ಲಿಸಿ, ಶಿಶುಮರಣವನ್ನು ತಪ್ಪಿಸಲು ಪ್ರಯತ್ನಿಸಲಾಗುತ್ತಿದೆ. ಗರ್ಭಿಣಿಯರು ಚುಚ್ಚಮದ್ದು ಮತ್ತು ಮಕ್ಕಳಿಗೆ ಲಸಿಕೆಗಳನ್ನು ಹಾಕಿಸಿಕೊಳ್ಳಲು ಹಿಂಜರಿಯುತ್ತಿದ್ದರು. ಚುಚ್ಚು ಮದ್ದಿನಿಂದ ಮಕ್ಕಳು ಸಾಯುತ್ತಾರೆ ಎಂಬ ಭ್ರಮೆಯಿಂದ ಈಗ ಹೊರಗೆ ಬಂದಿದ್ದಾರೆ. ಎಲ್ಲರಲ್ಲಿ ಈ ಬದಲಾವಣೆ ಕಂಡುಬಂದಿಲ್ಲ. ಈ ಲಸಿಕೆಗಳ ಬಗ್ಗೆ ಮತ್ತು ಕೇಂದ್ರದ ಬಗ್ಗೆ ನಂಬಿಕೆ ಬರುವವರೆಗೆ, ಈ ಸಮಸ್ಯೆಗೆ ಪರಿಹಾರವಿಲ್ಲ. ಇವರಿಗೆ ಒಂದು ಸಾರಿ ನಂಬಿಕೆ ಬಂದರೆ ಇಂತಹ ಆರೋಗ್ಯದ ಸಮಸ್ಯೆಗಳು ಸಂಪೂರ್ಣವಾಗಿ ತಡೆಗಟ್ಟಬಹುದಾಗಿದೆ. ಅದಕ್ಕಾಗಿ ಅವರೊಂದಿಗೆ ನಿರಂತರ ಸಂಪರ್ಕದಲ್ಲಿರಲಾಗಿದೆ.

## ಮೂಢನಂಬಿಕೆ

ಕುಂಚಿ ಕೊರವರಿಗೆ ಆರೋಗ್ಯಕ್ಕೆ ಸಂಬಂಧಿಸಿದ ಯೋಜನೆಗಳ ಬಗ್ಗೆ ಮಾಹಿತಿಯಿಲ್ಲ, ಮಾಹಿತಿ ಇದ್ದರು ಆಸ್ಪತ್ರೆಗೆ ಹೋಗಲು ಹಿಂಜರಿಯುತ್ತಾರೆ. ಇಲ್ಲಿಯ ಜನರಿಗೆ ಅನಾರೋಗ್ಯ ಉಂಟಾದರೆ ನಾಟಿ ಔಷಧವನ್ನು ತೆಗೆದುಕೊಳ್ಳುತ್ತಾರೆ. ಇಲ್ಲವೆ ದುರ್ಗಮ್ಮ ದೇವಿಯ ಕೋಪದಿಂದ ಈ ರೀತಿಯ ಸಮಸ್ಯೆಯುಂಟಾಗುತ್ತಿದೆ ಎಂದು ನಂಬುತ್ತಾರೆ. ದೇವಿಗೆ ಹರಕೆಯನ್ನು ಹೊತ್ತುಕೊಳ್ಳುತ್ತಾರೆ. ಇವರಲ್ಲಿ ತಲೆ ನೋವು, ಹೊಟ್ಟೆ ನೋವು ಕಾಣಿಸಿಕೊಂಡಾಗ ಹಸಿರುಗಾಜಿನ ಬಳೆಗಳಿಂದ, ಕುದಾರ, ಊದಬತ್ತಿಯಿಂದ ನರಗಳಿಗೆ ಸುಡುತ್ತಾರೆ. ತಲೆನೋವು ಕಾಣಿಸಿಕೊಂಡಾಗ ಸುಣ್ಣ ಮತ್ತು ಕೇರ್ ಬೀಜವನ್ನು ತಲೆಗೆ ಹಚ್ಚಿಕೊಳ್ಳುತ್ತಾರೆ. ಇದರಿಂದ ನೋವು ಬೇಗನೆ ಕಡಿಮೆಯಾಗುತ್ತದೆ ಎಂಬ ನಂಬಿಕೆಯಿದೆ. ಇದಕ್ಕೆ ಇವರಲ್ಲಿ 'ಕಿಂಕರಿ ಪದ್ಧತಿ' ಎನ್ನುತ್ತಾರೆ. ಬಳೆಗಳಿಂದ ಸುಡುವುದು ತಪ್ಪು ಎಂದು ತಿಳಿಸಲಾಗಿದೆ.

ನಾಯಿ ಕಚ್ಚಿದ್ದರೆ ಒಣಮೆಣಸಿನಕಾಯಿಯನ್ನು ಸುಟ್ಟು ಹಚ್ಚಿಕೊಳ್ಳುತ್ತಾರೆ. ಮತ್ತು ಕಚ್ಚಿದ ನಾಯಿಯ ಮನೆಯವರಿಂದ ತೆಗೆದುಕೊಂಡ ಎಲೆ ಮತ್ತು ಸುಣ್ಣ ಅಗಿದು, ಅದರ ರಸವನ್ನು ಕಚ್ಚಿದ ಜಾಗಕ್ಕೆ ಹಚ್ಚಿಕೊಳ್ಳುವ ಪದ್ಧತಿ ಇದೆ. ಹೊಟ್ಟೆನೋವು ಅತಿಸಾರ ಕಂಡುಬಂದರೆ ದೃಷ್ಟಿ ತಗಲಿದೆ ಎಂದು ನಂಬಿ, ಒಂದು ತಟ್ಟೆಯಲ್ಲಿ ಉಳಿದ ಆಹಾರ ಪದಾರ್ಥಗಳನ್ನು ನೀರಿನ ಜೊತೆಗೆ ಹಾಕುತ್ತಾರೆ. ಅದರೊಳಗೆ ಒಂದು ಹುಂಡೆ ಸಗಣಿ ಇಡಲಾಗುತ್ತದೆ. ಆದಕ್ಕೆ ಸೀಮೆ ಎಣ್ಣೆಯಲ್ಲಿ ನೆನಸಿದ ಬಟ್ಟೆಯನ್ನು, ಸಣ್ಣ ಕಡ್ಡಿಗೆ ಸುತ್ತಿ ಸಗಣಿಗೆ ಸಿಕ್ಕಿಸಿ ಅದಕ್ಕೆ ಬೆಂಕಿಯನ್ನು ಹಚ್ಚುತ್ತಾರೆ. ಹೊಟ್ಟೆನೋವಿನ ವ್ಯಕ್ತಿಗೆ ದೇವರ ಹೆಸರಿನಲ್ಲಿ ೭ ಸಾರೆ ತಂಬಿಗೆ

ಅಥವಾ ಸ್ಟೀಲ್ ಕೊಡದಿಂದ ದೃಷ್ಟಿಯನ್ನು ತೆಗೆದು, ಬೆಂಕಿ ಉರಿಯುವ ತಟ್ಟೆಗೆ ಬೋರಲಾಗಿ ಹಾಕಲಾಗುತ್ತದೆ. ತಟ್ಟೆಯ ನೀರು ಹೀರಿಕೊಂಡರೆ ದೃಷ್ಟಿಬಿದ್ದಿದೆ, ಇದರಿಂದ ಹೊಟ್ಟೆನೋವು ಕಡಿಮೆಯಾಗುತ್ತದೆ ಎಂಬ ನಂಬಿಕೆ ಇದೆ.

ಗಂಡು ಮಗುವಿನ ಅಪೇಕ್ಷೆಯಿಂದ ಹೆಣ್ಣು ಮಗುವಿನ ಗರ್ಭಪಾತವನ್ನು ಅವೈಜ್ಞಾನಿಕವಾಗಿ ಮಾಡಿಸಿಕೊಳ್ಳುತ್ತಾರೆ. ಇವರಲ್ಲಿ ಹೆಚ್ಚು ಹೆಣ್ಣು ಮಗುವಾದರೆ ಗಂಡ ವಂಶೋದ್ಧಾರಕ್ಕೆ ಎರಡನೆ ವಿವಾಹವಾಗುವುದರಿಂದ ಒಂದು ಕುಟುಂಬದಲ್ಲಿ ಕನಿಷ್ಟ ಒಂದಾದರು ಗಂಡು ಮಗು ಬೇಕು. ಆದ್ದರಿಂದ ಮಹಿಳೆಯರು ೩-೪ ಹೆಣ್ಣು ಮಗುವಾದರೆ ಗರ್ಭಿಣಿ ಮಹಿಳೆ ಮೈಯಲ್ಲಿ ದೇವರು ಬರುವ ಪೂಜಾರಿಯಲ್ಲಿ ಹೋಗಿ 'ಹೇಳಿಕೆ'ಯನ್ನು ಕೇಳುತ್ತಾಳೆ. ಮೈಯಲ್ಲಿ ದೇವರು ಬಂದ ಪೂಜಾರಿ ಗಂಡು ಎಂದರೆ ಕುಟುಂಬದವರು ಸಮ್ಮನಾಗುತ್ತಾರೆ. ಹೆಣ್ಣು ಎಂದರೆ ಆ ಮಗುವನ್ನು 'ಕಾಡಔಷಧ'/ನಾಟಿ ಔಷಧದಿಂದ ಗರ್ಭವನ್ನು ತೆಗೆಸುತ್ತಾರೆ. ಇದರಿಂದ ನಂಜು, ಸೋಂಕುತಾಗಿ ಮಹಿಳೆಯರ ಗರ್ಭಕೋಶದ ತೊಂದರೆಯನ್ನು ಅನುಭವಿಸಲು ಕಾರಣವಾಗಿದೆ. ಹೀಗೆ ಮೂಢನಂಬಿಕೆ ಮತ್ತು ಅನಕ್ಷರತೆಯಿಂದ ಆರೋಗ್ಯದ ಅತಿ ಹೆಚ್ಚು ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ. ಇಂತಹ ಅವೈಜ್ಞಾನಿಕ ಪದ್ಧತಿಗಳಿಂದ ಸಾವು ಸಂಭವಿಸಿದೆ. ಇದರ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯ ಮುಂದುವರೆದಿದೆ.

ವಿಶ್ವದಲ್ಲಿ ಇಂದು ಕಾಲಮಿತಿಗಳನ್ನು ಹಾಕಿಕೊಂಡು ಹಲವು ವಿಶೇಷ ಯೋಜನೆಗಳನ್ನು ರೂಪಿಸಿ ಮಹಿಳಾ ಆರೋಗ್ಯವನ್ನು ಸುಧಾರಿಸಲು ಪ್ರಯತ್ನಿಸಲಾಗುತ್ತಿದೆ. ಇದರಲ್ಲಿ ೨೦೧೫ ರೊಳಗೆ ಸಾಧಿಸಬೇಕಾದ ಯು.ಎನ್. ಸಹಸ್ರಮಾನ ಅಭಿವೃದ್ಧಿ ಗುರಿಗಳು ಹೀಗಿವೆ:

೧. ಶಿಶು ಮರಣ ಹಾಗೂ ೫ ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣವನ್ನು ೩/೩ ರಷ್ಟು ಕಡಿಮೆ ಮಾಡುವುದು.
೨. ತಾಯಿ ಮರಣ ಪ್ರಮಾಣವನ್ನು ೩/೪ ರಷ್ಟು ತಗ್ಗಿಸುವುದು.
೩. ಹೆಚ್.ಐ.ವಿ/ಏಡ್ಸ್ ಹಾವಳಿಯನ್ನು ತಡೆಗಟ್ಟುವುದು ಮತ್ತು ಅದರ ಹರಡಿಕೆಯನ್ನು ಕಡಿಮೆ ಮಾಡುವುದು.

ಭಾರತವು ಮೇಲಿನ ವಿಷಯಗಳಲ್ಲಿ ಗುರಿ ಮುಟ್ಟಲು ಪ್ರಯತ್ನಿಸುತ್ತಿದೆ. ಈ ಕಾರ್ಯಕ್ರಮ ಗಳು ಇನ್ನೂ ಕೆಳಮಟ್ಟದ ಜನರಿಗೆ ತಲುಪುತ್ತಿಲ್ಲ. ನಗರದ ಮಧ್ಯದಲ್ಲಿ ಇರುವಂತ ಕುಂಚಿ ಕೊರವ ಜನರ ಸ್ಥಿತಿ ಇದಾದರೆ, ಇನ್ನೂ ಗ್ರಾಮಗಳಲ್ಲಿ ವಾಸಿಸುವಂತಹ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನರ ಜೀವನದ ಸ್ಥಿತಿ ಇನ್ನೂ ಕೆಳಮಟ್ಟದ್ದಾಗಿದೆ. ಇಂತಹ ಇನ್ನೂ ಅನೇಕ ಸಮುದಾಯಗಳು ಸಮಾಜದ ಮುಖ್ಯವಾಹಿನಿಯಲ್ಲಿ ಮರೆಮಾಚಿವೆ. ಅವರ ಸಾಮಾಜಿಕ ಆರ್ಥಿಕ ಆರೋಗ್ಯದ ಸ್ಥಿತಿಗಳು ತುಂಬಾ ಕೆಳಮಟ್ಟದಾಗಿವೆ. ಇಂತಹ ಜನರಲ್ಲಿ ಈ ಗುರಿಗಳು ಮುಟ್ಟುವಂತಹ ಕಾರ್ಯಗಳಾಗಬೇಕು. ಸರಕಾರ ಯೋಜನೆಗಳನ್ನು ಕೇವಲ ರೂಪಿಸಿದರೆ ಸಾಲದು, ಯೋಜನೆಗಳು ಇಂತಹ ಕೆಳವರ್ಗದ ಜನರಿಗೆ ಸುಲಭವಾಗಿ ತಲುಪುವಂತಾಗಬೇಕು. ಅಂದಾಗ ಮಾತ್ರ ಈ ಯೋಜನೆಗಳಿಗೆ ಒಂದು ಅರ್ಥ ಸಿಕ್ಕಿದಂತಾಗುತ್ತದೆ. ಇಲ್ಲದಿದ್ದರೆ ಕೇವಲ

ಹೆಸರಿಗೆ ಯೋಜನೆಗಳಾಗುತ್ತವೆ. ಇಂತಹ ಸುಧಾರಣೆಗಳಾಗದಿದ್ದರೆ ಕೆಳವರ್ಗದ ಜನರ ಸ್ಥಿತಿ ಸುಧಾರಿಸದೇ ಅತಂತ್ರದ ಪರಿಸ್ಥಿಯಲ್ಲಿಯೇ ಬದುಕುಳಿಯಬೇಕಾಗುತ್ತದೆ.

**ಟಿಪ್ಪಣಿಗಳು**

೧. ಎ. ಶ್ರೀಧರ, ಸಿದ್ಧಗಂಗಮ್ಮ, 'ಅಭಿವೃದ್ಧಿ ಅಧ್ಯಯನ',ಸಂಪುಟ-೪, ಸಂಚಿಕೆ-೧, ೨೦೦೫, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅರ್ಧವಾರ್ಷಿಕ ಪತ್ರಿಕೆ, ಪು. ೧೦೫,

೨. ವಿಜಯ ಕರ್ನಾಟಕ ೨೯ ನವೆಂಬರ್ ೨೦೧೦.

೩. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ ಪು. ೧೪೯.

೪. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫ ಪು. ೧೪೮.

೫. ದಿಕ್ಸೂಚಿ ಡಿಸೆಂಬರ ೨೦೦೯.

೬. ಡಾ. ಆರ್ ಸುನಂದಮ್ಮ, ಕುಂಚಿಕೊರವ ಮಹಿಳೆ, ಸಂಸ್ಕೃತಿ ಮಹಿಳಾ ಮಾಲಿಕೆ, ಪು. ೧೦೧.

**ಆಕರ ಗ್ರಥಗಳು**

೧. ಡಾ. ಬಿ,ಎನ್, ಸುಮಿತ್ರಾಬಾಯಿ, ಎನ್, ಗಾಯಿತ್ರಿ ಸ್ತ್ರೀವಾದಿ ಪ್ರವೇಶಿಕೆ. ನವಕನಾಟಕ ಪ್ರಿಂಟರ್ಸ್ ೧೯೯೫

೨. B.S. Bisht. Tribes of Uttaranchl A Studies of Education Health, Hygiene and Nutrition. kalpaz publication, Delhi, 2006.

೩. C.N. Ray. Liberalization and Urban Social Services. Healty and Education , Rawat publication, Delhi, 2003.

೪. ಡಿ. ಮಂಗಳಾ ಪ್ರಿಯದರ್ಶಿನಿ, ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫. K.Shanthi, Women in India, Anmol Publications PVT.LTD. New Delhi, 2005.

೬. ಕೆ. ಸರೋಜಾ, ಮಹಿಳೆ ಮತ್ತು ಆರೋಗ್ಯ, ಕನ್ನಡ ವಿಶ್ವವಿದ್ಯಾಲಯ ಹಂಪಿ,

೭. ಡಾ. ಶೈಲಜಾ ಹೀರೆಮಠ, ಮಹಿಳಾ ಅಧ್ಯಯನ ಅರ್ಧವಾರ್ಷಿಕ ಪತ್ರಿಕೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೬.

೮. Sangeta Singh, Changing Status of Women in India, Anmol Publications PVT.LTD. New Delhi 1997.

...

೧೬

# ಸ್ತ್ರೀ ಮತ್ತು ಪುರುಷರ ನಡುವಿನ ಸಂಘರ್ಷ

ಡಾ. ಬಿ.ಎಸ್. ಗೀತಾ

ಸ್ತ್ರೀ ಮತ್ತು ಪುರುಷರ ನಡುವಿನ ಮುಖಾಮುಖಿಯು ಪ್ರಾಚೀನ ಕಾಲದಿಂದ ಇಂದಿನ ವರೆಗೂ ನಿರಂತರವಾಗಿ ತಣ್ಣಗೆ ನಡೆದು ಬರುತ್ತಾ ಇದೆ. ಪುರುಷರ ಅಧೀನಳಾಗಿ ಬದುಕ ಬೇಕಾಗಿ ಬಂದ ಸ್ತ್ರೀಯು ಇವರ ವಿರುದ್ಧ ಎಂದೂ ಧ್ವನಿ ಎತ್ತಲಿಲ್ಲವೇ? ಹೋರಾಡಿದ್ದೇ ಆದರೆ ಹೇಗೆ? ಚರಿತ್ರೆಯಲ್ಲಿ ನಡೆದ ಮಹಿಳೆಯರ ಹೋರಾಟದ ಸೂಕ್ಷ್ಮ ಸ್ವರೂಪವನ್ನು ಅರಿಯಲೇಬೇಕು. ಇದು ಸಾಂಸ್ಕೃತಿಕವಾಗಿ ಅತ್ಯಗತ್ಯವಾದುದು. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರ್ಮಿಕವಾಗಿ ಹೋರಾಡಿದ ಇಬ್ಬರು ಸ್ತ್ರೀಯರಲ್ಲಿ ಅತ್ತಿಮಬ್ಬೆ ಮತ್ತು ಅಕ್ಕಮಹಾದೇವಿ ಪ್ರಮುಖರು. ಇಬ್ಬರೂ ಸ್ತ್ರೀಯರು ಸಮಾಜದ ನಿಯತಿಯನ್ನು ಯಾವ ರೀತಿಯಲ್ಲಿ ಎದುರಿಸಿದರು. ಅವರುಗಳು ತಳೆದ ನಿಲುವೇನು ಎಂಬುದನ್ನು ಸ್ವಲ್ಪ ಅವಲೋಕಿಸೋಣ.

ವೈದಿಕ, ಜೈನ, ಬೌದ್ಧ ಮತಗಳು ಸ್ತ್ರೀಯರು ಪುರುಷರಷ್ಟೇ ಸಮಾನರೆಂದು ಪರಿಗಣಿಸುವುದಿಲ್ಲ. ವೈದಿಕ ಧರ್ಮದ ಪ್ರಕಾರ ಸ್ತ್ರೀಯರಿಗೆ ವೇದಾಧಿಕಾರವಿಲ್ಲ. ಜೈನ ಧರ್ಮದ ಪ್ರಕಾರ ಸ್ತ್ರೀ ಮೋಕ್ಷಕ್ಕೆ ಅರ್ಹಳಲ್ಲ. ಒಂದು ವೇಳೆ ಮೋಕ್ಷವನ್ನು ಹೊಂದಬೇಕಾದರೆ ಆಕೆ ಮುಂದಿನ ಜನ್ಮದಲ್ಲಿ ಗಂಡಾಗಿ ಹುಟ್ಟಬೇಕು. ಒಟ್ಟು ಜೈನಧರ್ಮವು ಸ್ತ್ರೀಯನ್ನು ಧಾರ್ಮಿಕವಾಗಿ ಕಡೆಗಣಿಸಿತ್ತು. ಬೌದ್ಧ ಧರ್ಮವಂತೂ ಮೊದಮೊದಲು ಸ್ತ್ರೀಯರಿಗೆ ಪ್ರವೇಶವನ್ನೇ ನಿರಾಕರಿಸಿತು. ವಚನಕಾರರು ಸಾಮಾಜಿಕ ಧಾರ್ಮಿಕ ನೆಲೆಗಳೆರಡರಲ್ಲೂ ಸ್ತ್ರೀಯ ಅಂತಸ್ತಿಗೆ ಮುಖ್ಯವಾದ ಕೆಲವು ಬೆಳವಣಿಗೆಗಳನ್ನು ರೂಪಿಸಿರುವುದನ್ನು ಕಾಣಬಹುದು. ಸ್ತ್ರೀಯರ ಬಗ್ಗೆ ಕೆಲವು ಗುಣಾತ್ಮಕವಾದ ನಿಲುವುಗಳನ್ನು ತೆಗೆದುಕೊಂಡಿತೆಂದು ಹೇಳಬಹುದು. ಈ ನಿಲುವುಗಳು ವೈದಿಕ ಹಾಗೂ ಜೈನಧರ್ಮದ ನಿಲುವಿಗೆ ವಿರೋಧವಾಗಿತ್ತು.

ಜೈನಧರ್ಮ ಸ್ತ್ರೀಯನ್ನು ಧಾರ್ಮಿಕವಾಗಿ ಕಡೆಗಣಿಸಿದ್ದಿತಾದರೂ, ಅನೇಕ ಸ್ತ್ರೀಯರು ಜೈನಧರ್ಮದ ಉನ್ನತಿಗಾಗಿ ಶ್ರಮಿಸಿದ್ದಾರೆ. ಅವರಲ್ಲಿ ಅತ್ತಿಮಬ್ಬೆಯೂ ಒಬ್ಬಳು. ಅತ್ತಿ

ಮಬ್ಬೆಯೂ ಶಾಂತವಾದ ಜೀವನವನ್ನು ನಡೆಸಿದಳು ಎನ್ನುವ ಅಭಿಪ್ರಾಯವಿದೆ. ನಮಗನಿಸುವಂತೆ ಅತ್ತಿಮಬ್ಬೆ ಸಂಘರ್ಷಯುತವಾದ ಬದುಕನ್ನೆದುರಿಸಿದಳು ಎಂದು ತೋರುತ್ತದೆ. ಅತ್ತಿಮಬ್ಬೆ ತನ್ನ ಪತಿಯನ್ನು ಕಳೆದುಕೊಂಡು ತನ್ನ ಮಗನಿಗಾಗಿ ಸಂಸಾರಿಕ ಜೀವನವನ್ನು ಮತ್ತೆ ನೆಮ್ಮ ಬೇಕಾಯಿತು. ರನ್ನ ಕವಿ ಕೇಳುವಂತೆ 'ಎರಡೆ ವಲಂ ಕುಲವಧುಗಾಚರಿಸಲ್ ಪರೋಕ್ಷದೊಳ್ ಜಿನದೀಕ್ಷಾ ಚರಣಂ ಮೇಣ್ ಶುಭಚರಿತದೆ ಮರಣಂ' ಬಹುಶಃ ಹೋರಾಟ ಮಾಡುವ ಬಣ ಗಳಲ್ಲಿ ಇದ್ದಿರಬಹುದಾದ ಈ ಪದ್ಧತಿಯಲ್ಲಿ ಅತ್ತಿಮಬ್ಬೆ ಶ್ರಾವಕಿಯಾಗಿ ಉಳಿಯುವುದನ್ನು ಆಯ್ಕೆ ಮಾಡಿಕೊಂಡಳು. ಸಂಸಾರಿಕ ಜೀವನದಲ್ಲಿದ್ದರೂ ಶ್ರಾವಕಿಯಾದಳು. ಒಂದು ಕಡೆ ಸಂಸಾರ, ಇನ್ನೊಂದು ಕಡೆ ಶ್ರಾವಕಿ ಇವೆರಡೂ ಆಕೆಯಲ್ಲಿ ನಡೆದಿದ್ದಿರಬಹುದಾದ ಘರ್ಷಣೆ ಯನ್ನು ಹೇಳುತ್ತದೆ.

ಅತ್ತಿಮಬ್ಬೆ ಜೈನಧರ್ಮದ ಇಳಿಮುಖವಾದಂತಹ ಸಮಯದಲ್ಲಿ ಅದರ ಉನ್ನತಿಗಾಗಿ ಶ್ರಮಿಸಿದಳು. ಆಕೆ ಕೈಗೊಂಡ ಸಾಮಾಜಿಕ ಕಾರ್ಯಗಳು ಇಲ್ಲಿ ಮುಖ್ಯವಾದವು. ಮಣಿಕನಕ ಖಚಿತವಾದ ೧೫೦೦ ಜಿನಪ್ರತಿಗಳನ್ನು ಮಾಡಿಸಿ ದಾನ ಮಾಡಿದಳಂತೆ, ಒದೊಂದಕ್ಕೂ ಮಣಿಯ ಘಂಟೆ, ಮೇಲ್ಕಟ್ಟು, ದೀಪಮಾಲೆ, ರತ್ನತೋರಣ ಮೊದಲಾದ ಕಣ್ಣು ಕೋರೈಸುವ ಬೆಲೆಬಾಳುವ ಪರಿಕರ! ಶಾಸ್ತ್ರದ ಮೇರೆಗೆ ಒಂದು ಸಾವಿರ ಪ್ರತಿಮೆಗಳನ್ನು ಮಾಡಿಸಿದ್ದರೇ ಸಾಕಿತ್ತು. ಆದರೆ ಇನ್ನೂ ಐನೂರನ್ನು ಅಧಿಕವಾಗಿ ಮಾಡಿಸಿದ ಆಕೆಯ ಧರ್ಮನುರಾಗವನ್ನು ರನ್ನನು ಕೊಂಡಾಡುತ್ತಾನೆ(ಅ.ಪು. ೧-೫೭-೯). ಅಂದರೆ ಈ ಎಲ್ಲಾ ಪ್ರತಿಮೆಗಳನ್ನು ಮಾಡಿಸಲು ಶಿಲ್ಪಿಗಳಿಗೆ ಆಕೆ ಒದಗಿಸಿದ ಸೌಲಭ್ಯಗಳನ್ನು ನೆನೆಯಬಹುದು. ಸಾಮಾನ್ಯವಾಗಿ ಒಂದು ಅಥವಾ ಎರಡು ಪ್ರತಿಮೆಗಳನ್ನು ಮಾಡಿಸಬಹುದಾದಂತಹದ್ದೇ ಹೆಚ್ಚಾಗಿರುವಾಗ ಈ ಶಿಲ್ಪಿಗಳಿಗೆ(ಅಕ್ಕಸಾಲಿಗಳಿಗೆ) ಆರ್ಥಿಕವಾಗಿಯೂ ಅವರು ಸುಸ್ಥಿತಿಯನ್ನು ಹೊಂದುವಂತಹ ಸದವಕಾಶವನ್ನು ಅತ್ತಿಮಬ್ಬೆ ಕಲ್ಪಿಸಿದಳೆಂದೇ ಹೇಳಬೇಕು.

ಅತ್ತಿಮಬ್ಬೆ ಸಾವಿರದೈನೂರು ಬಸದಿಗಳನ್ನು ಕಟ್ಟಿಸಿದಳೆಂದು ಅದರಲ್ಲಿ ಲಕ್ಕಿಗುಂಡಿಯಲ್ಲಿ ಕಟ್ಟಿಸಿದ ಬಸದಿಯೇ ಮಿಕ್ಕೆಲ್ಲ ಬಸದಿಗೆ ಕಳಶವಿದ್ದಂತೆ ಎಂದು ಶಾಸನ ವಿವರಿಸುತ್ತದೆ. "ಆ ಸತಿ ಮುಮ್ಮಾಡಿಸಿದಾ ಸಾಸಿರದಯ್ನೂಱು ಬಸದಿಗಿದು ಕಳಶಮೆನಲ್ಬಾಸುರಮಾಯ್ತು ಜಿನೇಂದ್ರಾ ವಾಸಂ ತೊಳಗುವ ಸುವರ್ಣ್ಣಕಳಶೋನ್ನತಿಯಿಂ" (ಬಿ.ಕ.ಇ. I-i, ೫೨; ೧೦೦೭) ಇಷ್ಟೊಂದು ಬಸದಿಗಳನ್ನು ಕಟ್ಟಿಸಲು ಅತ್ತಿಮಬ್ಬೆ ತೆಗೆದುಕೊಂಡ ಪರಿಶ್ರಮ, ಈ ಕಾರಣದಿಂದಾಗಿಯಾದರೂ ಎಷ್ಟೋ ಗಾರೆ ಕೆಲಸ ಮಾಡುವ ಕುಟುಂಬಗಳಿಗೆ ಕೆಲಸ ದೊರೆತಂತಾಗಿ ಅವರಿಗೆ ಸಾಮಾಜಿಕ ವಾಗಿಯೂ, ಆರ್ಥಿಕ ಮುಗ್ಗಟ್ಟಿನಿಂದ ಪಾರಾಗುವ ಅವಕಾಶವು ದೊರೆತು ಇಷ್ಟರಮಟ್ಟಿಗೆ ಸಾಮಾಜಿಕ ಭದ್ರತೆಯನ್ನು, ಕಳಕಳಿಯನ್ನು ವ್ಯಕ್ತಗೊಂಡಿದ್ದಿರಬಹುದಾದ ಅಂಶವಿಲ್ಲಿದೆ.

ಅತ್ತಿಮಬ್ಬೆ ರನ್ನನಿಂದ ಅಜಿತಪುರಾಣವನ್ನು ಬರೆಸಿದಳು. ಹೊಸ ಕಾವ್ಯದ ನಿರ್ಮಾಣಕ್ಕೆ ಮಾತ್ರ ಗಮನಕೊಡಲಿಲ್ಲ. ಹಿಂದಿನ ಕಾವ್ಯಗಳ ಸಂರಕ್ಷಣೆಯನ್ನು ಕೈಕೊಂಡಳು. ಆ ಕಾಲದಲ್ಲಿ ಕೃತಿಯ ಒಂದೊಂದು ಹಸ್ತಪ್ರತಿಯನ್ನು ತೆಗೆಸುವುದೇ ಕ್ಲಿಷ್ಟವಾಗಿದ್ದಂತಹ, ಹಸ್ತಪ್ರತಿಕಾರರು

ಸಿಗಬೇಕಾದರೆ ಕಷ್ಟವೇ ಆಗಿದ್ದಂತಹ ಕಾಲದಲ್ಲಿ, ತನ್ನ ತಂದೆಯ ಧರ್ಮಕಾರ್ಯವನ್ನು ಎತ್ತಿಹಿಡಿಯುವ ಆಶಯ ಹೊಂದಿದ ಅತ್ತಿಮಬ್ಬೆ, ಪೊನ್ನ ಕವಿಯ ಶಾಂತಿಪುರಾಣದ ಒಂದು ಸಾವಿರ ಹಸ್ತಪ್ರತಿಗಳನ್ನು ಮಾಡಿಸಿ ದಾನ ಮಾಡಿದಳು. ರನ್ನನಂತಹ ಒಬ್ಬ ಕವಿಗೆ ಆಶ್ರಯ ವನ್ನು ಕೊಡುವುದೇ ಕಷ್ಟವಾಗಿದ್ದಿರಬಹುದಾದ ಕಾಲದಲ್ಲಿ ರನ್ನನಂತಹ ಎಷ್ಟೋ ಹಸ್ತಪ್ರತಿಕಾರರಿಗೆ ವಸತಿ, ಇನ್ನಿತರ ಸೌಲಭ್ಯವನ್ನು ಆಕೆ ಒದಗಿಸಿದ್ದಿರಬಹುದು. ರನ್ನ ಕವಿ ಹೇಳುವಂತೆ ಆಕೆ ಕೈಗೊಂಡ ಧರ್ಮಕಾರ್ಯ ಆ ಮೂಲಕ ಸಾಮಾಜಿಕ ಕಾರ್ಯವೂ ಆದಂತಾಗಿ, ಇಂತಹ ಸಂಘರ್ಷಪೂರ್ಣವಾದ ಬದುಕನ್ನು ಕಂಡಿದ್ದರಿಂದಾಗಿಯೇ ಇರಬೇಕು. ಮೀಸೆವೊತ್ತ ಅಣ್ಣಂಗಳ್ ಆಕೆಯ ಮುಂದೆ ರಂಜಿಪರೆ? "ಪಿಕ್ಕುವೊಡೆ ಅತ್ತಿಯ ಪಣ್ ಅತ್ತಿಮಬ್ಬೆಯಲ್ಲಿದರ ಗುಣಂ" ಎಂದು ಹೊಗಳಿದ್ದಾನೆ. ಜೈನಧರ್ಮದ ಪತಾಕೆಯನ್ನು ಎತ್ತಿಹಿಡಿದಿದ್ದ ಎಲ್ಲಾ ಪುರುಷರಿಗಿಂತ ಈಕೆ ಮುಂಚೂಣಿಯಲ್ಲಿ ಇದ್ದುದಾಗಿಯೂ ರನ್ನ ಕವಿ ಹೇಳುತ್ತಾನೆ. ಆಧ್ಯಾತ್ಮಿಕ ಸಾಧನೆಯಲ್ಲಿ ತನ್ನದೇ ಪ್ರತ್ಯೇಕವಾದ ನಿಲುವನ್ನು ತಳೆದ ಅಕ್ಕಮಹಾದೇವಿಯನ್ನು ಸ್ವಲ್ಪ ಅವಲೋಕಿಸೋಣ.

ಅಕ್ಕಮಹಾದೇವಿ ಕೌಟುಂಬಿಕ ಚೌಕಟ್ಟಿನಲ್ಲಿದ್ದ ಎಲ್ಲಾ ನಂಬಿಕೆ ಹಾಗೂ ಆಚರಣೆಗಳನ್ನು ನಿರಾಕರಿಸಿದವಳು. ಪತಿಯ ಅಧೀನದಲ್ಲಿಯೇ ಬದುಕಬೇಕೆನ್ನುವ ಸಂಪ್ರದಾಯವನ್ನು ಕಿತ್ತು ಒಗೆದವಳು. ಹಾಗೆಯೇ ಇದಕ್ಕೆ ಪರ್ಯಾಯವಾದ ಹೊಸ ಕುಟುಂಬದ ಸ್ವರೂಪವನ್ನು ತನ್ನ ಅನುಭಾವದ ಆಶಯದಲ್ಲಿ ಕಂಡುಕೊಂಡವಳು. ಆಧ್ಯಾತ್ಮಿಕ ಸಾಧನೆಗೆ 'ಹೆಣ್ಣು' ಮಾಯೆ ಎನ್ನುವ ನಿಲುವನ್ನೇ ಅಲ್ಲಗಳೆದಳು. ಅಕ್ಕಮಹಾದೇವಿ 'ಮಾಯೆ' ಎನ್ನುವ ವಿಷಯವನ್ನೇ ಸ್ತ್ರೀ ಪರವಾಗಿ ಮರುವ್ಯಾಖ್ಯಾನಿಸಿದಳು :

ಪುರುಷನ ಮುಂದೆ ಮಾಯೆ
ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ !
ಸ್ತ್ರೀಯ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ !
ಲೋಕವೆಂಬ ಮಾಯೆಗೆ !
ಶರಣಚಾರಿತ್ರ ಮರುಳಾಗಿ ತೋರುವುದು ನೋಡಾ (ಅ.ವ. ೧೪೭)

ಹೆಣ್ಣು ಹೆಣ್ಣಾದೊಡೆ ಗಂಡಿನ ಸೂತಕ !
ಗಂಡು ಗಂಡಾದೊಡೆ ಹೆಣ್ಣಿನ ಸೂತಕ !
ಮನದ ಸೂತಕಕ್ಕೆ ಹಿಂಗಿದೊಡೆ
ತನುವಿನ ಸೂತಕಕ್ಕೆ ತೆರುವುಂಟೆ ಅಯ್ಯ ?
ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ (ಅ.ವ. ೨೨೯)

ಅಕ್ಕಮಹಾದೇವಿಯ ಮಾತುಗಳಲ್ಲಿ ವೈದಿಕ, ಜೈನಧರ್ಮಗಳು ಹೆಣ್ಣನ್ನು ಆಧ್ಯಾತ್ಮಿಕ ವಲಯ ದಿಂದ ದೂರದಲ್ಲಿಟ್ಟಿದ್ದಂತಹವು. ಹೆಣ್ಣು 'ಮಾಯೆ' ಎನ್ನುವ ಭ್ರಮಾಧೀನ ಕಲ್ಪನೆಯನ್ನೇ ಸಮಾಜದ ಮನಸ್ಸಿನಾಳದಲ್ಲಿ ಹುದುಗಿಸಿಬಿಟ್ಟಿದ್ದವು. ವಚನಕಾರರು ಸ್ತ್ರೀಪರ ಕಾಳಜಿಯನ್ನು

ಮೊಟ್ಟಮೊದಲಿಗೆ ತೋರಿದವರು. ಅವರಲ್ಲಿ ಅಕ್ಕಮಹಾದೇವಿ ಇನ್ನೂ ದಿಟ್ಟೆಯಾಗಿ 'ಮಾಯೆ' ಯೆನ್ನುವ ಪರಿಭಾಷೆಯನ್ನೇ ಪ್ರಶ್ನಿಸಹೊರಡುತ್ತಾಳೆ. ಹೆಣ್ಣು ಗಂಡಿನ ಪಾಲಿಗೆ ಮಾಯೆಯಾಗುವು ದಾದರೆ, ಗಂಡು ಹೆಣ್ಣಿನ ಪಾಲಿಗೆ ಯಾಕೆ ಮಾಯೆ ಅಲ್ಲ? - ಎಂಬ ದೃಷ್ಟಿಕೋನವು ಸ್ತ್ರೀಪರ ವಾದ ಒಂದು ಪ್ರತಿಕ್ರಿಯೆಯಾಗಿದೆ. ಹಾಗೆಯೇ ಸ್ತ್ರೀಗೂ ಅಸ್ತಿತ್ವವಿದೆ. ಪುರುಷನಂತೆ ಆಕೆಯೂ ಆಧ್ಯಾತ್ಮಿಕ ಸಾಧನೆಯಲ್ಲಿ ಮುನ್ನೆಡೆಯುವ ಸ್ವಾತಂತ್ರ್ಯವಿದೆ ಎಂಬುದನ್ನು ಸ್ವತಃ ಸಾಧಿಸಿ ತೋರಿಸಿದಳು. ಪುರುಷ ಆಧ್ಯಾತ್ಮಿಕ ಸಾಧನೆಗಾಗಿ ಕಟ್ಟಿಕೊಂಡ ಸ್ತ್ರೀಯನ್ನು ಬಿಟ್ಟು ಹೋದರೆ ಅದು ವೈರಾಗ್ಯವೆಂದೆನಿಸುತ್ತದೆ. ಆದರೆ ಸ್ತ್ರೀ ತನ್ನ ಆಧ್ಯಾತ್ಮ ಸಾಧನೆಗಾಗಿ ಗಂಡನನ್ನು ತೊರೆಯು ವುದು ವೈರಾಗ್ಯವೇಕಾಗುವುದಿಲ್ಲ? ಸಮಾಜ ಸೃಷ್ಟಿ ಮಾಡಿದಂತಹ ಇಂತಹ ತಾರತಮ್ಯ ಭಾವಗಳನ್ನು ಕಡೆಗಣಿಸಿದಳು. ಸ್ತ್ರೀಯು ಪುರುಷನ ಅಧೀನದಲ್ಲಿ ಬದುಕಬೇಕಾದ ಅವಸ್ಥೆಗಳನ್ನು ಸಂಪೂರ್ಣವಾಗಿ ನಿರಾಕರಿಸುತ್ತಾಳೆ.

ಅತ್ತಿಮಬ್ಬೆ ಮತ್ತು ಅಕ್ಕಮಹಾದೇವಿಯರು ಧರ್ಮ ಮಾರ್ಗದಲ್ಲಿ, ಆಧ್ಯಾತ್ಮಿಕೋನ್ನತಿಯಲ್ಲಿ ಮೇಲುಗೈಯನ್ನು ಸಾಧಿಸಿದವರು. ಯಾವ ಧರ್ಮ, ಸಮಾಜಗಳು ಸ್ತ್ರೀಯ ಅಸ್ತಿತ್ವದ ಬಗ್ಗೆ ಭಿನ್ನ ನಿಲುವನ್ನು ತಳೆದಿದ್ದವೋ ಅಲ್ಲಿಯೇ ನಿಂತು ಆ ಧರ್ಮ, ಸಮಾಜಗಳಿಗೆ ಈ ಇಬ್ಬರೂ ಸ್ತ್ರೀಯರೂ ಸಾಧನೆಗೈದು ಪುರುಷರಿಗಿಂತ ಎತ್ತರಕ್ಕೆ ಏರಿದ್ದಾರೆ.

• • •

೧೭

# ದಲಿತ ಬಂಡಾಯ ಸಾಹಿತ್ಯ : ಜಾತಿ, ಲಿಂಗತ್ವ

ಡಾ. ಸುಕನ್ಯಾ ಹಾವನೂರ

ಆಧುನಿಕ ಕಾಲಘಟ್ಟದ ಸ್ವಾತಂತ್ರ್ಯೋತ್ತರ ದಶಕಗಳಲ್ಲಿ ಮಧ್ಯಮ ವರ್ಗ ಹಾಗೂ ಕೆಳವರ್ಗದ ಜನತೆಗೆ ದೊರೆತ ಶಿಕ್ಷಣಾವಕಾಶಗಳು ಹಾಗೂ ಸಾಮಾಜಿಕ ಆಂದೋಲನಗಳು ಆ ಮೂಲಕ ಹುಟ್ಟಿದ ಚರ್ಚೆಗಳು ಅರಿವಿನ ಸ್ಫೋಟಕ್ಕೆ ಕಾರಣವಾದವು. ಸಾಹಿತ್ಯದಲ್ಲಿ ರಸಾಸ್ವಾದನೆಯ ಪ್ರವೃತ್ತಿಯನ್ನು ಹಿಂದೆ ಸರಿಸಿ ಸೈದ್ಧಾಂತಿಕ ವಿಸ್ತರಣೆಗೆ ಅನುವುಮಾಡಿಕೊಟ್ಟವು. ಶೂದ್ರರು ಬರವಣಿಗೆಯ ಮೂಲಕ ತಾವು ಅನುಭವಿಸುತ್ತ ಬಂದಿರುವ ಶೋಷಣೆಯ ನಾನಾ ಸ್ತರಗಳನ್ನು ಮತ್ತು ವಾಸ್ತವತೆಯ ಭೀಕರತೆಯನ್ನು ಓದುಗರಿಗೆ ಕಾಣಿಸತೊಡಗಿದರು. ಶೋಷಣೆಯ ಮೂಲ ಮತ್ತು ಅದರ ಸೂಕ್ಷ್ಮರೂಪಗಳನ್ನು ಕಂಡುಕೊಳ್ಳುವ ರೀತಿಯಲ್ಲಿಯೇ ಶೋಷಿತ ಪ್ರಜ್ಞೆಯ ವಿಕಾಸದ ಗತಿಯನ್ನು ಗುರುತಿಸತೊಡಗಿದರು. ಶೋಷಿತ ವ್ಯಕ್ತಿಗೂ ಒಂದು ವ್ಯಕ್ತಿತ್ವವಿದೆ, ಸ್ವಾಭಿಮಾನವಿದೆ ಮತ್ತು ಸ್ಥಿರರೂಪವನ್ನು ಧಿಕ್ಕರಿಸಿ ಬೆಳೆಯಬಲ್ಲ ಕ್ರಿಯಾಶೀಲತೆ ಇದೆಯೆಂಬುದನ್ನು ಕಲಾಕೃತಿಗಳಲ್ಲಿ ದಾಖಲಿಸುವ ಪ್ರಯತ್ನಕ್ಕೆ ಚಾಲನೆ ನೀಡಿದರು. ಇಂತಹ ಮಾದರಿ ಅಧ್ಯಯನಕ್ಕಾಗಿ ಪ್ರಸ್ತುತ ಟಿಪ್ಪಣಿಯಲ್ಲಿ ದೇವನೂರು ಮಹಾದೇವ ಮತ್ತು ಬರಗೂರು ರಾಮಚಂದ್ರಪ್ಪ ಅವರ ಪ್ರಾತಿನಿಧಿಕ ಕೃತಿಗಳನ್ನು ಆಧರಿಸಿ ಚರ್ಚೆಯನ್ನು ಬೆಳೆಸಲಾಗಿದೆ.

ದಬ್ಬಾಳಿಕೆಯ ಪ್ರತಿರೂಪವಾಗಿರುವ ಕುರಿಯಯ್ಯನ ಸ್ಥಿತಿಯನ್ನು ದಾಟಿ ಹೋಗಿ ಪ್ರಚಂಡ ಕ್ರಿಯಾಶೀಲತೆ ಮತ್ತು ಜೀವನೋತ್ಸಾಹಗಳಲ್ಲಿ ಬದುಕಿನ ಅರ್ಥವಂತಿಕೆಯನ್ನು ಕಾಣುವ ದೇವನೂರರ ಅಮಾಸ ಕಥೆಯ ಅಮಾಸ ಮೇಲಿನ ಆಶಯದ ಪ್ರತೀಕನಾಗಿದ್ದಾನೆ. ಹುಲಿವೇಷದ ಮೂಲಕ ನೈಸರ್ಗಿಕ ಕಲಾವಂತಿಕೆಯ ಚೆಲುವನ್ನು ಪ್ರಕಟಿಸಲು ಆತ ಸಮರ್ಥವಾಗಿರುವಂತೆ ದೊಡ್ಡ ಗೌಡರಿಂದ ಇನಾಮು ಪಡೆದು; ಅವರ ನಿದ್ದೆಗೆಡಿಸಲು, ಭಯ ಹುಟ್ಟಿಸಲು ಸಮರ್ಥನಾಗಿದ್ದಾನೆ. ಕಲಾರೂಪದ ಅಮೂರ್ತತೆ ಹುಲಿ ವೇಷದ ನೈಜತೆಗೆ ಪರಿವರ್ತಿತವಾಗಿ ಒಂದಲ್ಲ ಒಂದು ದಿನ ಪ್ರತಿಭಟನೆ ಧ್ವನಿಯಾಗಿ ಸ್ಫೋಟವಾಗಬಲ್ಲ ಕ್ರಿಯೆಗೆ ಮುನ್ಸೂಚನೆಯಾಗಿದೆ.

ಲಾಗಾಯ್ತಿನ ಶೋಷಣೆಯಿಂದ (ಅಮಾಸನು ಗೌಡನ ವ್ಯಭಿಚಾರಕ್ಕೆ ಹುಟ್ಟಿ, ತಬ್ಬಲಿಯಾದ ನೆಂಬುದನ್ನು ಗಮನಿಸಬೇಕು) ಹುಟ್ಟುವ ಭಯ, ಅಪರಾಧ ಪ್ರಜ್ಞೆ, ಭೂಮಾಲಿಕ ವರ್ಗದ ಸ್ವಭಾವದಲ್ಲುಂಟಾದ ವ್ಯತ್ಯಾಸದ ಸಂಕೇತವಾಗಿರುವಂತೆ ಸಂಘರ್ಷಕ್ಕೆ ಸಿದ್ಧವಾಗಬೇಕಾದ ಸ್ಥಿತಿಯ ಚಿತ್ರಣವೂ ಆಗಿದೆ. ಇಂಥ ಸಂಘರ್ಷದ ಮುಂದುವರಿಕೆ ಅಮಾಸನಂಥವನನ್ನು ಕಂದನನ್ನಾಗಿ ಪಡೆಯಬೇಕೆಂಬ ಬಂಗಾರಿಯ ಹಂಬಲದಲ್ಲಿದೆ. ತಮಟೆ ಬಾರಿಸಿದಾಗ ಎಲ್ಲಾ ಹುಡುಗರಿಗಿಂತ ಚೆನ್ನಾಗಿ ಹೆಜ್ಜೆ ಹಾಕಬಲ್ಲ ಅಮಾಸ ಮಠ ಬೆಲ್ಲು ಹೊಡೆದಾಗ ತಟ್ಟೆ ಗ್ಲಾಸು ತೆಗೆದುಕೊಂಡು ಕತ್ತಲು ಕಲುಕುವಂತೆ ಓಡಬಲ್ಲವನಾಗಿದ್ದಾನೆ. ಈ ಅಮಾಸ ಇನ್ನಷ್ಟು ಚತುರ ನಾಗುವ ಸೂಚನೆ ದೇವನೂರರ ಕುಸುಮ ಬಾಲೆಯಲ್ಲಿ ಸಿಗುತ್ತದೆ. ಮುಟ್ಟುಕೂತ ಊರ ಹುಡುಗಿಯರ ಸೀರೆಗಳನ್ನು ಸೈಕಲ್ಲಿನಲ್ಲಿ ತೆಗೆದುಕೊಂಡು ಹೋಗಿ ಮಾರಬಲ್ಲ ಚತುರತೆ, ಆಚಾರ್ಯರ ಮಗಳು ಭಗವತಿಯನ್ನು ಕನಸಿನಲ್ಲಿ ಕಂಡು ಅಪ್ಪಿಕೊಳ್ಳುವ ಅಮಾಸನ ಹಂಬಲಿಕೆ ಗಳಲ್ಲಿ ಶಿಕ್ಷಣ, ಉದ್ಯೋಗಗಳು ದಲಿತರ ಬದುಕಿನಲ್ಲಿ ತರಬಲ್ಲ ಸಾಮಾಜಿಕ ಚಲನೆಯ ಸಂಕೇತವೆ ಆಗಿವೆ. ತಾನು ಶೋಷಿತನೆಂಬ ಅರಿವು ಆ ಶೋಷಣೆಗೆ ಮೂಲವಾಗಿರುವಂಥ ಬಂಡವಾಳಶಾಹಿ ಅಧಿಕಾರಶಾಹಿಯ ಹಿಡಿತವನ್ನು ಗುರುತಿಸಿಕೊಳ್ಳುವ ಸೂಕ್ಷ್ಮತೆಯನ್ನು ದಲಿತ ಬಂಡಾಯ ಕಥೆ ಕಾದಂಬರಿಗಳು ದಾಖಲಿಸಿರುವುದು ಪ್ರಮುಖ ಸಂಗತಿಯೇ ಆಗಿದೆ. ಇಂಥ ದ್ದೊಂದು ಸಂವೇದನೆಯ ವಿಕಾಸ ಚಾರಿತ್ರಿಕ ಬೆಳವಣಿಗೆಯ ಹಾದಿಯಲ್ಲಿನ ಅರಿವಿನ ಸ್ಫೋಟಕ್ಕೆ ಸಂಬಂಧಿಸಿದ್ದಾಗಿದೆ. ಶ್ರೀಮಂತರ ಕೈಯಲ್ಲಿ ಸಿಕ್ಕು ಬಳಲುವ ಆರ್ಥಿಕ, ಸಾಮಾಜಿಕ ವ್ಯವಸ್ಥೆ ಯಲ್ಲಿ ತಮ್ಮನ್ನು ಮಾರಿಕೊಳ್ಳುವ (ದೇವನೂರರು ಮಾರಿಕೊಂಡವರು) ತಮಗರಿವಿಲ್ಲದಂತೆ ಶ್ರಮ ಶೋಷಣೆಗೆ ಒಳಗಾಗುವುದನ್ನು ದೇವನೂರರ ಕಥೆ ಗಮನ ಸೆಳೆಯುತ್ತಾ, ಊಳಿಗಮಾನ್ಯ ವ್ಯವಸ್ಥೆ ಯಡಿ ಮಾನವೀಯತೆ ನಲುಗಿಹೋಗುವ ದುರಂತದ ಕಡೆಗೆ ಕೆಲವು ಕಥೆಗಳು ಮುಖಮಾಡಿವೆ.

ಜಾತಿ ಸಂಘರ್ಷದೊಂದಿಗೆ ವರ್ಣಸಂಕರವೂ ಕೂಡ ದೇವನೂರರ ಕೃತಿಗಳ ಪ್ರಮುಖ ಆಶಯವಾಗಿರುವುದನ್ನು ಕುಸುಮಬಾಲೆ ಸಾಬೀತುಪಡಿಸುತ್ತದೆ. ಕುಸುಮಳ ಮಗು ಹೊಲೆಯ ಯುವಕ ಚೆನ್ನನಿಗೆ ಹುಟ್ಟಿದ್ದು, ಆಕೆಯ ಗಂಡು ಮಗುವಿನ ಮುಖ ನೋಡಿದವ ಮತ್ತೆ ಅವಳನ್ನು ತನ್ನ ಮನೆಗೆ ಸೇರಿಸಿಕೊಳ್ಳುವುದಿಲ್ಲ. ಕುಸುಮ ಮತ್ತು ಚೆನ್ನ ಪ್ರತಿನಿತ್ಯ ಕೊಡುತ್ತಿದ್ದ ಜೋಪಡಿಯ ಜೋತಮ್ಮಳ (ಸಿಂಗಾರಮ್ಮ) ಬಾಯಲ್ಲಿ ಕತೆಯ ಆರಂಭದಲ್ಲೆ ಈ ಕುರಿತು ಪ್ರಸ್ತಾಪ ಬರುತ್ತದೆ ಮಾತ್ರವಲ್ಲ ಕೊನೆಯಲ್ಲಿ ಈಕೆ ಆ ಜಾಗದಲ್ಲಿ ಚೆನ್ನನ ಜೀವ ತೆಗೆದುದನ್ನು ಸ್ಮರಿಸಿಕೊಳ್ಳುತ್ತಾ ಸಾಯುತ್ತಾಳೆ.

ಅಂತರ್‌ಜಾತಿಯ ವಿವಾಹದ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಿದರೂ ಇದ್ದಕ್ಕಿದ್ದಂತೆ ಇಪ್ಪತ್ತರ ಹರೆಯದ ತನ್ನ ಅವಿವಾಹಿತ ಮಗಳ ನೆನಪು ಬಂದು ಅವರು ಇಳಿದನಿ ತೆಗೆಯುವುದು; ಒಂದೋ, ಪ್ರಸ್ತುತ ಆರ್ಥಿಕ ಸಾಮಾಜಿಕ ಸವಾಲುಗಳ ಹಿನ್ನೆಲೆಯಲ್ಲಿ ಸ್ವಂತ ಆಚಾರ್ಯರಂಥವರೂ ಅಂತರ್‌ಜಾತಿಯ ವಿವಾಹವನ್ನು ಅಂಗೀಕರಿಸಲೇಬೇಕಾದ ಅನಿವಾರ್ಯ ಸ್ಥಿತಿಯಿದ್ದು ಅದನ್ನು ಅವರು ಸೂಕ್ಷ್ಮವಾಗಿಯಾದರೂ ಸಂವೇದಿಸಿಕೊಂಡಿದ್ದಾರೆ. ಅವರ ಮಗಳು ಸಹ ತನ್ನ ವಯಸ್ಸಿಗೆ

ಸಹಜವಾದ ಬಯಕೆಗಳನ್ನು ಜಾತಿಭೇದವಿಲ್ಲದೆ ತೀರಿಸಿಕೊಳ್ಳುತ್ತಿರುವುದರ ಸುಳಿವು ಅವರಿಗೂ ಹತ್ತಿದೆ ಎಂಬುದನ್ನು ಅಭಿವ್ಯಕ್ತಿಸಲಾಗಿದೆ. ಹೊಲೆಯರ ಹುಡುಗ ಅಮಾಸನಂತೂ ತನ್ನ ಪಂಚಾಂಗದ ಪ್ರಕಾರವಾಗಿ ತಿಂಗಳಿಗೊಮ್ಮೆ ಹೊರಗೆ ಕೂರುವ ಹುಡುಗಿಯರ ಬಟ್ಟೆಗಳ ಸಂಗ್ರಹವೂ ಸಹ ಆಶಯದಲ್ಲಿ ವರ್ಣಸಂಕರವೇ ಆಗಿದೆ ಎನ್ನಬಹುದು.

ಹೊಸ ಆರ್ಥಿಕ ಶಕ್ತಿಗಳ ಒತ್ತಡದಿಂದಾಗಿ ವರ್ಣದ್ವೇಷ ತನ್ನ ತೀವ್ರತೆಯನ್ನು ಕಳೆದುಕೊಳ್ಳುತ್ತಿರುವುದರ ಸೂಚನೆ ಕಾದಂಬರಿಯಲ್ಲಿದೆ. ಅಂದರೆ ವರ್ಣದ್ವೇಷದ ವಿಷಯದಲ್ಲಿ ಇತ್ಯಾತ್ಮಕ ಮತ್ತು ನೇತ್ಯಾತ್ಮಕ ಎರಡೂ ಬಗೆಯ ಪ್ರತಿಕ್ರಿಯೆಗಳನ್ನು ಸವರ್ಣೀಯ ಸಮಾಜ ಹೊಂದಿರುವುದನ್ನು ಗುರುತಿಸುವುದರೊಂದಿಗೆ ಎರಡು ಪ್ರತಿಕ್ರಿಯೆಗಳೊಳಗಣ ಸಂಘರ್ಷದ ಸ್ವರೂಪವನ್ನೂ ಮನಗಾಣಿಸಲಾಗಿದೆ. ದಲಿತ ಸಂಘರ್ಷ ಸಮಿತಿ ಹುಟ್ಟುಹಾಕಿದ ಹೊಸ ಸಾಮಾಜಿಕ ಮತ್ತು ರಾಜಕೀಯ ಅರಿವು ದಲಿತ ವ್ಯಕ್ತಿಯನ್ನು ತನ್ನ ಜನಾಂಗದ ಮಾದರಿಯಾಗಿ ತನ್ನನ್ನು ತಾನು ಗುರುತಿಸಿಕೊಳ್ಳುವಲ್ಲಿ ಹಾಗೂ ಪ್ರಚಂಡ ಆತ್ಮವಿಶ್ವಾಸ ಕುದುರಿಸುವಲ್ಲಿ ಸಾರ್ಥಕವಾಗಿದೆ.

ಒಟ್ಟಾರೆ ಅವಕಾಶ ಹೀನರು ತಮ್ಮ ಏಳ್ಗೆಗಾಗಿ ಮೇಲೆದ್ದು ನಿಲ್ಲುತ್ತಿರುವ ಸೂಚನೆಗಳನ್ನು ಅವರ ಕಥೆಗಳು ಕಾದಂಬರಿಗಳು ಕೊಡುತ್ತವೆ. ದೇವನೂರರ ಕಥೆ, ಕಾದಂಬರಿಗಳ ಹೆಚ್ಚಿನ ಕಥಾನಾಯಕರು ಬಂಡಾಯ ಪ್ರಜ್ಞೆಯ ವಿಕಾಸವನ್ನು ಸೂಚಿಸುವವರೆ ಆಗಿದ್ದಾರೆ. ಅಮಾಸ ತನ್ನ ಹುಲಿವೇಷದ ಮೂಲಕ ಗೌಡರ ನಿದ್ದೆಗೆಡಿಸುವ, ಒಡಲಾಳದ ಗುರುಸಿದ್ಧ ಪೊಲೀಸ್ ಇನ್ಸ್‌ಪೆಕ್ಟರನನ್ನು ದುರುಗುಟ್ಟಿ ನೋಡುವ ಪ್ರತಿಭಟನೆಯ ಮನಸ್ಸುಳ್ಳವರಾಗಿದ್ದಾರೆ. ಕುಸುಮ ಬಾಲೆಯ ಗುರುಸಿದ್ಧ ಮಾವನಂತೂ ಮೇಲುವರ್ಗದವರ ದಬ್ಬಾಳಿಕೆಯನ್ನು ನಿರ್ವೀರ್ಯ ಗೊಳಿಸುವ ಧೀರ ಎದುರಾಳಿಯನ್ನಾಗಿ ಕಡೆದು ನಿಲ್ಲಿಸಲಾಗಿದೆ. ಶತಮಾನದ ಹತಾಶೆಗೆ ಆತ್ಮಶಕ್ತಿ ತುಂಬಿ ಪ್ರತಿಭಟನೆಗೆ ಸಜ್ಜಾದಾಗಿನಿಂದ ಇಂಥ ಪಾತ್ರಗಳು ಕಥೆಯ ಒಳಗೆಲುವಿಗೆ ಹೇಗೆ ಸಂಕೇತವೋ ಹಾಗೆಯೇ ಹೊರಗಿನ ಸೈದ್ಧಾಂತಿಕ ಗೆಲುವಿಗೂ ಸಂಕೇತವಾಗಿವೆ. ಜಾತಿ ಕೇಂದ್ರಿತ ಸಾಮಾಜಿಕ ವ್ಯವಸ್ಥೆ, ದಬ್ಬಾಳಿಕೆಯನ್ನು ಅಸಹನೆ ಸಂಘರ್ಷಕ್ಕೆ ಕಾರಣವಾಗುವಂತೆ ವರ್ಗ ಸಂಘರ್ಷದ ಕಡೆಗೆ ದಾಟುತ್ತಿರುವ ಸಮಾಜದ ಚಾರಿತ್ರಿಕ ಮುನ್ನಡೆಯ ನೋಟಗಳು ಸಮಕಾಲೀನ ಕಥೆ-ಕಾದಂಬರಿಗಳಲ್ಲಿ ಸಿಗುತ್ತವೆ. ಒಡಲಾಳದ ಇನ್‌ಸ್ಪೆಕ್ಟರ್ ಪುಟ್ಟಗೌರಿಯ ಗಲ್ಲವನ್ನು ರೂಲಕೋಲಿನಿಂದ ಸವರುತ್ತಿದ್ದಾಗ ಗುರುಸಿದ್ದ ಅವನನ್ನು ದುರುಗುಟ್ಟಿ ನೋಡುವುದು (ಪುಟ. ೪೭-೪೮) ಕುಸುಮ ಬಾಲೆಯಲ್ಲಿ ಎಳನೀರು ಕದ್ದದ್ದಕ್ಕಾಗಿ ಗುರುಸಿದ್ಧ ಮಾವನಿಗೆ ಕಟ್ಟಿಹಾಕಿ ಊರಿನವರು ಹೊಡೆಯುವಾಗ ಆ ಕುಟ್ಟಾಕಿಸಿಕೊಂಡ ಅವನ ದೇಹವು ಹೊಡೆಯುವವರ ಕಯ್ಗಳನ್ನು ನೋಯುಸ್ತ ಹಾಗಾಗಿ ನೊಂದ ಕಯ್ಗಳಿಗೆ ವಿಶ್ರಾಂತಿಕೊಡೂ ಸಲುವಾಗಿ ಪ್ರತಿ ಹೊಡ್ತದ ರೌಂಡನ ನಡುವೆಯೂ ಡೈಲಾಗ್ ನಡೆಯುತ್ತಿತ್ತು... ಮುಂತಾದ ವಿವರಗಳಲ್ಲಿ ಮೇಲಿನ ಮಾತುಗಳಿಗೆ ಸಮರ್ಥನೆ ಸಿಗುತ್ತದೆ.

ಹೀಗೆ ದಲಿತ ಜಗತ್ತಿನ ನಾನಾ ರೀತಿಯ ಮುಖಗಳು, ವಾಸ್ತವತೆಯನ್ನು ಓದುಗರ ಮುಂದೆ ನಿಲ್ಲಿಸುವ ದೇವನೂರರು ಹೆಣ್ಣು ಗಂಡು ಎಂಬ ಲಿಂಗಗಳ ಕುರಿತು ತಮ್ಮ ಸಾಹಿತ್ಯದಲ್ಲಿ ಹೀಗೆ

ಗ್ರಹಿಸಿದ್ದಾರೆ ಎನ್ನುವುದಕ್ಕೆ ಕೋದಂಡ ರಾಮ ಅವರು ದೇವನೂರರ ಸಾಹಿತ್ಯ ಕೃತಿ ಕುರಿತು ಮಾಡಿದ ವಿಮರ್ಶೆಯನ್ನು ಉಲ್ಲೇಖಿಸಬಹುದು. ಮಾರಿಕೊಂಡವರು ಕಥೆಯಲ್ಲಿ ನಿರೂಪಣೆ ಏಕಮುಖವಾಗಿದೆ. ಬೀರನ ಸದ್ಯದ ವಿವರಗಳು ಅಥವಾ ಆಲೋಚನೆಯೇ ಪ್ರಧಾನವಾಗಿ ಲಕ್ಷ್ಮೀ ಹಿಂದೆ ಸರಿಯುತ್ತಾಳೆ. ಇಲ್ಲಿ ದೇವನೂರ ಅವರಿಗೆ ಹೆಣ್ಣು ಮತ್ತು ಲೈಂಗಿಕತೆಯ ಆಯಾಮ ಪ್ರಮುಖವಾಗಿರುವಂತೆ ಲಕ್ಷ್ಮಿ ಹೆಣ್ಣಾಗಿದ್ದುಕೊಂಡು ಏನನ್ನು ಮಾರಿದಳು ಎನ್ನುವುದಕ್ಕಿಂತ ಗಂಡಾಗಿರುವ ಬೀರ ಏನನ್ನು ಎದುರಿಸಿದ ಮತ್ತೆ ಹೇಗೆ ಎದುರಿಸಿದ ಎನ್ನುವುದು ಮುಖ್ಯವಾಗುತ್ತದೆ. ಬೀರನ ಗಂಡು ಪ್ರಧಾನ ಆಲೋಚನಾ ಹಿನ್ನೆಲೆಯಲ್ಲಿ ಸಾಗುವ ಕಥೆ ಲಕ್ಷ್ಮಿ ಹೆಣ್ಣೆಂದು ಧಾರಣೆಯಾಗುವುದಕ್ಕಿಂತ ಹೆಂಡತಿಯಾಗಿ ಅಸ್ತಿತ್ವ ಪಡೆಯುತ್ತಾಳೆ. ಇಲ್ಲಿ ಬೀರ ತನ್ನ ಹೆಂಡತಿಯನ್ನು ರಕ್ಷಿಸುತ್ತಾನೆ ಅಥವಾ ಹಾಗೆ ನಟಿಸುತ್ತಾನೆ. ಮುಖ್ಯವಾಗಿ ಅವನ ಅಂತರಂಗಕ್ಕೆ ಇಳಿದಿರುವುದು ಲಕ್ಷ್ಮಿಯ ಸಂಗಾತಿತನವಲ್ಲ, ಕಿಟ್ಟಪ್ಪ ಪ್ರತಿದಿನ ಉಣಬಡಿಸುವ ಬಾಡೂ ಮತ್ತು ಕುಡಿತಗಳು ಅವನ ಎಲ್ಲ ದೈನಂದಿನ ಚಟುವಟಿಕೆಗಳನ್ನು ಹಿಡಿದಿಟ್ಟಿವೆ. ಪುರುಷ ಪ್ರಧಾನ ವ್ಯವಸ್ಥೆಯೊಳಗೆ ಇರುವ ಲಕ್ಷ್ಮಿಯ ಆಲೋಚನಾ ಕ್ರಮ ಬೀರನ ಆಲೋಚನೆಗೆ ಪೂರಕವಾಗಿ ಕಾಣಿಸಿಕೊಂಡರೂ ಅದರ ನಡುವೆಯೊಳಗೆ ತನ್ನ ಪರದಾಟದ ನಡೆಗಳನ್ನು ಅವಲೋಕಿಸಿಕೊಳ್ಳುತ್ತಾಳೆ. ಅದು ಅವಳು ವರ್ತಿಸುವ ರೀತಿಯಲ್ಲಿ ವ್ಯಕ್ತವಾಗುತ್ತದೆ. ಹೆಣ್ಣಿನಂಥ ಬಹುಸೂಕ್ಷ್ಮ ಜೈವಿಕ ಘಟಕವೊಂದು ಬೀರನ ಆಲೋಚನೆಯಲ್ಲಿ ಹೆಂಡತಿಯನ್ನು ಭದ್ರಪಡಿಸಿಕೊಳ್ಳಬೇಕೆಂಬುದರಲ್ಲಿದೆ. ಲಕ್ಷ್ಮಿ ಗಂಡಿನ ಸಂದರ್ಭದಲ್ಲಿ ತನ್ನನ್ನು ಬಿಡುಗಡೆಗೊಳಿಸಿಕೊಂಡು ಗಂಡಿಗಿರುವ ಸ್ತ್ರೀ ಕೇಂದ್ರಿತ ಏಕಸ್ವಾಮ್ಯವನ್ನು ಒಡೆಯಲು ಉದ್ದೇಶಪೂರ್ವಕ ಪ್ರಯತ್ನ ಮಾಡದೆಯೇ ಮುಂದುವರೆಯುತ್ತಾಳೆ. ಬೀರನ ಸಂಗಕ್ಕಿಂತ ಕಿಟ್ಟಪ್ಪನ ಸಂಗದಲ್ಲಿ ಲಕ್ಷ್ಮಿ ಅರಳುವುದು ಇದೇ ಕಾರಣಕ್ಕಾಗಿ. ಕಿಟ್ಟಪ್ಪ ಕೊಟ್ಟ ರಗ್ಗನ್ನು ಬೀರನಿಂದ ಕಿತ್ತುಕೊಳ್ಳುವಾಗ ವ್ಯಕ್ತವಾಗುವ ಪ್ರೀತಿ ಮತ್ತು ಉಲ್ಲಾಸ ಕಿಟ್ಟಪ್ಪನ ಪರವಾಗಿದೆ. ಅಂದರೆ ಲಕ್ಷ್ಮಿಯಂತ ಅವಿದ್ಯಾವಂತ ಹೆಣ್ಣು ವ್ಯವಸ್ಥೆಯ ರೀತಿ ರಿವಾಜುಗಳ ಅರಿವಿಲ್ಲದ ತನಗೆ ಸರಿ ಕಾಣುವ ದಿಕ್ಕಿನತ್ತ ಚಲಿಸುತ್ತಾಳೆ. ಆದರೆ ಕಿಟ್ಟಪ್ಪ ಲಕ್ಷ್ಮಿಯನ್ನು ಯಾಕೆ ಇಷ್ಟಪಡುತ್ತಾನೆ ಮತ್ತು ಗಂಡನಿದ್ದೂ ಲಕ್ಷ್ಮಿ ಬೇರೊಂದು ಗಂಡಿಗೆ ಒಲಿಯುವುದು ಮುಖ್ಯವಾಗಿದೆ. ಈಗಾಗಲೇ ಕನ್ನಡ ವಿಮರ್ಶೆ ಗುರುತಿಸುವಂತೆ ಕಿಟ್ಟಪ್ಪನ ಶೋಷಣೆಯಾಗಲಿ, ಬೀರನ ಅಸಹಾಯಕತೆಯಾಗಲಿ ಮುಖ್ಯವಾಗುವುದಿಲ್ಲ. ಇವರಿಬ್ಬರ ಸಂದರ್ಭದಲ್ಲಿ ಲಕ್ಷ್ಮಿ ಪ್ರತಿಕ್ರಿಯೆ ಮುಖ್ಯವಾಗದೆ ವರ್ಗ, ಜಾತಿ ಶೋಷಣೆಗಳೇ ಅರ್ಥ ಪಡೆದುಕೊಳ್ಳುತ್ತವೆ ಎಂಬುದನ್ನು ಈ ಕಥೆಯಲ್ಲಿ ಗಮನಿಸಿದಾಗ ಇಲ್ಲಿ ಮಹಿಳಾ ಸಂವೇದನೆಗಿಂತ ಜಾತಿ ಸಂವೇದನೆ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ.

ದೇವನೂರ ಮಹಾದೇವ ಅವರ ಕುಸುಮ ಬಾಲೆಯಲ್ಲಿ ಮಹಿಳಾ ಪಾತ್ರಗಳು ಹೆಚ್ಚಾಗಿ ಕಾಣಿಸಿಕೊಂಡರೂ ಅಲ್ಲಿಯು ಮಹಿಳಾ ಸಂವೇದನೆಗಿಂತ ಜಾತಿ ಸಂವೇದನೆ ಹೆಚ್ಚಾಗಿ ಕಂಡು ಬರುತ್ತದೆ ಎಂಬುದಕ್ಕೆ ಅವರ ಕುಸುಮ ಬಾಲೆ ಕಾದಂಬರಿಯ ಬಗ್ಗೆ ಕೋದಂಡರಾಮ ಅವರು ಹೀಗೆ ಅಭಿಪ್ರಾಯಪಡುತ್ತಾರೆ. ಅನಂತಮೂರ್ತಿ ದಲಿತ ಪಾತ್ರಗಳನ್ನು ಬ್ರಾಹ್ಮಣ ಸಂದರ್ಭದಲ್ಲಿ

ದುಡಿಸಿಕೊಳ್ಳುವುದಕ್ಕೂ ದೇವನೂರು ಬ್ರಾಹ್ಮಣ ಪಾತ್ರಗಳನ್ನು ದಲಿತ ಸಂದರ್ಭದಲ್ಲಿ ಅನಾವರಣಗೊಳಿಸಿಕೊಳ್ಳುವುದಕ್ಕೂ ಯಾವುದೇ ವ್ಯತ್ಯಾಸವಿಲ್ಲ. ಅನಂತಮೂರ್ತಿ ಕಣ್ಣಿಗೆ ಕಾಣುವ ಬೆಳ್ಳಿ ದೇವನೂರ ಕಣ್ಣಿಗೆ ಕಾಣುವ ಭಗವತಿ ಇಬ್ಬರೂ ಲೈಂಗಿಕ ಸಂದರ್ಭಕ್ಕೆ ಹೆಚ್ಚು ಆಕರ್ಷಕವಾಗಿ ಕಾಣುತ್ತಾರೆ. ಇದು ಯಾಕೆ ಹೀಗಾಯಿತೆಂದರೆ ಹಿಂದಿನ ಸೇಡನ್ನು ಈಗ ತೀರಿಸಿ ಕೊಳ್ಳಬಹುದೆಂಬ ಒಳ ಒತ್ತಡ ಕಾರಣವಾಗಿರಬಹುದು. ಆದರೆ ದಲಿತ ಹೆಣ್ಣಿಗೆ ಬ್ರಾಹ್ಮಣ ಗಂಡನ್ನು ಆಕರ್ಷಣೆಯಾಗಿ ಒಡ್ಡುವ ಸಾಧ್ಯತೆಯು ದೇವನೂರರಲ್ಲಿ ಸಾಧ್ಯವಾಗಿಲ್ಲ. ಬಹುಶಃ ಅದನ್ನು ಅವರ ಸಾಮಾಜಿಕ ಶಕ್ತಿ ವಿರೋಧಿಸಿರಬಹುದು ಅಥವಾ ಚಲನಶೀಲ ಶಕ್ತಿ ಪಡೆಯುತ್ತಿ ರುವ ದಲಿತ ವರ್ಗ ಸಾಟಿಯಾಗಲಾರದು ಎಂಬ ಪೂರ್ವಗ್ರಹಿಕೆ ಇಲ್ಲಿ ಕೆಲಸ ಮಾಡಿರಬಹುದು. ತನ್ನ ವಿರೋಧಿ ವರ್ಗವನ್ನು ಕೂಡ ಮಾನವೀಯ ಪಾತಳಿಯಲ್ಲಿ ಕಾಣಲಾಗದ ಸಾಹಿತಿ ತನ್ನ ವರ್ಗಕ್ಕೂ ನ್ಯಾಯ ಒದಗಿಸಲಾರ ಎಂಬ ಸಾಮಾನ್ಯ ಸೂತ್ರಕ್ಕೆ ದೇವನೂರರು ಗುರಿಯಾಗುತ್ತಾರೆ.

ಜೋತಮ್ಮ ಕುರಿಯಯ್ಯನನ್ನು ಮೈದುಂಬಿಕೊಂಡು ಹೇಳುವ ನನ್ನಿಯ ಸಾವಿರಾರು ವರ್ಷದ ತಲತಲಾಂತರದ ಕಥೆಯು ಇಡಿ ಕುಸುಮಬಾಲೆ ಪಠ್ಯದಿಂದ ಹೊರಗೆ ನಿತಂತೆ ಕಾಣುತ್ತದೆ. ಉತ್ತಮ ಜಾತಿಯ ಹೆಂಗಸರನ್ನು ಹೊಲೆಯ ಗಂಡಸರು ಹೊತ್ತುಕೊಂಡು ಹೋಗಿ ಲೈಂಗಿಕ ಸಂಬಂಧ ಇಟ್ಟುಕೊಳ್ಳುತ್ತಿದ್ದರು. ನಂತರ ಇದಕ್ಕೆ ಶಿಕ್ಷೆಯಾಗಿ ಹೊಲೆಯ ಊರಿನ ಹೊರಗೆ ಇರಬೇಕಾಯಿತು ಎಂಬ ತಲತಲಾಂತರದ ಘಟನೆಯನ್ನು ನೆನಪಿಸುವ ನನ್ನಿಗೆ ಯಾವ ಸಮಾಜ ಶಾಸ್ತ್ರಜ್ಞನೂ ಪುರಾವೆಯನ್ನು ಒದಗಿಸಲಾರ. ದಲಿತರ ರೊಚ್ಚನ್ನು ಉತ್ತಮ ಜಾತಿಯ ಬಗ್ಗೆ ಇರುವ ದ್ವೇಷವನ್ನು ಕಡಿಮೆ ಮಾಡಲು ದೇವನೂರು ಈ ತಂತ್ರ ಅನುಸರಿಸಿದರೆ? ಅಥವಾ ಒಂದು ಸುಳ್ಳಿನ ಮೂಲಕ ಹೋರಾಟದಲ್ಲಿ ಗಟ್ಟಿಯಾಗಲು ಪ್ರಯತ್ನಿಸುವ ಚಳುವಳಿಯೊಂದರ ಉತ್ಸಾಹವನ್ನು ಚಿವುಟಿ ಹಾಕುವ ಸಾಧ್ಯತೆ ಈ ನನ್ನಿಯಲ್ಲಿದೆ ಎಂಬ ಪ್ರಶ್ನೆ ಓದುಗರನ್ನು ಕಾಡದೆ ಇರದು. ದೇವನೂರರು ಸಾಹಿತ್ಯದ ಮೂಲಕ ಹೋರಾಟಕ್ಕೆ ಸ್ಫೂರ್ತಿಯಾಗುವುದಿಲ್ಲ. ಬದಲಾಗಿ ತಲತಲಾಂತರದ ನನ್ನಿಯ ಮೂಲಕ ದೇವನೂರ ಸೃಜನಶೀಲರಾಗುತ್ತಾರಾದರೂ ವಾಸ್ತವವನ್ನು ಮರೆಮಾಚುತ್ತಾರೆ. ಸಾಂಸ್ಕೃತಿಕ ಪರಂಪರೆಯಲ್ಲಿ ಅಪಾರ ನಿರೀಕ್ಷೆಗಳನ್ನಿಟ್ಟುಕೊಂಡಿ ರುವ ಒಂದು ಜನಾಂಗವನ್ನು ಅದಕ್ಕೆ ಬದುಕು ಮುಖಿಯಾದ ಭವಿಷ್ಯ ರೂಪಿಸಲು ಪ್ರಯತ್ನಿಸುವ ಹೋರಾಟಕ್ಕೆ ದೇವನೂರರು ಈ ನನ್ನಿಯನ್ನು ಮುಂದೊಡ್ಡಿ ತಡೆಯುತ್ತಾರೆ. ಈ ಸುಳ್ಳು ನನ್ನಿ ಯನ್ನು ಹೊರಕ್ಕೆ ತಂದು ದಲಿತರನ್ನು ಸಾಂತ್ವನಗೊಳಿಸುವ ತಂತ್ರ ಸಾಹಿತ್ಯಕವಾಗಿ ಕೂಡ ಯಶಸ್ವಿ ಯಲ್ಲ. ಪರಂಪರೆಯ ಹೊಂಡವನ್ನು ತುಂಬಿಕೊಂಡು ಸಮಾಜವನ್ನು ಪುನರ್ ರೂಪಿಸುವ ಹೊಣೆಯನ್ನು ಇಂಥ ನನ್ನಿಗಳಾಗಲಿ ದೇವನೂರರು ಸೃಜಿಸುವ ತಣ್ಣನೆ ಹರಿಯುವ ಬರವಣಿಗೆ ಯಾಗಲಿ ಹೊರುವುದಿಲ್ಲ. ಇದರಿಂದ ದೇವನೂರ ಸೃಜನಶೀಲರಾಗುತ್ತಾರೆ. ಹೋರಾಟಮುಖಿ ಬರಹಗಾರರಾಗುವುದಿಲ್ಲ. ಬದುಕನ್ನು ಅಪಾರ ಒಳನೋಟಗಳಲ್ಲಿ ಹಿಡಿಯುತ್ತಾರೆ. ಅವುಗಳಿಗೆ ಪುರಾವೆ ಒದಗಿಸುವಾಗ ಸೋಲುತ್ತಾರೆ ಎನ್ನುವುದು ಅವರ ಸಾಹಿತ್ಯವನ್ನು ಗಮನಿಸಿದಾಗ ಓದುಗರ ಗಮನಕ್ಕೆ ಬರುತ್ತದೆ.

ಬರಗೂರರು ಆರಿಸಿಕೊಂಡಿರುವ ಕಥಾವಸ್ತು ಜಾತಿ ವರ್ಗಗಳಿಗೆ ಸಂಬಂಧಿಸಿದ್ದು ಆಗಿದ್ದರೂ ಅದರೊಟ್ಟಿಗೆ ಬರುವ ಗಂಡು ಹೆಣ್ಣಿನ ಸಂಬಂಧದ ಹಸಿವು ಸೃಷ್ಟಿಸುವ ತಾಕಲಾಟಗಳದ್ದಾಗಿರುತ್ತದೆ ಎಂಬುದು ಶೋಷಣೆಯ ನೆಲೆಯಲ್ಲಿ ಕಾಣಬಹುದಾಗಿದೆ. ಅಳ್ಳಿಗಾಡಿನ ನೆಲೆಯಲ್ಲಿದ್ದಾಗ ಪ್ರಗತಿಪರ ನಿಲುವುಗಳಾಗಿ ತೋರುವಂತೆಯೇ ನಗರದ ಬದುಕು ಶಿಕ್ಷಣ ತುಂಬಿಕೊಡುವ ಸಾಮಾಜಿಕ ಎಚ್ಚರಗಳೂ ಆಗಿ ವ್ಯಕ್ತವಾಗುತ್ತವೆ. ಅನಾದಿಕಾಲದ ಅನಕ್ಷರಸ್ಥ ಸಮಾಜ ಎಚ್ಚೆತ್ತು ಕೊಳ್ಳುವ ಬಗೆ ಹೇಗೆಂಬುದನ್ನು ಕಾಣಲು ನಾವು ಬರಗೂರರ ಕಥಾ ಸಾಹಿತ್ಯವನ್ನು ಪ್ರವೇಶಿಸಿ ದಾಗ ಅರಿವಾಗುತ್ತದೆ. ಒಬ್ಬ ನಿರುದ್ಯೋಗಿ, ಒಬ್ಬ ಜೀತದಾಳು, ಒಬ್ಬ ಆರ್ಥಿಕ ಅಸಹಾಯಕ, ಒಬ್ಬ ವಿಚಾರವಂತ ಹೀಗೆ ಬಗೆ ಬಗೆಯ ಪಾತ್ರಗಳಲ್ಲಿ ಅವರ ಯೋಚನಾ ಹಾದಿ ಅದು ವರೆಗಿನ ಜಡಗಟ್ಟಿದ ಸಮಾಜದ ಎಲ್ಲೆಗಳನ್ನು ಪ್ರಶ್ನಿಸುತ್ತಲೇ ಮೀರುತ್ತವೆ. ಅದು ಅಂತಿಮ ವಾಗಿ ಪ್ರತಿಪಾದಿಸುವುದು ಶುದ್ಧ ಬೆತ್ತದ ನಿರ್ವಿಡೆಯ ಮಾನವೀಯತೆಯನ್ನು. ಜಮೀನ್ದಾರಿ ಪಾಳೆಗಾರಿಕೆಗಳ ಅವಸಾನವಾಗುತ್ತಿದ್ದಂತೆಯೇ ಹೇಗೆ ಪ್ರಜಾಪ್ರಭುತ್ವದ ನೆಲೆಗಳು ಬದುಕಿನಲ್ಲಿ ಊರ್ಜಿತಗೊಳ್ಳಬೇಕೆಂಬ ನೆಲೆಗಳನ್ನು ಸ್ಪಷ್ಟಪಡಿಸುವ ಅವರ ಕಥಾ ಸಾಹಿತ್ಯ ಮೊದಲ ಬಾರಿಗೆ ಕನ್ನಡ ಸಾಹಿತ್ಯದಲ್ಲಿ ಪರಿಪೂರ್ಣವಾದ ಬಂಡಾಯದ ಪಾತ್ರಗಳನ್ನು ಸೃಷ್ಟಿಸಿತು. ಅದುವರೆಗೆ ಇದ್ದ ರೆಡಿಮೇಡ ಕ್ರಾಂತಿಕಾರಕ ಪಾತ್ರಗಳಿಗಿಂತ ಭಿನ್ನವಾಗಿ ನಿಲ್ಲುವುದರಿಂದಲೇ ಜಮೀನ್ದಾರಿ ಪದ್ಧತಿಯು ಇದ್ದಕ್ಕಿದ್ದಂತೆ ಕೊನೆಗೊಳ್ಳುವಂತದಲ್ಲ. ಅದು ವ್ಯಕ್ತಿಗೆ ಮಾತ್ರ ಸಂಬಂಧಿಸಿದ್ದಾಗಿರದೆ ವರ್ಗರೂಪದಲ್ಲಿ ಮುಂದುವರೆಯುವಂತದ್ದಾಗಿದೆ. ಮನುಷ್ಯ ಮನುಷ್ಯರ ನಡುವಿನ ಸ್ನೇಹ ಸಂಬಂಧಗಳಿಗೆ ಕಿಮ್ಮತ್ತಿಲ್ಲ. ಮಾನವೀಯತೆ ಮರೆಯಾಗುತ್ತದೆ. ದರ್ಪ ದೌರ್ಜನ್ಯಗಳು ಬಗೆ ಬಗೆಯ ರೂಪದಲ್ಲಿ ಮೆರೆಯುತ್ತವೆಂಬ ಸತ್ಯವನ್ನು ಅವರ ಕಥನಗಳು ಹೇಳುತ್ತವೆ.

ಸೂರ್ಯ ಕಾದಂಬರಿಯಲ್ಲಿ ಊರಿನ ಗೌಡನ ಶೋಷಣೆ ಆತನ ಪ್ರತಿಸ್ಪರ್ಧಿಯಾಗಿರುವ ಚಂದ್ರಯ್ಯನ ಸಣ್ಣತನ, ಗೌಡನ ಹೆಂಡತಿಯಾದ ಪಾರ್ವತಕ್ಕನಿಗೂ ಶ್ರಮದಿಂದ ಹಿಡಿದು ಹೊಟ್ಟೆ ಹೊರೆಯುವ ಚನ್ನನಿಗೂ ಮಧ್ಯ ಇರುವ ವಿವಾಹೇತರ ಸಂಬಂಧ ಇವುಗಳನ್ನು ಹೇಳುವ ರೀತಿಯಲ್ಲಿಯೇ ಕಾದಂಬರಿಯಲ್ಲಿ ಎತ್ತಿಕಟ್ಟುವುದಕ್ಕಾಗಿಯೇ ಆಕೆಗೂ ಚನ್ನನಿಗೂ ಲೈಂಗಿಕ ಸಂಬಂಧವನ್ನು ತರಲಾಗಿದೆ. ಜಡತೆಯ ವಿರುದ್ಧ ಬಂಡಾಯವನ್ನು ಸಾರುವುದರಲ್ಲಿಯೇ ಪಾರ್ವತಕ್ಕ ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಪ್ರತಿಪಾದಿಸುವುದಲ್ಲದೆ ಅವುಗಳನ್ನು ಸಂರಕ್ಷಿಸು ವವಳೂ ಆಗುತ್ತಾಳೆ. ಇದನ್ನೆಲ್ಲ ಹೇಳುವಲ್ಲಿ ಬರಗೂರರು ತಾವು ಪ್ರಬಲವಾಗಿ ನಂಬಿದ ಮೌಲ್ಯ ಗಳನ್ನು ಪ್ರತಿಪಾದಿಸಲು ಈ ಕಾದಂಬರಿಯ ಪಾತ್ರಗಳನ್ನು ದುಡಿಸಿಕೊಂಡಿದ್ದಾರೆ ಅನಿಸುತ್ತದೆ.

ಬರಗೂರರ ಕೆಲವು ಸಾಹಿತ್ಯ ಕೃತಿಗಳಲ್ಲಿ ಜಾತಿ ಸಂವೇದನೆ ಕಾಣಿಸಿಕೊಳ್ಳುವ ಹಾಗೆ ಮಹಿಳಾ ಸಂವೇದನೆ ಹೆಚ್ಚಾಗಿ ಕಂಡುಬರುವುದಿಲ್ಲ. ಸೂರ್ಯ ಕಾದಂಬರಿಯಲ್ಲಿ ಚನ್ನಿ ಗೌಡರ ಅತ್ಯಾ ಚಾರದಿಂದ ಕೊಲೆಯಾಗಿರುವುದನ್ನು ಗುರುತಿಸುವ ಲೇಖಕರು ಅವಳಿಗೆ ಅಥವಾ ಇಡೀ ದಲಿತ ಮಹಿಳಾ ಸಮುದಾಯ ಇಂತಹ ಸಂದರ್ಭದಲ್ಲಿ ಅನುಭವಿಸುವ ನೋವು ಶೋಷಣೆಗಳನ್ನು

ಗಮನಿಸದೆ ಬರೀ ಚನ್ನನ ಸ್ಥಿತಿಯನ್ನು ಓದುಗರ ಮುಂದೆ ಬಿಚ್ಚಿಡುತ್ತಾರೆ. ಇದನ್ನು ಜಾತಿ ಮತ್ತು ಪುರುಷಪರ ಸಂವೇದನೆ ಎಂದು ಹೇಳಬಹುದು.

ದಲಿತ ಬಂಡಾಯ ಸಾಹಿತ್ಯದ ಮಹಿಳಾ ಸಾಹಿತಿಗಳ ಕೃತಿಗಳನ್ನು ಗಮನಿಸಿದರೆ ಜಾತಿ ಸಂವೇದನೆಗಿಂತ ಮಹಿಳಾ ಸಂವೇದನೆಯೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಈ ಬಗೆಯ ಕೆಲ ಮಾದರಿಗಳನ್ನು ಒಟ್ಟು ನೋಟದಿಂದ ಉಲ್ಲೇಖಿಸುವುದಾದರೆ ಬಿ.ಟಿ. ಲಲಿತಾ ನಾಯಕ ಅವರು ಕೆಳಸಮುದಾಯದ ಮಹಿಳೆಯರ ನೋವಿಗೆ ಸರಿಯಾಗಿಯೇ ಸ್ಪಂದಿಸಿದ್ದಾರೆ. ಹಾಗೆ ಗೀತಾ ನಾಗ ಭೂಷಣರು ಕೆಳಸಮುದಾಯದ ಮಹಿಳೆಯರು ಅನುಭವಿಸುವ ಜೋಗತಿ, ದೇವದಾಸಿಯಂತಹ ಅನಿಷ್ಟ ಪದ್ಧತಿಗಳಿಗೆ ಬಲಿಯಾಗುತ್ತಿರುವುದನ್ನು ಗ್ರಹಿಸಿದ್ದಾರೆ. ತಮ್ಮ ಬದುಕು ಕಾದಂಬರಿಯಲ್ಲಿ ಹೆಣ್ಣುಗಳು ಬಲಿಯಾಗಿ ಅನುಭವಿಸುವ ಕಷ್ಟಕ್ಕೆ ಪರಿಹಾರವೆಂಬಂತೆ ಕೆಲವು ಪಾತ್ರಗಳು ಅದನ್ನು ಮೀರಿ ಬದುಕಿ ತೋರಿಸಿರುವುದನ್ನು ಕಾದಂಬರಿಯಲ್ಲಿ ಗಮನಿಸಿದರೆ ಅವರ ನೈಜ ಮಹಿಳಾ ಸಂವೇದನೆ ಕಂಡುಬರುತ್ತದೆ.

• • •

೧೮

# ವೀಣಾ ಶಾಂತೇಶ್ವರ ಅವರ 'ಕವಲು' - ಸ್ತ್ರೀವಾದಿ ವಿಶ್ಲೇಷಣೆ

ಎ. ಚಂದ್ರಕಲಾ

'ಪುರುಷ ಪ್ರಧಾನವಾದ ನಮ್ಮ ಸಮಾಜವು ಮಹಿಳೆಯನ್ನು ನೋಡುವ ಸಂಕುಚಿತ ಸಂಪ್ರದಾಯನಿಷ್ಠ ದೃಷ್ಟಿಕೋನ ಬದಲಾಗಲು ಇನ್ನೂ ಹಲವು ಶತಮಾನಗಳು ಬೇಕಾದೀತು. ಅಲ್ಲಿಯವರೆಗೆ ತನ್ನ ಅಸ್ತಿತ್ವದ ಉಳಿವಿಗಾಗಿ ಹಾಗೂ ವಿಕಾಸಕ್ಕಾಗಿ ಸ್ವತಃ ಹೋರಾಡಲು ನಮ್ಮ ದೇಶದ ಮಹಿಳೆಗೆ ಒಳ್ಳೆಯ ಶಿಕ್ಷಣ ಧೈರ್ಯ ಹಾಗೂ ಅಪಖ್ಯಾತಿಗೆ ಕಿವಿಗೊಡದಿರುವ ಎದೆಗಾರಿಕೆ ಇವು ಮೂರು ಬೇಕು' ಎಂದು ತಮ್ಮ ತಾಯಿ ಹೇಳಿದ್ದನ್ನು ವೀಣಾರವರು ನೆನೆಯುತ್ತಾರೆ. ಅವರ ಕಥೆಗಳ ಆಶಯವು ಕೂಡಾ ಇದೇ ಆಗಿದೆ.

ಚಿಕ್ಕಂದಿನಿಂದಲೂ ಶೈಕ್ಷಣಿಕ ವಾತಾವರಣ ಹಾಗೂ ಸ್ವತಂತ್ರ ಮನೋಭಾವಕ್ಕೆ ಸ್ಫೂರ್ತಿ ನೀಡುವ ಪರಿಸರದಲ್ಲಿ ಬೆಳೆದು ಬಂದ ವೀಣಾರವರ ಇಡೀ ಸಾಹಿತ್ಯ ಕೃತಿಗಳು ಮಹಿಳೆಯು ಸ್ವಾತಂತ್ರ್ಯಕ್ಕಾಗಿ ಹಂಬಲಿಸುವ ಹಾಗೂ ಅದನ್ನು ಕಾಣುವ ದಾರಿಯಲ್ಲಿ ಸಾಗುವಂತೆ ಕಂಡರೂ ಅದು ಅವರ ಪಾಲಿಗೆ ನಿಲುಕದ ನಕ್ಷತ್ರ ಎಂಬ ವಾಸ್ತವ ಚಿತ್ರಣವನ್ನು ನೀಡುತ್ತಾರೆ. ಅವರ ಒಟ್ಟು ಸಾಹಿತ್ಯದಲ್ಲಿ ಮಹಿಳೆ ಸುಶಿಕ್ಷಿತಳೂ ಆರ್ಥಿಕ ಸ್ವಾವಲಂಬಿಯಾಗಿಯೂ ಕೂಡ ಅಂದುಕೊಂಡಂತೆ ಬದುಕಲಾಗದ ಬಿಕ್ಕಟ್ಟಿನಲ್ಲಿ ಉಳಿಯುತ್ತಾಳೆ. ಇಂತಹ ಮುಖ್ಯ ಆಶಯವನ್ನು ಹೊತ್ತ 'ಕವಲು' ಸಂಕಲನದ ಕಥೆಗಳ ಸ್ತ್ರೀವಾದಿ ನೋಟವನ್ನು ಈ ಲೇಖನವು ಪ್ರಸ್ತುತ ಪಡಿಸುತ್ತದೆ.

ನವ್ಯರ ಸಂದರ್ಭದ ಸಾಹಿತ್ಯಿಕ ವಾತಾವರಣದ ಪ್ರಭಾವದಿಂದ ಹಾಗೂ ಸ್ತ್ರೀವಾದಿ ಚಳುವಳಿಗಳ ಗಾಳಿ ಬೀಸಿದ್ದರಿಂದ ಅವರ ಕಥೆಗಳಲ್ಲಿ ಮಹಿಳೆಯ ಅಸ್ತಿತ್ವದ ಶೋಧವನ್ನು ಕಾಣಬಹುದು. ಸ್ತ್ರೀಗೂ ಆತ್ಮವಿದೆ. ಅದಕ್ಕೂ ಹಲವು ಬೇಡಿಕೆಗಳಿರುತ್ತವೆ. ಅವಳಿಗೂ ದೇಹವಿದೆ. ಅದು ಸಹಜ ಸುಖಕ್ಕಾಗಿ ತಹತಹಿಸುತ್ತದೆ. ಆದರೆ ಸಾಂಪ್ರದಾಯಿಕ ಚೌಕಟ್ಟಿನಲ್ಲಿರುವ ಮಹಿಳೆ ಅವುಗಳನ್ನು ಮುಕ್ತವಾಗಿ ಪಡೆಯಲಾರಳು. ಸ್ವಗತದಲ್ಲಿಯೂ ಆ ಬೇಡಿಕೆಗಳು ವ್ಯಕ್ತವಾಗಿ

ಕನಸಿನಲ್ಲಿ ಮಾಯವಾಗುತ್ತವೆ ಎಂಬ ನಿತ್ಯಸತ್ಯವನ್ನು ಎತ್ತಿ ತೋರಿಸುತ್ತಾರೆ. ಅದೂ ದಿಟ್ಟತನ ದಿಂದ ಈ ಮೊದಲಿನ ಸಾಹಿತ್ಯದಲ್ಲಿ ಅಷ್ಟಾಗಿ ಕಂಡು ಬರದ ಮಹಿಳಾ ಅಸ್ತಿತ್ವವನ್ನು ಇವರ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

## ಕವಲು

ಪುರುಷ ಪ್ರಧಾನ ವ್ಯವಸ್ಥೆಯು ಏಕಕಾಲದಲ್ಲಿ ಹೆಂಡತಿಯನ್ನು, ಪ್ರೇಯಸಿಯನ್ನು ಹೇಗೆ ನಿಯಂತ್ರಿಸುತ್ತದೆ. ಅದರ ಹಿಂದಿನ ಪ್ರೀತಿ ಎನ್ನುವ ರಾಜಕಾರಣ ನಾಯಕಿ ಪಾತ್ರದ ಸ್ವಗತದ ಮೂಲಕವೇ ವ್ಯಂಗ್ಯವಾಗಿ ಲೇಖಕಿ ಇಲ್ಲಿ ಸ್ಪಷ್ಟಪಡಿಸುತ್ತಾರೆ. ಇಲ್ಲಿ ನಾಯಕಿಯ ಪಾತ್ರವನ್ನು ಎರಡು ಆಯಾಮಗಳಲ್ಲಿ ವಿಶ್ಲೇಷಿಸಬಹುದು.

ಆರಂಭದಲ್ಲಿ ತನ್ನ ಆಯ್ಕೆಯನ್ನು ಮೌನವಾಗಿ ಒಪ್ಪಿಬಾಳುವುದು

ಕೊನೆ ಹಂತದಲ್ಲಿ ಮೌನವಾಗಿಯೂ ಅವನು ತೋರಿಸಿದ ದಾರಿಯನ್ನು ಧಿಕ್ಕರಿಸಿ ತನ್ನ ಅಸ್ತಿತ್ವವನ್ನು ಒಪ್ಪಿಕೊಳ್ಳುವುದು.

ಇಲ್ಲಿ ನಾಯಕಿ ಎಲ್ಲೂ ಮಾತನಾಡುವುದಿಲ್ಲ. ಅದಕ್ಕೆ ಕಾರಣ ಅವನು ಎಲ್ಲೂ ಅವಳಿಗೆ ಮಾತಾಡಲು ಅವಕಾಶ ನೀಡುವುದಿಲ್ಲ. ಪ್ರತಿಯೊಂದಕ್ಕೂ ಪ್ರಶ್ನೆಯು ಹಾಕಿ ಉತ್ತರವನ್ನು ತಾನೇ ಹೇಳುತ್ತಿದ್ದ. ಜೊತೆಗೆ 'ನೀ ನನ್ನ ಸಲುವಾಗಿ ಭಾಳ ಸಹನ ಮಾಡೀದಿ. ಒಂದು ದಿನಾ ಬಂದೀತು - ನಿನ್ನ ತ್ಯಾಗದ ಋಣಾ ಬಡ್ಡೀ ಸಹಿತ ತೀರಿಸೋ ಅವಕಾಶ ನನಗೂ ಸಿಕ್ಕೀತು. 'ನಿನಗೆ ಭಾಳ Uniderstanding ಅದೆ. ಇಷ್ಟ Co-operation ನಾ ಶಾಂತಾನಿಂದ Expect ಮಾಡ್ಲಿಕ್ಕೇ ಶಕ್ಯ ಇಲ್ಲ..' ಎಂದು ಮುಂತಾಗಿ ಮಾತಾಡಿ ಮುದ್ದಾಡಿ ಅವಳನ್ನು ಮಾತೇ ಆಡದ ಹಾಗೆ ಮಾಡುತ್ತಿದ್ದ.

ವಿವಾಹ ಬಾಹಿರ ಸಂಬಂಧಕ್ಕೆ ಸಿಲುಕಿಕೊಂಡಿದ್ದ 'ಮಿನಿ' ಕೊನೆಯವರೆಗೂ ಪ್ರೇಯಸಿ ಆಗೇ ಉಳಿಯುತ್ತಾಳೆ. ಇಪ್ಪತ್ತು ವರ್ಷ ನಿರಂತರ ಅವನಿಗೋಸ್ಕರವೇ ಬಾಳಿದ ಆಕೆ ಅವನ ಹೆಂಡತಿ ಸತ್ತ ನಂತರ ಮದುವೆ ಪ್ರಸ್ತಾಪ ತೆಗೆದಾಗ ಅವನನ್ನು ಬಿಟ್ಟು ತನ್ನ ಉದ್ಯೋದಲ್ಲಿ 'ಕೆನಡಾಕ್ಕೆ' ಹೋಗುವ ಅವಕಾಶವನ್ನು ಕಳೆದುಕೊಳ್ಳದೆ ತನ್ನ ದಾರಿಯನ್ನು ಕವಲೊಡಿಸಿಕೊಳ್ಳುವು ದರ ಮೂಲಕ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತಾಳೆ. ಆಕೆಯ ಮೌನ ಇಲ್ಲಿ ಪ್ರತಿಮಾತ್ಮಕ ವಾಗಿದ್ದು ಮೊದಲು ಒಪ್ಪಿಗೆ ಕೊನೆಗೆ ನಿರಾಕರಣೆಯನ್ನು ಸೂಚಿಸುತ್ತದೆ. ಅವಳ ಸ್ವಗತಗಳು ಅವಳ ಭಾವನೆಗಳ ತುಮುಲವನ್ನು ತೋರಿಸುತ್ತವೆ.

ಇಲ್ಲಿ ನಾಯಕ ಕೇವಲ ಮಾತಿನಲ್ಲಿ "I am brave man" ಎಂದು ಹೇಳಿದ್ದು ತನ್ನ ದುರ್ಬಲತೆ ತನಗೆ ಗೊತ್ತಿದ್ದೂ ತಾನೇ ಅಣಕ ಮಾಡಿಕೊಂಡಂತಿದೆ. ದೃಢ ಮನಸ್ಸಿಲ್ಲದ ನಾಯಕ ತನ್ನ ಹಾಗೂ 'ಮಿನಿ'ಯ ಸಂಬಂಧ ಬಹಿರಂಗಗೊಳಿಸಿ ಆಕೆಗೆ ಹೆಂಡತಿಯ ಸ್ಥಾನ ನೀಡಲು ತಯ್ಯಾರಿಲ್ಲ. ಸಮಾಜಕ್ಕೆ ಅದು ಒಪ್ಪಿತವಾಗದು. ಮಕ್ಕಳು ಹಾಗೂ ಸಂಬಂಧಿಕರೆದುರು ತನ್ನ ಮರ್ಯಾದೆ ಹೋಗುತ್ತದೆ ಎಂದು ತನ್ನ ಮಾತಿನಲ್ಲಿ ತಾನೇ ನಿರೂಪಿಸುತ್ತಾನೆ. ಅನವಶ್ಯಕ ವಾಗಿ ಹೆಣ್ಣಿನ ಮುಗ್ಧತೆ ಗಂಡಿನ ಚಾಕಚಕ್ಯತೆಯಿಂದಾಗಿ ಅಸಹಾಯಕವಾಗಿದೆ. ತನ್ನ ಮುಖವನ್ನು

ಕನ್ನಡಿಯಲ್ಲಿ ನೋಡಿಕೊಂಡಾಗ 'ಈ ಇಪ್ಪತ್ತು ವರ್ಷಗಳಲ್ಲಿ ನಾನು ಕನ್ನಡಿಯನ್ನು ನೋಡಿರಲಿಲ್ಲವೇ?" ಎನ್ನುವ ಅವಳ ಮಾತುಗಳು ಇಷ್ಟು ದಿನ ಅವನ ನಿರ್ಧಾರಗಳನ್ನು ಅವಳು ಒಪ್ಪುತ್ತಿದ್ದಳು. ಆದರೆ ಇಂದು ಅವನು ಹೇಳಿದ ಮಾತಿಗೆ ಪ್ರತಿ ಉತ್ತರ ನೀಡಿಲ್ಲವಾದರೂ ತನ್ನ ದಾರಿಯನ್ನು ಸ್ಪಷ್ಟಪಡಿಸಿಕೊಂಡ ಸಂಕೇತವಾಗಿ ಮೂಡಿ ಬಂದಿವೆ.

ಹಿಂದೆ ತಮ್ಮಿಬ್ಬರ ವಿಷಯ ತಿಳಿದು ಹೆಂಡತಿ ಶಾಂತಾ ರಂಪ ಮಾಡಿದಾಗ ಶಾಂತಾ ಸಾಯ ಬಾರದ ಎಂದಾಗಲೂ ಇಂದು ಅವಳು ಸತ್ತಮೇಲೆ ಅವಳನ್ನು ನೆನೆಯುವಾಗಲೂ ಆತ ಕೇವಲ ಅವಳ ಕರ್ತವ್ಯಗಳನ್ನು, ಮಕ್ಕಳನ್ನು ಹಡೆದು ಪೋಷಿಸಿದ್ದು, ತನಗಾಗಿ ವ್ರತ ಪೂಜೆಗಳನ್ನು ಮಾಡಿದ್ದನ್ನು ಮಾತ್ರ ನೆನೆದಿದ್ದು ಹೆಂಡತಿಯ ಇರುವಿಕೆ ಅಂತಿಮವಾಗಿ ಸಂತಾನಾಭಿವೃದ್ಧಿ ಹಾಗೂ ಗಂಡ ಮಕ್ಕಳ ಪಾಲನೆ ಪೋಷಣೆಗೆ ಇರುವ ಸೀಮಿತತೆ ಮಾತ್ರ ತೋರಿಸುತ್ತದೆ. ಅವಳು ಸತ್ತಾಗ ಅವನು ಕೊರಗುತ್ತಿರುವುದು ಸೂಕ್ತ ಸೇವೆ ಮಾಡುವವರಿಲ್ಲ ಎನ್ನುವುದಕ್ಕೆ. ಮುಂದೆ ಇವಳನ್ನು ಕೈಹಿಡಿಯುತ್ತಿರುವುದು ಇದೇ ಕಾರಣಕ್ಕೆ ಎಂಬುದು ಸ್ಪಷ್ಟವಾಗಿದೆ. ಇದನ್ನರಿತೇ 'ಅವಳ ಕಣ್ಣೀರನ್ನು ತೊಡೆಯಬೇಕು ಎನಿಸಿದರೂ ಕೈಗಳು ನಿರ್ಜೀವವಾದಂತೆ ತೋರಿದವು ಎಂದು ಅಂದು ಕೊಳ್ಳುತ್ತಾಳೆ.

ಮಿನಿಯ ಜೊತೆ ಮಾತಾಡುವಾಗ 'ಶಾಂತ'ಳ ಬಗ್ಗೆ ಹೇಳುತ್ತಾ ಅವಳೊಂದಿಗೆ ತಾನು ಮಾಡುವುದೆಲ್ಲ 'Sense of Duty' ಎನ್ನುವುದು. ಆದರೆ ಅದನ್ನು ಇವಳೊಂದಿಗೂ ಸರಿಯಾಗಿ ಮಾಡುತ್ತಿಲ್ಲ ಎಂದು ಆಕೆಯ ಮನಸ್ಸು ಹೇಳಿದರೂ ಸುಮ್ಮನಿರುತ್ತಿದ್ದಳು. 'ನಿನಗ ಹ್ಯಾಂಗೂ ನೌಕರಿ ಅದ, ಏನೂ ಜವಾಬ್ದಾರೀನೂ ಇಲ್ಲ'. ಒಟ್ಟೊಟ್ಟಿಗೆ ಹೆಂಡತಿ ಪ್ರೇಯಸಿಯಿಂದ ತನ್ನ ಜೀವನ ಸುಖಮಯವಾಗಿಸಿಕೊಳ್ಳುತ್ತಿದ್ದರೂ ಯಾರೊಂದಿಗೂ ಪ್ರಾಮಾಣಿಕನಲ್ಲ. ಆದರೆ ಇಬ್ಬರೂ ಆತನ ಹಿಡಿತದಲ್ಲಿದ್ದಾರೆ. ಇಲ್ಲಿ ಶಾಂತಾ ಕೂಡ ಇನ್ನೊಬ್ಬ ಹೆಣ್ಣಿನೊಂದಿಗೆ ಇದ್ದ ಗಂಡ ಬಿಟ್ಟು ಬಂದ ಮೇಲೆ ಅವನನ್ನು ಸ್ವೀಕರಿಸುತ್ತಾಳೆ. ಆದರೆ ಅದೇ ಕಾರ್ಯ ಅವಳಿಂದಾದರೆ ಆತನೂ ಸಮಾಜವೂ ಒಪ್ಪುತ್ತಿರಲಿಲ್ಲ. ಅವಳು ಅಷ್ಟೊಂದು ಪ್ರೀತಿಸುವ ಗಂಡ ಅವಳು ಸತ್ತ ಎರಡೇ ತಿಂಗಳಲ್ಲೇ ಮರುಮದುವೆಗೆ ಸಿದ್ಧನಾಗಿದ್ದಾನೆ.

'ಮಿನಿ'ಗೆ ಮದುವೆ ರಜಿಸ್ಟ್ರೇಶನ್ ಮಾಡುವ ವಿಷಯ ಹೇಳಿದಾಗ ಅವಳಿಗೆ ಯಾವುದೇ ಉತ್ಸಾಹ ಉಳಿದಿರಲಿಲ್ಲ. ಅಷ್ಟರಲ್ಲಿ ಮಳೆ ಬಂದ ಒಂದು ದಿನವಾದರೂ ಮಕ್ಕಳೊಂದಿಗೆ ಆಟವಾಡಿ, ತಂದೆಯ ಯೋಗಕ್ಷೇಮ ಕೇಳುವ ಸೌಜನ್ಯ ಆತನಲ್ಲಿಲ್ಲ. 'ಮಕ್ಕಳ ಕಿರಿಕಿರಿಯಿಂದ ತಲೆ ಚಿಟ್ಟೆನ್ನುತ್ತಿದೆ. ಅದಕ್ಕೆ ಬೇಗ ಮಲಗಿಸಿ ಒಳಗೆ ತನಗೂ ಹಾಸಿಕೊಡು' ಎಂದು ಕರೆಯುತ್ತಾನೆ. ಹಾಸಿಗೆಯಲ್ಲಾದರೂ 'ಆತನ ಅಗಲವಾದ ಎದೆಯಲ್ಲಿ ಮುಖ ಹುದುಗಿಸಿ-ಶಂಕರ, ನೀನಿಲ್ಲದೇ ಈ ಭಾರ ನಾನು ಒಬ್ಬಳೇ ಹೊರಲಾರೆ' ಎಂದು ಏನೇನೋ ಹೇಳಬೇಕು ಎಂದು ಕೊಂಡರೂ ಬಿಗಿದಪ್ಪಿದ ಅವನು ಅವಳಿಗೆ ಉಸಿರಾಡಲೂ ಕೂಡ ಅವಕಾಶ ಕೊಡಲಿಲ್ಲ. 'ಆಕೆಗೆ ನಿದ್ರೆಯಿಲ್ಲ, ವ್ಯರ್ಥ ಪ್ರಯತ್ನ ಮಾಡಿದಳು' - ಅಂದರೆ ಅವನೊಂದಿಗೆ ಅವಳ ಜೀವನ ಇನ್ನು ಇಷ್ಟೇ. ಆಕೆ ಏನೇ ಹೇಳಿದರೂ ಆತ ಧಾರವಾಡಕ್ಕೆ ವರ್ಗ ಮಾಡಿಸಿಕೊಂಡು ಆಕೆಯ

ದೈಹಿಕ, ಮಾನಸಿಕ ಖಿನ್ನತೆಯನ್ನು ಕಡಿಮೆ ಮಾಡುವ ಉದ್ದೇಶ ಅವನಿಗಿಲ್ಲ. ಅವಳು ಮಾಡುವುದು ವ್ಯರ್ಥ ಪ್ರಯತ್ನ. ಸುಖವೊಂದು ಮಲಗಿದ ಆತನಿನ್ನು ನೋಡುತ್ತ ಆತನನ್ನು ತರುಣ ಆತನ ಜೀವನೋತ್ಸಾಹ ತುಳುಕುತ್ತಿದೆ. ತಾನೇಕೆ ಚೈತನ್ಯರಹಿತಳಾಗಿ ಮುದುಕಿಯಾಗುತ್ತಿದ್ದೇನೆ? ಎಂದು ಯೋಚಿಸುತ್ತಾಳೆ.

ಜೈವಿಕ ವಿಶಿಷ್ಟತೆಯಿಂದ ಮಕ್ಕಳನ್ನು ಪಡೆಯುವ ಹೆಣ್ಣಿಗೆ ಅವುಗಳ ಪಾಲನೆ ಪೋಷಣೆಯ ಜವಾಬ್ದಾರಿಯೂ ಸಮಾಜ ಅವಳ ಮೇಲೆಯೇ ಹೇರುತ್ತದೆ. ಇಲ್ಲಿ ಶಂಕರ 'ಅವಳು ಸುಶಿಕ್ಷಿತ ಹೆಣ್ಣಾದ್ದರಿಂದ ಎಲ್ಲಾ ಕೆಲಸವನ್ನು ತುಂಬ 'Efficiency'ಯಿಂದ ಬೇಜಾರು ಪಟ್ಟುಕೊಳ್ಳದೇ ಮಾಡಬೇಕು ಎಂದು ವಾದಿಸುತ್ತಾನೆ'. ಇಲ್ಲಿ ಅವಳ ವಿದ್ಯೆ ಹಾಗೂ ದುಡಿಮೆಯೇ, ಆಕೆಗೆ ಮುಳುವಾಗಿದೆ. ಈ ಎಲ್ಲ ರೀತಿಯ ಒತ್ತಡ ಹಾಗೂ ಮಾನಸಿಕ ಖಿನ್ನತೆಯಿಂದ ಸಹಜವಾಗಿಯೇ ಅವುಗಳಲ್ಲಿ ಉತ್ಸಾಹ ಬತ್ತಿ ಹೋಗಿ ಮುದುಕಿಯಂತಾಗಿದ್ದಾಳೆ. ಇಷ್ಟಾದರೂ ರವಿವಾರ ಭಾಷಣಕ್ಕೆ ಹೋಗದೇ ಅಂದುಕೊಂಡ ಎಲ್ಲ ಕೆಲಸಗಳನ್ನು ಮುಗಿಸಿ ಮಕ್ಕಳು ಹಾಗೂ ಶಂಕರನೊಂದಿಗೆ ಸುತ್ತಾಡಲು ಹೋಗಬೇಕೆಂದ ಆಕೆಗೆ ಶಂಕರ ನೀಡಿದ ಶಾಕ್ ಎಂದರೆ ಮಧ್ಯಾಹ್ನ ಗೆಳೆಯನೊಂದಿಗೆ ಇಂಗ್ಲಿಷ್ ಪಿಕ್ಚರ್ ನೋಡಲು ಹೋದ, ಬರುತ್ತಲೇ ಬೇಗೆ ಊಟ ಮುಗಿಸಿ ಅವರ J.E. ಯ ಕಾರು ಖಾಲಿ ಇದ್ದ ನಿಮಿತ್ತ ಮರಳಿ ಬೆಳಗಾಂವಕ್ಕೆ ಹೊರಟ. ಅಷ್ಟೇ ಅಲ್ಲ ಮುಂದಿನ ವಾರ ಬರುವಿರಾ ಎಂದು ಕೇಳಿದ್ದಕ್ಕೆ "ನೋಡ್ತೀನಿ. ಸೂಟೀ ಇದ್ರೂ ಕೆಲಸ ಇದ್ದು ಇರ್ತಾವ", ತುಂಟನಗೆ ನಕ್ಕು "ಹಗಲೆಲ್ಲಾ ಬಂದ ಮಾಡುದರ ಏನದೆ? ನಿನಗೂ ಮೊದಲಿನ ಹುರುಪ ಇಲ್ಲ ಈಗೆ" ಎಂದು ಹೊರಟೇ ಹೋದ.

ಮಾವ ಹೇಳಿದ ಮಾತು 'ದೂರ ಲಾಜ್‌ನಾಗ ಒಬ್ಬ ಇರ್ತಾನ ಏನ ಮಾಡ್ತಾನೋ ಯಾರಿಗೆ ಗೊತ್ತು ಎಂದಿದ್ದು, ಅಂದುಕೊಂಡ ಕೆಲಸಗಳಲ್ಲಿ ಎಂದೂ ಆಗದಿದ್ದು ನೆನೆಸಿ 'ಯಾಕೋ ಕಣ್ಣಿಗೆ ಕತ್ತಲು ಬಂದಂತೆನಿಸಿ ಆಕೆ ಬಾಗಿಲಲ್ಲೇ ಕುಸಿದಳು'. 'ಸುರಿದು ಕನ್ನಡಿ ಮಸುಕಾಗಿ ತನ್ನ ಪ್ರತಿಬಿಂಬ ಕಾಣದಾಯ್ತು' ಎಂಬ ವಾಕ್ಯ. ಹಲವು ಬಾರಿ ಇಂತಹ ಆಸೆಗಳು ಮೂಡಿ ಮರೆಯಾಗಿವೆ. 'ಮುಗಿಲಿಗೆ ಹಾರುವ ಇಂತಹ ರಿಹರ್ಸಲ್ ಎಷ್ಟು ಬಾರಿ ನಡೆದಿಲ್ಲ' ಎಂಬ ವ್ಯಂಗ್ಯವೂ ಮೂಡಿದೆ.

ಮಳೆ, ಚಳಿ, ಇದ್ದಾಗ ತನಗೆ ಸವುದು ಸಿಕ್ಕು ದೇಹ ಬಯಸಿದಾಗ ಮಾತ್ರ ಮಧ್ಯರಾತ್ರಿಯಲ್ಲಿ ಬರುವುದು, ನೀನು ಕಾಯುತ್ತಿರುವೆ ಎಂದು ಗೊತ್ತು ಎಂದು ಕಾರಣ ಹೇಳುವುದು. ಅಂತಹ ಎಷ್ಟೋ ರಾತ್ರಿಗಳನ್ನು ಅವನಿಗಾಗಿ ಬಾಗಿಲಲ್ಲೇ ಕಾಯ್ದು ಬೆಳಗಾಗುವವರೆಗೂ ತೆರೆದ ಕಣ್ಣಲ್ಲೇ ಅವನೊಂದಿಗೆ ಕಳೆದ ಕ್ಷಣಗಳನ್ನು ನೆನೆಯುವುದು. ಅವಳ ದೇಹದ ಬಯಕೆ ಅವನಿಗೆಂದೂ ಮುಖ್ಯವಾಗಿಲ್ಲ. ಆದರೂ ಅವನು ತಿಂಗಳು ಗಟ್ಟಲೇ ಬಿಟ್ಟು ಬಂದರೂ ತಾನು ತಹತಹಿಸಿದ ದಿನಗಳನ್ನು ಮರೆತು ಅವನೆಡೆಯಲ್ಲಿ ಮುಖವಿಟ್ಟು ಸಾರ್ಥಕತೆ ಪಡೆಯುವುದು, ತನ್ನ ಶೀಲ ಒಬ್ಬನಿಗೆ ಮೀಸಲು ಎಂಬ ಸಂಪ್ರದಾಯಿಕ ಚೌಕಟ್ಟಿನಲ್ಲೇ ತನ್ನ ಬಾಳು ವ್ಯರ್ಥ ಮಾಡುವ 'ಮಿನಿ' ತನಗಿರುವ ಎಷ್ಟೋ ಸಾಧ್ಯತೆಗಳನ್ನು ಅಲ್ಲಗಳೆದು ಬದುಕುತ್ತಾಳೆ.

ಇವೆಲ್ಲದರ ಜೊತೆ ಕೆಲಸಕ್ಕೆ ಹೋದಲ್ಲಿ ಗಂಡಸರ ಕೆಟ್ಟ ದೃಷ್ಟಿ; ಅದರಿಂದ ಬೇಸತ್ತು ಬಂದರೆ ಮನೆಯಲ್ಲಿ ಗಂಡನಿಲ್ಲ ಮಕ್ಕಳಿಲ್ಲ ಎಂಬ ಕೊರಗು. ಪಕ್ಕದ ಮನೆಯ ಮಕ್ಕಳಿಗಷ್ಟೇ ಆಡಿಸಿದರೂ ಕೊಡಿಸಿದರೂ ರಾತ್ರಿ ಯಾರೂ ಜೊತೆಯಲ್ಲಿರದೇ 'ಆ ಮಕ್ಕಳಲ್ಲಿ ಯಾರ ಕಣ್ಣು ದೊಡ್ಡವು, ಯಾರು Brave man' ಎಂದು ಕಲ್ಪಿಸಿಕೊಳ್ಳುತ್ತ ಬೆಳಕು ಮಾಡುವುದು. ಇಷ್ಟೆಲ್ಲಾ ಆದ ಮೇಲೆ ಅವಳು ಕೆನಡಾಕ್ಕೆ ಹೋಗುವುದನ್ನು ಕ್ಯಾನ್ಸಲ್ ಮಾಡಬೇಕಾಯ್ತು ಎಂದು ತಾನೇ ನಿರ್ಧಾರದ ವಾಣಿಯಲ್ಲಿ ಹೇಳಿದಾಗ ಅದಕ್ಕೆ ಅವಳು ಉತ್ತರವನ್ನೇನೂ ಕೊಡಲಿಲ್ಲ. ಆದರೆ ತುಂಬ ಸಲೀಸಾಗಿ ಅವನಿಗೊಂದು ಚೀಟಿ ಬರೆದಿಟ್ಟು ತಾನು ಟಿಕೆಟ್ ಬುಕ್ ಮಾಡಲು ಹೋದಳು.

ಕೊನೆಯಲ್ಲಿ ಅವಳು ತೆಗೆದುಕೊಂಡ ನಿರ್ಧಾರದಲ್ಲಿಯೇ ಅವಳ ಅಸ್ತಿತ್ವ ಹಾಗೂ ಬದುಕಿನ ಸಾರ್ಥಕ್ಯ ಅಡಗಿದೆ. ಅವನಿಲ್ಲದೇ ಅವಳು ಬದುಕಬಲ್ಲಳು ಈವರೆಗೂ ವಿಸ್ಮೃತಿಗೆ ತೆರಳಿದ ಪ್ರಜ್ಞೆ ಈಗ ಸರಿದಾರಿಯನ್ನು ಶೋಧಿಸಿತು.

### ಅವಳ ಸ್ವಾತಂತ್ರ್ಯ

'ಅವಳ ಸ್ವಾತಂತ್ರ್ಯ' ಈ ಕಥೆಯ ಶೀರ್ಷಿಕೆಯಲ್ಲೇ ವ್ಯಂಗ್ಯವೂ ಅಡಗಿದೆ. ಹೆಣ್ಣು ದುಡಿಮೆಯ ವಲಯಕ್ಕೆ ಪ್ರವೇಶ ಪಡೆದು ಆರ್ಥಿಕ ಸ್ವಾಲಂಬಿಯಾದರೆ ಅವಳಿಗೆ ಸ್ವಾತಂತ್ರ್ಯ ಸಿಗುತ್ತದೆ ಎಂಬ ವ್ಯಾಖ್ಯಾನ ಹುಸಿಯಾಗಿ ಅವಳು ಮನೆಯ ಒಳಗೂ ಹೊರಗೂ ದುಡಿಯುವ ಯಂತ್ರವಾಗಿದ್ದಾಳೆ. ಅವಳೆಷ್ಟೇ ಗಳಿಸಲೀ, ಸಾರ್ವಜನಿಕವಾಗಿ ಹೆಸರು ಮಾಡಿರಲಿ ತನ್ನಂತಹ ಇತರ ಹೆಣ್ಣುಗಳ ಮುಖವಾಣಿಯಾಗಿರಲಿ. ಕುಟುಂಬದಲ್ಲಿ ಅವಳ ಸ್ಥಾನ ಮಾತ್ರ ಕೆಲಸದಾಳಿನದು ಎಂಬ ವಾಸ್ತವವನ್ನು ಈ ಕಥೆ ಬಿಚ್ಚಿಡುತ್ತದೆ. ಕಾಲೇಜು ದಿನಗಳಲ್ಲಿ ವಿಮಲಾ 'ಹೆಣ್ಣು ಮಕ್ಕಳ ಉದ್ಧಾರಕ್ಕಾಗಿ ಜೀವನ ಮೀಸಲಾಗಿಡುವ' ಆದರ್ಶ ಹೊಂದಿದವಳು. ಆದರೆ ಇಂದು ಗೆಳತಿ ಶಶಿ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯ ದಿನ ಭಾಷಣ ಮಾಡಬೇಕು. 'ನಿನ್ನಂತೆ ಮಾತನಾಡುವವರು ಈ ಭಾಗದಲ್ಲಿ ಯಾರೂ ಇಲ್ಲ' ಎಂದಾಗ ವಿಮಲಾಳ ಉತ್ತರ, ಸಾರಿ ಶಶಿ ಭಾಷಣಾ ಗೀಷಣಾ ಎಲ್ಲಾ ಬಿಟ್ಟು, ಹಳೇ ಮಾತಾಡು ನನಗ ಈಗ ಯಾವ ಇಂಟರೆಸ್ಟೂ ಇಲ್ಲ ಟೈಮೂ ಇಲ್ಲ' ಎಂದು ಹೇಳಬೇಕಾದರೆ ಅಂದಿನ ಆದರ್ಶಕ್ಕೂ ಇಂದಿನ ವಾಸ್ತವಕ್ಕೂ ಇರುವ ಅಜಗಜಾಂತರ ವ್ಯತ್ಯಾಸವನ್ನಿಲ್ಲಿ ಗುರುತಿಸಬಹುದು.

ಮೂವತ್ತು ಪೈಸೆಯನ್ನು ಬಸ್ಸಿಗೆ ಕೊಡದೇ ಲೆಕ್ಕ ಹಾಕಿ ಗಂಡನಿಗಾಗಿ ಸೊಪ್ಪನ್ನು ಖರೀದಿಸುವ ಅವಳು ಗಂಡನ ಸ್ವಾರ್ಥ, ನಿರ್ಲಕ್ಷ್ಯ ಬೇಜವಾಬ್ದಾರಿತನದಿಂದ ಕುಸಿದರೂ ಸಂಸಾರ ನಿರ್ವಹಿಸಿಕೊಂಡು ಹೋಗುವ ಅನಿವಾರ್ಯತೆ ಇದೆ.

ಶನಿವಾರ ಶಂಕರ ಬಂದಾಗ 'ಇನ್ಶೂರೆನ್ಸ್‌ಗಾಗಿ ಹಣ ತುಂಬುವ ಕೆಲಸ' 'ಪಾಪುವಿನ ಜ್ವರ', 'ಮಾವನವರ ಹೊಟ್ಟೆನೋವಿಗೆ ಔಷಧಿ ಕೊಡಿಸುವುದು' ಮಳೆಗಾಲಕ್ಕೆ ಕಟ್ಟಿಗೆ ತರುವ ಕೆಲಸ' ಗಳನ್ನು ಮಾಡಬೇಕೆಂದು ಲೆಕ್ಕ ಹಾಕುತ್ತ ಕುಳಿತ ಮಿಮಲಾಗೆ ಆತ ಬಂದ ತಕ್ಷಣ' 'ಆಸಹನೆಯಿಂದಲೇ' - "ಇದೇನು ಗದ್ದಲ ವಿಮಲಾ? ಈ ಹುಡುಗರ ಧಾಂದಲೆ ರಸ್ತೇಕ ಕೇಳಿಸ್ತಿತ್ತು.

ಹೆಂಡತಿ ಗ್ರ್ಯಾಜ್ಯುಯೇಟ್ ಇದ್ದರ ಮಕ್ಕಳ್ನ ಛಲೋತ್ನಾಗಿ ಬೆಳಸ್ತಾಳಂತ ಕಡಿಮೆ ವರದಕ್ಷಿಣೆ ತಗೊಂಡ ನಿನ್ನ ಲಗ್ನಾದೆ. ನೀ ಹುಡುಗುರ್ಗೀ ಸ್ವಲ್ಪ Discipline ಕಲಿಸಿಲ್ಲ ನೋಡು".

ಹೆಣ್ಣುಮಕ್ಕಳ ಉದ್ಧಾರದ ಬಗ್ಗೆ ಭಾಷಣ ಮಾಡುತ್ತಿದ್ದ ವಿಮಲಾ ಇಂದು ಆ ಮಾತಿಗೆ ಗಂಡನಿಗೆ ಎದುರೇನೂ ಹೇಳಲಾರದ ಅಸಹಾಯಕತೆಯು ಆಕೆಯ ಮೌನದಲ್ಲಿ ಅಡಗಿದೆ. ಕಥೆಯ ಕೊನೆಯು ಅವಳ ಬದುಕಿನ ವ್ಯಂಗ್ಯದ ಕೊನೆಯ ಹಂತ ತಲುಪಿದೆ.

"ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಕಾಲು ಶತಮಾನ ಕಳೆದು ಹೋದರೂ ನಮ್ಮ ಹೆಂಗಸರು ಮಾತ್ರ ಇನ್ನೂ ಗುಲಾಮಗಿರಿಯಲ್ಲೇ ಇದ್ದಾರೆ. ಇದಕ್ಕೆ ಕಾರಣ ೨೫% ಸಂಪ್ರದಾಯ ೨೫% ಪರಿಸ್ಥಿತಿ ಇನ್ನು ೫೦% ಗಂಡಸರು (ಚಪ್ಪಾಳೆ) ಇದು ಅಂತರ್‌ರಾಷ್ಟ್ರೀಯ ಮಹಿಳಾ ವರ್ಷ. ಮಹಿಳೆಯರಿಗೆ ಸ್ವತ್ವದ ಬಗ್ಗೆ ಜಾಗೃತಿಯನ್ನುಂಟು ಮಾಡಿಕೊಡುವ ವರ್ಷ. ನಾವಿನ್ನು ಎಚ್ಚೆತ್ತು ಕೊಳ್ಳಬೇಕು. ದಾಸ್ಯದ ಸಂಕೋಲೆಯನ್ನು ಹರಿದೊಗೆಯಬೇಕು. ನಮಗಾಗುತ್ತಿರುವ ಅನ್ಯಾಯ ವನ್ನು ಎಲ್ಲ ವಿಧದಲ್ಲೂ ಪ್ರತಿಭಟಿಸಬೇಕು. ಯಾವ ಕಾರಣಕ್ಕಾಗಿಯೂ ಯಾರೆದುರೂ ಬಗ್ಗ ಬಾರದು. ಅಂದಾಗ ಮಾತ್ರ".

'ರವಿವಾರ ಸಂಜೆ ಹುಬ್ಬಳ್ಳಿಯ ಟೌನ್ ಹಾಲಿನಲ್ಲಿ ನೆರೆದ ಅಪಾರ ಮಹಿಳಾ ವೃಂದ ಕಿವಿ-ಕಣ್ಣು-ಬಾಯಿ ಎಲ್ಲ ತೆರೆದುಕೊಂಡು ಪ್ರಶಂಸೆ ಬೆರೆತ ಕೌತುಕದಿಂದ ಶ್ರೀಮತಿ ವಿಮಲಾ ಶಂಕರ ಅವರ ಭಾಷಣ ಕೇಳುತ್ತಿತ್ತು'. ಇದು ಒಬ್ಬ ವಿಮಲಾಗೆ ದೊರೆತ ಸ್ವಾತಂತ್ರ್ಯ ಅಲ್ಲ, ದುಡಿಮೆ ವಲಯಕ್ಕೆ ಮುಖಾಮುಖಿಯಾಗಿ ಸ್ವಾತಂತ್ರ್ಯ ಪಡೆಯಬಲ್ಲೆ ಎಂಬ ಭ್ರಮೆಯಲ್ಲಿ ಉಳಿದ ಅನೇಕ ಭಾರತೀಯ ಶ್ರೀಮತಿಯರ ಜೀವನದ ವಾಸ್ತವ. ಈ ಕಥೆಯು ಇಂತಹ ಸ್ವಾತಂತ್ರ್ಯ ಬೇಕೆ? ಇದರಿಂದ ಬಿಡುಗಡೆ ಹೇಗೆ ಎಂಬ ಚಿಂತನೆಗೆ ಎಡೆಮಾಡಿಕೊಡುತ್ತದೆ.

**ಹನುಮಾಪುರದಲ್ಲಿ ಹನುಮ ಜಯಂತಿ**

ಹನುಮಾಪುರದಲ್ಲಿ ಹನುಮ ಜಯಂತಿ ನಿಮಿತ್ತ ಜಾತ್ರೆ ಅಲ್ಲಿ ಪೂಜಾ ಮಾಡುವ ನಿಮಿತ್ತ ಬ್ರಾಹ್ಮಣ ಹಾಗೂ ಶೂದ್ರರಿಗೂ ಆಗುವ ಜಗಳ ಈ ಕಥೆಯ ವಸ್ತು. ಇಲ್ಲಿ ಮನೆಬಿಟ್ಟು ಹೊರಗೆ ಬರದ ಹೆಣ್ಣುಗಳು ಕೂಡ ಜಗಳ ನೋಡಲು ಹೊರಗೆ ಬಂದರೂ, ಒಬ್ಬರಿಗೊಬ್ಬರು ಹೊಡೆದು ಬಡಿದುಕೊಳ್ಳುವುದರಲ್ಲಿ ಜಾತ್ರೆ ಮುಗಿಯಿತು.

ಇಷ್ಟು ದಿನ ತುಳಿತಕ್ಕೊಳಗಾದ ಶೂದ್ರರು ಗುಡಿಯ ಬಪ್ಪ ಓರಣ ಎಲ್ಲ ನಾವು ಮಾಡಬೇಕು. ಪೂಜೆ ಮಾತ್ರ ಬ್ರಾಹ್ಮಣರೇಕೆ ಮಾಡಬೇಕೆಂದು ಪಟ್ಟು ಹಿಡಿದರು. ತಲೆತಲಾಂತರಿಂದ ಬಂದ ಸಂಪ್ರದಾಯ ತಾವು ಬಿಟ್ಟು ಕೊಡುವುದಿಲ್ಲವೆಂದು ಬ್ರಾಹ್ಮಣರು. ಇವರೀರ್ವರಲ್ಲಿ ಹಿರಿಯರಾದ ರಾಮೇಗೌಡ, ಗೋಪಾಲಾಚಾರ್ಯರು ತಾವು ಬಾಲ್ಯದಲ್ಲಿ ಕೂಡಿ ಹಣ್ಣು ತಿಂದಿದ್ದನ್ನು ನೆನಪಿಸಿ ಕೊಂಡರು. ಆದರೆ ಮಕ್ಕಳಾದ ವೀರಭದ್ರಗೌಡ ಹಾಗೂ ಕೇಶವಾಚಾರಿಯರು ಪಟ್ಟಣದಲ್ಲಿ ಓದಿಕೊಂಡು ಬಂದಿದ್ದರಿಂದ ಜಗಳ ಆರಂಭ ಆಯ್ತು. ಹೆಣ್ಣುಮಕ್ಕಳೂ ಕೂಡ ಮನೆಯಲ್ಲಿ ಅವರವರ ಜಾತಿಯನ್ನೇ ಎತ್ತಿಹಿಡಿದು ಮಾತಾಡಿದರು. ಇಷ್ಟೆಲ್ಲಾ ಮುಗಿದ ನಂತರ ರಾತ್ರಿ

ಹೊಲದಲ್ಲಿ ಕತ್ತಲಲ್ಲಿ ಕೇಶವಾಚಾರಿ ಹೊಲತಿ ಕಾಳಿಯೊಂದಿಗೆ ಸರಸವಾಡುತ್ತಿದ್ದರೆ, ವೀರಭದ್ರ ಗೌಡ ಶ್ರೀನಿವಾಸಾಚಾರ್ಯರ ವಿಧವೆ ಮಗಳು 'ಸುಶೀಲೆಯೊಂದಿಗೆ ಮಲಗಿದ್ದ'. ಕಾಮಕ್ಕೆ ಜಾತಿ ಇಲ್ಲವೆ ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ. ಜೀವ ಹೋಗುವಂತಹ ಜಗಳ ನಡೆದರೂ ಅವರಲ್ಲಿ ತಲೆ ಹಾಕದ ಹೆಣ್ಣುಗಳು ಇಲ್ಲಿ ರಾತ್ರಿ ಮಲಗಲು ಮಾತ್ರ ಯೋಗ್ಯರು ಎಂಬಂತೆ ಚಿತ್ರಿಸಲಾಗಿದೆ.

ಕಾಳಿ ಹಾಗೂ ಸುಶೀಲೆ ಜಗಳ ನಡೆದಾಗ ತಮ್ಮ ತಮ್ಮ ಸಂಬಂಧಗಳನ್ನು ಬಹಿರಂಗ ಪಡಿಸಿ ಜಗಳ ತಡೆಯುವ ಸಾಧ್ಯತೆಗಳಿದ್ದವು. ಆದರೆ ಅವರು ಹಾಗೆ ಮಾಡದೇ ತಮ್ಮ ದೇಹ ಬಯಕೆಗೆ ಮಾತ್ರ ಬೆಲೆ ಕೊಟ್ಟರು ಸಾಮಾಜಿಕ ಒಳತಿಗಾಗಿ ತಮ್ಮ ಮಾನ ಕಳೆದುಕೊಳ್ಳಲಿಲ್ಲ.

## ಹೊಟೆಲ್ ಬ್ಲೂ

ರಾಜಕೀಯ ವ್ಯಕ್ತಿಗಳು, ಸಮಾಜ ಸುಧಾರಕರು, ತಮ್ಮ ಬರವಣಿಗೆಯಿಂದ ಸಮಾಜದ ದುರ್ನಡತೆಗಳನ್ನು, ಸನ್ನಡತೆಗಳನ್ನು ಬಯಲಿಗೆಳೆಯುವ ಪತ್ರಿಕಾ ವರದಿಗಾರರು ಎನಿಸಿಕೊಂಡ ವರೆಲ್ಲ. ಆಡುವ ಮಾತುಗಳು ಏನು? ನಡೆಸುವ ಕೃತಿ ಎಂಥದು ಎಂಬ ಸೂಕ್ಷ್ಮ ನೋಟವನ್ನು ಈ ಕಥೆಯಲ್ಲಿ ಕಾಣಬಹುದು.

ಹೊಟೆಲ್ 'ಬ್ಲೂ'ನ ಮ್ಯಾನೇಜರ್ ಜೋಸೆಫ್ 'ಬ್ರಿಟಿಷ್ ಕಾಲದಲ್ಲಿ ಎಂ.ಎ. ಮಾಡಿದ್ದ ತಾನು ಈ ಹೊತ್ತಿಗೆ ಯಾವುದೋ ಯನಿವರ್ಸಿಟಿಯಲ್ಲಿ ಪ್ರೊಫೆಸರ್ ಆಗಿದ್ದುಕೊಂಡು ಕನ್ನಡಕ ಹಾಕಿ ಕಾರಲ್ಲಿ ಕೂತುಕೊಂಡು ಪುಸ್ತಕ ಓದುತ್ತಾ ಹಾಯಾಗಿ ಓಡಾಡಿರಬಹುದಾಗಿತ್ತು'. ಅಲ್ಲಿರುವ ಕ್ಯಾಬರೆ ಡಾನ್ಸರ್ ರೀವಾ 'ಎಲ್ಲ ಹೆಂಗಸರಂತೆ ಯಾರನ್ನೋ ಮದುವೆಯಾಗಿ ಮಕ್ಕಳನ್ನು ಆಡಿಸುತ್ತ ಇರುವುದನ್ನು ಬಿಟ್ಟು ಈ ಹೋಟಲಲ್ಲಿ ಕ್ಯಾಬರೇ ಮತ್ತೇನನ್ನೇ ಮಾಡು ತ್ತಿದ್ದಾಳೇಕೆ - ಅನ್ನುವುದಕ್ಕೂ ಉತ್ತರವಿಲ್ಲ. ಜೀವನದಲ್ಲಿ ಬಹಳ ಪ್ರಶ್ನೆಗಳಿಗೆ ಉತ್ತರವಿಲ್ಲ'.

ಈ ರೀತಿಯ ಜೀವನ ಸತ್ಯವನ್ನು ಯೋಚಿಸುತ್ತ ಕುಳಿತಿದ್ದಾನೆ. ಈ ಹೋಟಲಿಗೆ ಕಿಡಿ ಪತ್ರಿಕೆ ಸಂಪಾದಕ ಅಯ್ಯಂಗಾರ್, ಸೋಶಿಯಲ್ ವರ್ಕರ್ ಕೇಸಕರ್, ಕವಿ ಶಿವನಾಥ ಶೆಟ್ಟರ, ಪೊಲಿಟಿಕಲ್ ಸಾಯನ್ಸ್ ಪ್ರೊಫೆಸರ್ ಶಂಕರಪ್ಪ, ಎಲ್ಲರೂ ಯಾವುದೋ ಮೀಟಿಂಗಗೆಂಬಂತೆ ಸೇರಿ ಕುಡಿಯುತ್ತ ಇಡೀ ದೇಶದಲ್ಲಾಗುವ ಅನ್ಯಾಯದ ಕುರಿತು ಹಾಗೂ ತಾವು ಮುಂದೆ ಮಾಡುವ ಸಭೆಯ ಕುರಿತು ನಿರ್ಣಯ ತಗೊಳ್ಳುತ್ತಿದ್ದಾರೆ.

ಮಹಿಳೆಯರ ಬಗ್ಗೆ ಅವರ ಅಭಿಪ್ರಾಯ ಹೀಗಿದೆ. ಅಲ್ಲದೇ ಮರುದಿನ ಭಾಷಣದ ಟಾರ್ಗೆಟ್ - 'ಬಿಟ್ಟು, ನಮ್ಮ ಸಮಾಜದ ಗಂಡಸ್ರು - ಅವ್ರ ಹೆಣ್ಮಕ್ಕಳ ಮ್ಯಾಲೆ ಮಾಡೋ ಅನ್ಯಾಯ, ಅತ್ಯಾಚಾರ. ಪಾಪ ಮಾಡಿದವ್ರು ಹಿಂದೂಸ್ಥಾನದಾಗ ಹೆಂಗಸರಾಗಿ ಹುಟ್ತಾರೇನೋ ಅನಸ್ತದ ನನಗ. ಒಮ್ಮೊಮ್ಮೆ ಎಷ್ಟು ರೀತಿಯಿಂದ ಹೆಂಸರ ಮ್ಯಾಲೆ ದಬ್ಬಾಳಿಕೀ ನಡೀತದ ನಮ್ಮ ಸಮಾಜದಾಗ! ಹೆಂಗಸರ ಮಾನಾ, ಮರ್ಯಾದಿ ಗೌರವಾ ಕಾಯೋದು ನಮ್ಮ ಕರ್ತವ್ಯ'.

## ಒಂದು ರವಿವಾರ

'ಒಂದು ರವಿವಾರ'ವು ಮೂರ ಜನ ಯುವತಿಯರ ಮನಸ್ಸಿನ ವೈರುಧ್ಯಗಳನ್ನು ಹಾಗೂ ಜೀವನ ವಾಸ್ತವವನ್ನು ಬಿಚ್ಚಿಡುತ್ತದೆ. ಮೂರು ಕೋಣೆಯಂತೆ ಮೂರು ಜನರ ಸ್ವಭಾವಗಳು ಭಿನ್ನವಾಗಿವೆ. ಅವರ ಅಂತರಂಗದ ಒಳತೋಟಿಗಳೇ ಬೇರೆ, ಅವರ ಜೀವನ ಸತ್ಯವೇ ಬೇರೆ ಹಾಗೂ ಅವರು ಹೊರಜಗತ್ತಿಗೆ ತೋರಿಸಿಕೊಳ್ಳುವ ರೀತಿಯೇ ಬೇರೆ. ಮುಂಜಾನೆ, ಮಧ್ಯಾಹ್ನ, ಸಂಜೆ ಈ ಮೂರು ಭಾಗಗಳು ಅವರ ಮೂರು ರೀತಿಯ ಬದುಕಿನ ಸಂಕೇತವಾಗಿ ಮೂಡಿ ಬಂದಿವೆ.

'Gone with Wind' ಎಂಬ ಚಲನಚಿತ್ರವು ಹೆಸರೇ ಸೂಚಿಸುವಂತೆ ಅವರ ಬಯಕೆಗಳು ಕೇವಲ ಕಲ್ಪನೆಗಳಾಗಿ ಗಾಳಿಯಲ್ಲಿ ಹಾರಾಡುತ್ತಿವೆ ಎಂಬುದರ 'ಪ್ರತಿಮೆ'ಯಾಗಿದೆ.

'ಮುಂಜಾನೆ' ಅವರು ಆ ದಿನವನ್ನು ಹೇಗೆ ಕಳೆಯುತ್ತಾರೆ ಎಂಬ ಸಂಭಾಷಣೆಯಲ್ಲಿ ತಮ್ಮದಲ್ಲದ ಇರುವಿಕೆಯನ್ನು ತೋರಿಸಿಕೊಳ್ಳುತ್ತಾರೆ. 'ಮಧ್ಯಾಹ್ನ' ಚಲನಚಿತ್ರವನ್ನು ನೋಡಿ ಬಂದು 'ಮದುವೆ' ಹಾಗೂ ಹೆಣ್ಣು-ಗಂಡುಗಳ ಸಂಬಂಧದ ಬಗ್ಗೆ ತಮಗಿರುವ ಅಭಿಪ್ರಾಯದ ವಿರುದ್ಧ ಹೇಳಿಕೆ ನೀಡುವುದರ ಮೂಲಕ ವಾಸ್ತವವನ್ನು ಮರೆಮಾಚುತ್ತಾರೆ. 'ಸಂಜೆ' ಅವರು ಬೇರೆ ಬೇರೆ ಸ್ಥಳಗಳಲ್ಲಿ ತಮ್ಮ ನಿಜವಾದ ಬದುಕನ್ನು ಬದುಕುತ್ತಾರೆ.

ನಲವತ್ತರ ಹರೆಯದ ಗಿರಿಜಾ ಆಸ್ತಿ ಅಂತಸ್ತಿದ್ದು ಆರ್ಥಿಕವಾಗಿ ಸಬಲಳೂ ಹಾಗೂ ಉದ್ಯೋಗಸ್ಥೆ. ಆದರೆ ತಂದೆ, ಅಣ್ಣ, ಗಂಡ ಯಾವ ಗಂಡಿನಾಶ್ರಯ ಇಲ್ಲ ಎಂಬ ಕೊರಗಿದ್ದರೂ ಅದನ್ನು ತೋರಿಸಿಕೊಳ್ಳಲಾರಳು. ಮದುವೆಯ ವಿಷಯವನ್ನು ಗೆಳತಿಯರು ಎತ್ತಿದಾಗ "ಯಾಕ ಎಲ್ಲಾ ಹೆಂಗಸ್ರು ಲಗ್ನ - ಲಗ್ನ ಅಂತ ಬಡಕೋತಾರೆ ಅಂತೀನಿ. ಏನದ ಅದರಾಗ? ಒಬ್ಬ ಹುಂಬ ಗಂಡಸಿನ ಆಳಾಗಿ ಇರೋದು. ಅವರಿಗೆ ಹೆಂಸ್ಸರ ಮನಸ್ಸು Understand ಆಗೋದಿಲ್ಲ. ಬಿಡೋದಿಲ್ಲ. ಇವ್ರು ಬರೇ ಮಕ್ಕಳ್ನ ಹಡಕೋತ ಸಾಯೋದು. Disgusting! ನನಗಂತೂ ಅವರನ್ನು ಕಂಡರ ಆಗೋದಲ್ಲ. ನಾ ಹಿಂಗ್ರೆ ಇರಬೇಕು ಅಂತ decide ಮಾಡಿ ಬಿಟ್ಟೇನಿ" ಎಂದು ಹೇಳುವ ಇವಳು ಸಂಜೆ ಯಾರು ಇಲ್ಲದಾಗ ತಣ್ಣೀರನ್ನು ಹೊಯ್ದು ಕೊಂಡು 'ಒಳಗಿನ ಬೆಂಕಿಯಾದರೂ ಕರಗೀತೆಂದು ಇನ್ನಷ್ಟು ನೀರು ಹೊಯ್ದುಕೊಂಡಳು'. 'ಬೆಂಕಿ ಎಂತಹ ಬೆಂಕಿ ಇದು!', 'ರೇಖಾ ತನ್ನ ಗೆಳೆಯರ ಸುದ್ದಿ ಹೇಳುವಾಗ, ಶಾಂತಾಳ ಹಿಂದೆ ನಾಯಿಗಳ ಹಾಗೆ ಬೆನ್ನಟ್ಟುವ ಗಂಡಸರ ಗುಂಪು ನೋಡುವಾಗ, ಅಣ್ಣ-ಅತ್ತಿಗೆಯರ ಜೋಡು ಮಂಚ ಕದ್ದು ನೋಡುವಾಗ - ಭುಗಿಲೆನ್ನುವ ಬೆಂಕಿ. ಇದರಿಂದ ತನಗೆ ಬಿಡುಗಡೆಯೇ ಇಲ್ಲವೇ?

ಮದುವೆಯಾಗವ ಆಸೆಯಿದೆ. ಕೊನೆಗೆ ಪ್ರೊ. ಜೋಶಿ ಸಹಕರಿಸಿದರೆ ತನ್ನಲ್ಲಿರುವ ಬೆಂಕಿ ಯನ್ನಾದರೂ ಆರಿಸಿಕೊಳ್ಳುವ ಪ್ರಯತ್ನವೂ ನಡೆಯಿತು. ಆದರೆ ಅದಾವುದೂ ಈಡೇರುತ್ತಿಲ್ಲ. ಏಕೆಂದರೆ ಈಕೆಗೆ ಟಿ.ಬಿ. ಇದೆ. ಅಂತಹ ಭೀಕರ ಕಾಯಿಲೆ ಅಲ್ಲವಾದರೂ ಸಮಾಜ ಅವಳನ್ನು ಸ್ವೀಕರಿಸಲು ತಯ್ಯಾರಿಲ್ಲ. ಆದ್ದರಿಂದಲೇ ಅವಳು ಯಾರನ್ನಾದರೂ ಕಂಡರೆ ಅವರಿಗೆ ಟಿ.ಬಿ. ಇರಬಹುದು ಎಂದೇ ತಿಳಿಯುವಷ್ಟು ಭ್ರಮಿತಳಾಗಿದ್ದಾಳೆ.

ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳಲಾಗದ ಗಿರಿಜಾ ಬೇರೆಯವರ ಸಂತೋಷವನ್ನು ಕಂಡು ಕರುಬುತ್ತಾಳೆ. ಒಬ್ಬರ ಇದಿರಿಗೆ ಒಬ್ಬರನ್ನು ಆಡಿಕೊಳ್ಳುವ ಹಾಗೂ 'ಹಾಂಗ ಕೇಳದ್ರ ನನಗೆ ಮಂದೀ, ಸುದ್ದಿ ಮಾತಾಡೋದs ಸೇರೋದಿಲ್ಲ' ಎಂದು ಹೇಳುತ್ತಾಳೆ. ಬೇರೆಯವರು ಭವಿಷ್ಯ ಕೇಳುವುದನ್ನು ನಂಬುವುದನ್ನು ವಿರೋಧಿಸುವ ಇವಳು ಪ್ರತಿ ರವಿವಾರ ಜೋಶಿಯ ಹತ್ತಿರ ಹೋಗಿ ತನ್ನ ಮದುವೆ ಎಂದಾಗುವುದು ಎಂದು ಕೇಳುತ್ತಾಳೆ. ಬಾಸನ ಮನೆಯಲ್ಲಿ ಅವನ ಹೆಂಡತಿ ಅವಮಾನ ಮಾಡಿದರೂ ಸಂಜೆ ಗೆಳತಿಯರಂತೆ ತಾನೂ ತಡವಾಗಿ ಬರುತ್ತಾಳೆ. ವಿಚಿತ್ರ ರೀತಿಯ ಮಾನಸಿಕ ಕ್ಷೋಭೆಗೊಳಗಾದ ಈ ಹೆಣ್ಣಿನ ಚಿತ್ರಣವನ್ನು ನೀಡಿದ್ದಾರೆ.

ಶಾಂತಾ ಮೆಡಿಕಲ್ ಕಾಲೇಜಿನಲ್ಲಿ ಓದುವ ಸುಂದರ ಯುವತಿ. ಸಾಕಷ್ಟು ಹುಡುಗರು ಇವಳ ಮಾತಿನ ಮೋಡಿಗೆ ಮರುಳಾಗುತ್ತಾರೆ. ಗೆಳತಿಯರ ಎದುರಿಗೆ ಓದುವ ಹವ್ಯಾಸ ಬಹಳ ಇರುವಂತೆ ತೋರಿಸಿಕೊಳ್ಳುವ ಹಾಗೂ ಪ್ರತಿಭಾವಂತೆಯಾದ ಇವಳು - "ಲಗ್ನಾ ಮಾಡಿ ಕೊಳ್ಳೋದು ಮುರ್ಖತನ ಅನ್ನೂದಿಲ್ಲ ನನಗೆ. ಲಗ್ನ ಅಂದರ ಪವಿತ್ರ ಬಂಧನ. ಅದರ ಲಗ್ನ ಇಲ್ಲದೆ ಸಿಕ್ಕವರ ಕೂಡ ಸಂಬಂಧ ಬೆಳಸತಾರಲ್ಲ ಈ ಇಂಗ್ಲಿಶ್ ಪಿಕ್ಚರಿನ್ಯಾಗ. ಅದು ಮಾತ್ರ ತೀರ ಹೊಲಸು ಅನಸ್ತದ ನನಗೆ. ಎಷ್ಟ ಪಾಪದ ಕೆಲಸಲs ಅದು? ಹಾಗೆಲ್ಲಾ ಮಾಡಿದರ ಗಂಡಾ-ಹೆಂಡ್ತಿ ಸಂಬಂಧದ Sacrednessಕ್ಕೆ ಏನ ಕಿಮ್ಮತ್ತು ಉಳಿದಾಂಗಾತು?

ಸಂಜೆ ಚಿನ್ಮಯಾನಂದ ಜೀ ಭಾಷಣ ಕೇಳಿ ಆಧ್ಯಾತ್ಮ ಪ್ರವೃತ್ತಿ ಬೆಳೆಸಿಕೊಳ್ಳಲೆಂದು ಹೊರಟ ಶಾಂತಾ 'ಚಿನ್ಮಯ ವರ್ಮಾ' ಎಂಬ ಅಸಿಸ್ಟೆಂಟ್ ಕಮೀಷನರನ ಜೊತೆ ತನ್ನ ಆಸೆಯನ್ನು ಪೂರೈಸಿಕೊಳ್ಳುತ್ತಾಳೆ.

ಆಕೆಯ ಕಾಮನೆಗಳನ್ನು ಈಡೇರಿಸಿಕೊಳ್ಳುತ್ತಿದ್ದರೂ ಅದು ಸಮಾಜ ನಿರೀಕ್ಷೆಯ ವಿರುದ್ಧ ವಾಗಿವೆ ಎಂದು ತಿಳಿದು ಮೇಲ್ನೋಟಕ್ಕೆ 'ಅದು ಪಾಪ' ಎಂದು ಹೇಳುವುದರ ಮೂಲಕ ಉತ್ತಮ ನೈತಿಕತೆಯನ್ನು ಪ್ರದರ್ಶಿಸುತ್ತಾಳೆ.

ರೇಖಾಳು 'Enjoy' ಮಾಡೋ ಅಪಾರ್ಚುನಿಟಿ ಇದ್ದಾಗ Enjoy ಮಾಡಬೇಕು. 'ಕತ್ತಲಲ್ಲಿ ಯಾರ ಜೊತೆಗಾದರೂ ಹೋದರೆ ಗೊತ್ತಾಗತದ ಅದು ಸುಖಾ' 'ಈಗ ನಾವು ಆರಾಮಾಗಿರೋ ದಿವಸ ಮುದಕರಾದ ಮ್ಯಾಲೆ ಅಥವಾ ಲಗ್ನ ಮಾಡಿಕೊಂಡ ಮ್ಯಾಲೆ ಹೀಂಗೆ ಇರ್ಲಿಕೆ ಆದೀತೇನು? ಅದಕ್ಕs ನನಗ ಎಷ್ಟು ವರಾ ಬಂದ್ರೂ ನಾ ಎಲ್ಲಾರ್ನೂ reject ಮಾಡೀನಿ ಎಂದೂ. ಮಧ್ಯಾಹ್ನ ಜಗನ್ನಾಥನ್ ಜೊತೆ ಸಂಜೆ ಶ್ರೀಧರ ಕುಲ್ಕರ್ಣಿಯ ಕಡೆ ಡಿನರ್‌ಗೆ ಹೋಗಬೇಕೆಂದು ಗೆಳತಿ ಯರ ಎದುರು ಹೇಳುವ ಇವಳು ಸಂಜೆ ಎರಡು ಕಡೆ ಮನೆ ಪಾಠ ಮುಗಿಸಿಕೊಂಡು ಮಾಂಸಿಯ ಮನೆಯಲ್ಲಿ ಊಟ ಸಿಕ್ಕರೆ ಮಾಡಿ ಬರುವಳು. ಇದಕ್ಕೆಲ್ಲ ಕಾರಣ ಅವಳ ಬಡತನ, ತಂಗಿಯ ಮದುವೆ ಜವಾಬ್ದಾರಿ, ವಯಸ್ಸಾದ ತಾಯಿ, ಉಡುಳಾದ ತಮ್ಮಂದಿರ ಜವಾಬ್ದಾರಿ, ಆಕೆಗಂತೂ ಯಾರೂ ಮದುವೆಯಾಗುದಿಲ್ಲ. ಅಷ್ಟೆಲ್ಲಾ ಹೇಳುವ ಅವಳ ಕಡೆ ಶ್ರೀಧರನಾಗಲಿ, ಜಗನ್ನಾಥನ್ ಆಗಲಿ ಹೊರಳಿ ನೋಡುವುದಿಲ್ಲ. ಏಕೆಂದರೆ 'ಕಪ್ಪು, ಡೊಳ್ಳು ಹೊಟ್ಟೆ, ಡೊಣ್ಣೆ ಮೂಗು, ಉಬ್ಬಿದ ಹಲ್ಲೀ' ಅವಳ ಸೌಂದರ್ಯ ಎಂಬ ವ್ಯಂಗ್ಯ ಇಲ್ಲಿ ವ್ಯಕ್ತವಾಗಿದೆ.

ಈಡೇರದ ಆಸೆಗಳನ್ನು ಬಾಯಿಂದ ಅಂದು ತೀರಿಸಿಕೊಳ್ಳಲು ಹಾಗೂ ತನ್ನ ಸೌಂದರ್ಯದ ಬಗ್ಗೆ ಬೇರು ಯಾರು ಹೇಳಬಾರದು ಎಂದು ತಾನೇ ಇಲ್ಲದ್ದನ್ನು ಹೇಳಿಕೊಳ್ಳುತ್ತಾಳೆ.

ಮದುವೆಯಾಗದೇ ಉಳಿದ ಬೇರೆ ಬೇರೆ ಹೆಣ್ಣುಗಳ ಮಾನಸಿಕ ತುಮುಲಗಳ ಶೋಧ ಈ ಕತೆಯಲ್ಲಿಡಗಿದೆ. ಒಟ್ಟಿನಲ್ಲಿ ಮಹಿಳಾ ಜೀವನವು ಮೀರುವಿಕೆಯನ್ನು ಸಾಧಿಸಲು ಸಾಧ್ಯವಾಗುತ್ತಿಲ್ಲ. ಮೀರಿದರೂ ಅದನ್ನು ವ್ಯಕ್ತಪಡಿಸಲು ಹಿಂದು-ಮುಂದು ನೋಡುವ ಸಾಮಾಜಿಕ ನಿರೀಕ್ಷೆಗಳಂತೆ ತಾನೂ ಇರಲು ಬಯಸುವ ಹಂತದಲ್ಲಿಯೇ ಉಳಿದಿದ್ದಾಳೆ ಎಂಬುದನ್ನು ವೀಣಾರವರು ಚಿತ್ರಿಸಿದ್ದಾರೆ.

### ಮರ್ಯಾದೆ

ಆಸ್ತಿಯೇ ಮನುಷ್ಯನಿಗೆ ಎದುರಾದ ಮೊಟ್ಟಮೊದಲ ಕುತ್ತು' ಎಂದು ಟಾಲ್‌ಸ್ಟಾಯ್ ಹೇಳಿದ ಮಾತನ್ನು ಈ ಕಥೆಗೆ ಅನ್ವಯಿಸಿಕೊಳ್ಳಬಹುದು.

ಮದುವೆ ವಿಷಯ ಬಂದಾಗ ಅದು ಮೊದಲನೆಯದೇ ಆಗಿರಲಿ, ಎರಡನೆಯದೇ ಆಗಿರಲಿ ಅಲ್ಲಿ ಜಾತಿ ಹಾಗೂ ಆರ್ಥಿಕತೆ, ಸಾಮಾಜಿಕ ಮೌಲ್ಯಗಳು ಪ್ರಮುಖ ಪಾತ್ರವಹಿಸುತ್ತವೆ. ಸಾಮಾಜಿಕತೆಗಿಂತ ವೈಯಕ್ತಿಕತೆ ಮುಖ್ಯ ಎಂಬ ನಿಲುವುಳ್ಳ ನವ್ಯಸಾಹಿತ್ಯದ ಈ ಕಥೆಯ ನಾಯಕನಿಗೆ ಮಕ್ಕಳ ಹಾಗೂ ಸಮಾಜದ ಪರಿವೆ ಇಲ್ಲ. ಅರವತ್ತರ ವಯಸ್ಸಿನಲ್ಲೂ ತನ್ನ ಮದುವೆಯ ಆಯ್ಕೆಯೇ ಆತನಿಗೆ ಮುಖ್ಯವಾಗಿದೆ.

ತಂದೆಯ ಎರಡನೆ ಮದುವೆಯ ವಿಷಯದಲಿ ಮಕ್ಕಳು ಹಾಗೂ ಸೊಸೆಯಂದಿರು ಜಾತಿ, ಅಂತಸ್ತು ಹಾಗೂ ಸಮಾಜದಲ್ಲಿ ಆತನಿಗೂ ಹಾಗೂ ಕುಟುಂಬಕ್ಕೂ ಇರುವ ಮರ್ಯಾದೆಗೆ ಕುಂದು ಬರುವುದೆಂಬ ಮೂರು ಕಾರಣಗಳನ್ನಿಟ್ಟು ವಿರೋಧಿಸುತ್ತಾರೆ. ಆದರೆ ಅದರ ಹಿಂದಿರುವ ರಾಜಕಾರಣವೆಂದರೆ ಕೋಟ್ಯಾಂತರ ಮೌಲ್ಯದ ಆಸ್ತಿ ತಮ್ಮ ತಂದೆಯ ಎರಡನೇ ಹೆಂಡತಿಗೆ ಅರ್ಧಭಾಗ ಕೊಡಬೇಕೆಂಬುದು ಮುಖ್ಯ.

ತಾಯಿಯ ಸ್ಥಾನದಲ್ಲಿ ಇನ್ನೊಬ್ಬಳನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗದು ಎಂದು ಹೇಳುವ ಮಕ್ಕಳು ತಾಯಿಯಂತೆ ತಮ್ಮ ತಂದೆಯ ಆಹಾರ ಆರೋಗ್ಯ ಯಾವುದರ ಕಡೆಗೂ ಲಕ್ಷ್ಯ ಕೊಡುವುದಿಲ್ಲ. ಸಮಯ ಸಿಕ್ಕಾಗ ಮಾತ್ರ ಆತನ ಬಗ್ಗೆ ವಿಚಾರಿಸುತ್ತಿರುತ್ತಾರೆ. ಆಧುನಿಕತೆಗೆ ಒಪ್ಪಿಕೊಂಡಿರುವ ಯುವ ಜನತೆಯ ಜೀವನ ಶೈಲಿಯೇ ಈ ರೀತಿಯದಾಗಿದೆ. ಸಂಬಂಧಗಳು ಶಿಥಿಲಗೊಂಡಿವೆ ಎಂಬುದನ್ನು ಕಥೆಯು ಸ್ಪಷ್ಟಪಡಿಸುತ್ತದೆ. ಇಲ್ಲಿ ತಂದೆಯೂ ಯಾರ ವೈಯಕ್ತಿಕ ಬದುಕಿಗೂ ಆರೋಪ ನೀಡಲಿಲ್ಲ. ಮೊಮ್ಮಕ್ಕಳಾಗುವವರೆಗೂ ಹೆಂಡತಿಯ ಹಿಂದೆ - ಹಿಂದೆ ಇರುತ್ತಿದ್ದ ಆತ ಆಕೆ ಸತ್ತ ಕೆಲವೇ ದಿನಗಳಲ್ಲಿ ಮರುಮದುವೆಗೆ ನಿರ್ಧಾರ ಮಾಡುತ್ತಾನೆ. ಈ ಸಮಾಜದಲ್ಲಿ ಗಂಡಸರಿಗೆ ಅವರ ಆಯ್ಕೆಯ ಸ್ವಾತಂತ್ರ್ಯವಿದೆ. ಶೀಲ ಪಾವಿತ್ರ್ಯ, ಸಂಪ್ರದಾಯಗಳ ಗೋಜು ಅವರಿಗಿಲ್ಲ. ಅಲ್ಲದೇ ಆರ್ಥಿಕವಾಗಿ ಸಬಲನಾಗಿದ್ದ ತಂದೆ ಇಲ್ಲಿ ಯಾರ ಅಪ್ಪಣೆ ಅಣತಿಗಾಗಿ ಕೂರಬೇಕಾಗಿಲ್ಲ. ತನ್ನ ಮುಂದಿನ ಜೀವನದ ಲೈಂಗಿಕ ಜೊತೆಗಾತಿ

ಹಾಗೂ ತನಗೆ ಊಟ, ಉಪಚಾರ, ಔಷಧಿ ಸಮಯಕ್ಕೆ ಸರಿಯಾಗಿ ನೀಡುವ ಮಮತೆಯಿಂದ ಆದರಿಸುವ ಒಂದು ಹೆಣ್ಣು ಬೇಕಾಗಿದೆ ಅಷ್ಟೆ.

ಈಗಾಗಲೇ ಆತನು ಮದುವೆಯಾಗುವ ನಿರ್ಧಾರ ಮಾಡಿದ್ದಾನೆ. ಹಿರಿಯ ಮಗಳು ಕಮಲಾಳನ್ನು ಕರೆಯಿಸಿ ಆತನಿಗೆ ಹೇಳಿಸುವ ಕಾರ್ಯವನ್ನು ಮಕ್ಕಳಲ್ಲೆ ಮಾಡುತ್ತಿದ್ದಾರೆ. ಆದರೆ ಪರಿಸ್ಥಿತಿಯನ್ನು ಸರಿಯಾಗಿ ಅರ್ಥೈಸಿಕೊಂಡ ಕಮಲಾ ತಂದೆಯ ಮದುವೆಗೆ ತನಗೆ ಬರಲಿಕ್ಕಾಗದಿದ್ದರೆ ಬೇಜಾರು ಪಡಬಾರದು. ಸಂತೋಷವಾಗಿ ಆ ಕಾರ್ಯ ಮುಗಿಸಬೇಕು ಎಂಬ ನಿರ್ಧಾರ ಹೇಳುತ್ತಾಳೆ. ವಿರುದ್ಧ ನಿರ್ಧಾರವನ್ನೇನಾದರೂ ಅವಳು ಹೇಳಿದರೂ ಕೇಳುವ ಸ್ಥಿತಿಯಲ್ಲಿ ತಂದೆ ಇರಲಿಲ್ಲ. ಅವಳ ಅಣತಿ ಅವನಿಗೆ ಇಲ್ಲಿ ಮುಖ್ಯವಾಗಿಲ್ಲ. ಕಮಲಾಳ ನಿರ್ಧಾರ ಅವನಲ್ಲಿ ಸಮಾಧಾನ ಹಾಗೂ ಕೃತಜ್ಞತಾಭಾವ ಮೂಡಿಸುತ್ತದೆ.

ತನ್ನ ನಿರ್ಧಾರದ ಬಗ್ಗೆ ತಮ್ಮಂದಿರ ಹಾಗೂ ಕುಟುಂಬದ ಎಲ್ಲ ಸದಸ್ಯರ ಅಸಮಾಧಾನಕ್ಕೆ ಅವಳು ಗುರಿಯಾದರೂ ಅವರ ಬಗ್ಗೆ ವಿಚಾರ ಮಾಡದ ದಿಟ್ಟತನ ಅವಳಲ್ಲಿದೆ.

ಇಷ್ಟೆಲ್ಲಾ ಸುದೀರ್ಘ ಚರ್ಚೆ ನಡೆದರೂ ಇಲ್ಲಿ ಮದುವೆಯಾಗುವ ಕೆಲಸದ ಹೆಣ್ಣಿನ ಆಯ್ಕೆ ನಿರಾಕರಣೆಗಳ ಪ್ರಶ್ನೆ ಮುಖ್ಯವಾಗುವುದೇ ಇಲ್ಲ. ಅದರ ಬಗ್ಗೆ ಅವಳ ಮಾತು ಕತೆಯಲ್ಲೆಲ್ಲೂ ಕಂಡು ಬರುವುದಿಲ್ಲ. ಕೇವಲ ಯಜಮಾನನ ಯೋಗಕ್ಷೇಮವೇ ಅವಳಿಗೆ ಮುಖ್ಯ. ಮದುವೆಯಾಗಿ ಅವನೊಂದಿಗೆ ಸುಖಿಸುವ ಅಥವಾ ಆಸ್ತಿಗಾಗಿ ಅವನ ಜೊತೆಯಾಗುವ ಯಾವ ಉದ್ದೇಶಗಳು ಅವಳಿಗೆ ಇದ್ದಂತೆ ಕಂಡು ಬಂದಿಲ್ಲ. ತನ್ನ ಜೀವನ ಅತೀ ಮುಖ್ಯ ಘಟ್ಟ ಮದುವೆ. ಅದರಲ್ಲೂ ಅವಳ ನಿರ್ಧಾರ ತಿಳಿಸುವ ಯಾವ ಅವಕಾಶವೂ ಇಲ್ಲ ಎಂಬುದನ್ನು ಕಥೆ ನಿರೂಪಿಸುತ್ತದೆ.

...

೧೯

# ಮಹಿಳೆಯರ ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ

ಶ್ರೀಮತಿ ಶೈಲಶ್ರೀ ಅಹಿರಸಂಗ
ಡಾ. ಎಂ.ಬಿ. ದಿಲ್‌ಶಾದ್

ಸರ್ಕಾರೇತರ ಸಂಘ-ಸಂಸ್ಥೆಗಳು ಆಧುನಿಕ ಸಮಾಜದಲ್ಲಿ ಕಂಡುಬರುವ ಮಹತ್ವದ ಬೆಳವಣಿಗೆಯಾಗಿವೆ. ೨೦ನೇ ಶತಮಾನದಲ್ಲಿ ಹೆಚ್ಚು ಪ್ರಚಲಿತವಿರುವ ಸಂಘಟನೆಗಳಾಗಿವೆ. ೧೯೭೦-೮೦ರ ದಶಕದ ಅವಧಿಯಲ್ಲಿಯೇ ಹೆಚ್ಚು ಜನಪ್ರಿಯತೆಯನ್ನು ಪಡೆದುಕೊಂಡಿದ್ದವು. ಇದಕ್ಕೆ ಮುಖ್ಯ ಕಾರಣವೆಂದರೆ ಸರ್ಕಾರೇತರ ಸಂಘಟನೆಗಳು ಜನರ ಅಭಿವೃದ್ಧಿಯೊಂದಿಗೆ ಇಡೀ ಸಮಾಜವನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ದು ದೇಶದ ಅಭಿವೃದ್ಧಿಯ ಕಡೆ ಗಮನ ಹರಿಸುತ್ತಿವೆ.

೧೯೭೫ರಲ್ಲಿ ವಿಶ್ವಸಂಸ್ಥೆಯು ಅಂತರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ಆಚರಿಸಿದ ಮೇಲೆ ಮಹಿಳಾಪರ ಸಂಘಟನೆಗಳು ಸ್ಥಾಪನೆಯಾದವು. ಶೋಷಿತ ಮಹಿಳೆಯರು ತಮಗೆ ನ್ಯಾಯ ದೊರಕಿಸಿಕೊಳ್ಳುವ ಸಲುವಾಗಿ ಸ್ವಂತ ಸಂಘಟನೆಗಳನ್ನು ರೂಪಿಸಿಕೊಂಡು, ಬುದ್ಧಿ ಜೀವಿಗಳೊಂದಿಗೆ ಗುರುತಿಸಿಕೊಂಡು, ವ್ಯವಸ್ಥೆಯ ವಿರುದ್ಧ ತಿರುಗಿಬಿದ್ದರು. ಆ ಸಂದರ್ಭದಲ್ಲಿ ಸ್ತ್ರೀಯರ ಸಂಘಟನೆಗಳೊಂದಿಗೆ ವೈಚಾರಿಕತೆಯುಳ್ಳ ಪುರುಷರು ಕೈ ಜೋಡಿಸಿದರು. ಇದರಿಂದಾಗಿ ಮಹಿಳೆಯರು ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಹೋರಾಟಕ್ಕೆ ಸಂಘಗಳನ್ನು ರಚಿಸಿಕೊಂಡು ಬೀದಿಗಿಳಿದರು. ಮಹಿಳೆಯರ ಮೇಲಾಗುತ್ತಿರುವ ಲೈಂಗಿಕ ಶೋಷಣೆಯ ವಿರುದ್ಧ ಮತ್ತು ಲಿಂಗ ಅಸಮಾನತೆಯ ವಿರುದ್ಧ ಮತ್ತು ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಗತಿ ಸಾಧಿಸಲು ಸಂಘಟಿತರಾದರು. ಇಂದು ದೇಶದಾದ್ಯಂತ ಒಂದು ಲಕ್ಷಕ್ಕೂ ಹೆಚ್ಚು ಎನ್.ಜಿ.ಓ.ಗಳು ಕಾರ್ಯ ನಿರ್ವಹಿಸುತ್ತಿವೆ, ಇಂತಹ ಎನ್.ಜಿ.ಓ.ಗಳು ಮಹಿಳೆಯರು, ಮಕ್ಕಳು, ಯುವಜನತೆ, ಪರಿಸರ, ಆರೋಗ್ಯ ಮೊದಲಾದ ವಿಷಯಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

ಕೆಲವು ಸಂಘಟನೆಗಳು ಯಾರ ಅನುದಾನಕ್ಕೂ ಕೈ ಚಾಚದೆ ನಿರ್ಮಲವಾದ ಮನಸ್ಸಿನಿಂದ ಸ್ವಂತ ಖರ್ಚಿನಲ್ಲಿ ಮಹಿಳಾಪರ ಹೋರಾಟವನ್ನು ನಡೆಸುತ್ತಿವೆ. ನಿಜವಾದ ಕಳಕಳಿಯಿಂದಲೇ ಕೆಲಸ ಮಾಡುವ ಸಂಘಟನೆಗಳು ಬೆರಳೆಣಿಕೆಯಷ್ಟು ಉದಾಹರಣೆಗೆ ಮೈಸೂರಿನ ಸಮತಾ ವೇದಿಕೆ. ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಪರಿಹರಿಸಲು ಸ್ಥಾಪನೆಗೊಂಡ ಸಾವಿರಾರು ಮಹಿಳಾ ಸಂಘಟನೆಗಳು ಭಾರತದಾದ್ಯಂತ ಕಳೆದ ಮೂವತ್ತು ವರ್ಷಗಳಿಂದ ತಮ್ಮದೇ ಆದ ರೀತಿಯಲ್ಲಿ ಸೇವೆ ಸಲ್ಲಿಸುತ್ತಿವೆ. ಮಹಿಳಾ ಸಂಘಟನೆಗಳು ಬೇರೆ ಬೇರೆ ಸೈದ್ಧಾಂತಿಕ ನೆಲೆಯಲ್ಲಿ ಕೆಲಸ ಮಾಡುತ್ತಿವೆ. ಎಲ್ಲ ಸಂಘಟನೆಗಳು ಒಂದೇ ಉದ್ದೇಶಕ್ಕೆ ದುಡಿಯುತ್ತಿವೆ. ಎಲ್ಲ ಮಹಿಳಾ ಹೋರಾಟಗಳು ಜಾಗತಿಕ ಆಂದೋಲನಗಳಾಗಿ ರೂಪುಗೊಳ್ಳಬೇಕಾಗಿದೆ.

ಇಲ್ಲಿಯವರೆಗೆ ವರದಕ್ಷಿಣೆ, ಕೌಟುಂಬಿಕ ಹಿಂಸೆ, ಆತ್ಮಹತ್ಯೆ, ವೇಶ್ಯಾವೃತ್ತಿ ಇತ್ಯಾದಿ ಸಮಸ್ಯೆಗಳ ವಿರುದ್ಧ ಮಹಿಳಾ ಸಂಘಟನೆಗಳು ಹೋರಾಡುತ್ತಿದ್ದವು. ಈಗ ಹೊಸ ಸಮಸ್ಯೆಗಳು ಮಹಿಳೆಯರಿಗೆ ಎದುರಾಗುತ್ತಿವೆ. ಕಾಲ್‌ಸೆಂಟರ್‌ಗಳಲ್ಲಿ ದುಡಿಯುವ ಮಹಿಳೆಯರನ್ನು ಅತ್ಯಾಚಾರ ಮಾಡಿ ಕೊಲ್ಲುವುದು, ಶಾಲೆಗೆ ಕಲಿಯಲು ಹೋದ ಅಪ್ರಾಪ್ತ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಮಾಡುವುದು, ದೊಡ್ಡ ದೊಡ್ಡ ಹೋಟೆಲುಗಳಲ್ಲಿ ಗೌರವಾನ್ವಿತರಂತೆ ನಡೆದುಕೊಳ್ಳುತ್ತಾ ವೇಶ್ಯಾವೃತ್ತಿ ನಡೆಸುತ್ತಿರುವುದು, ಹೀಗೆ ಆತಂಕ ಹುಟ್ಟಿಸುವ ಸವಾಲುಗಳು ಮಹಿಳಾ ಸಂಘಟನೆಗಳಿಗೆ ಎದುರಾಗಿವೆ. ರಾಜಕೀಯ ಪಕ್ಷಗಳು ತಮ್ಮ ಮತದ ಸ್ವಾರ್ಥಕ್ಕಾಗಿ ಮಹಿಳಾ ಸಂಘಟನೆಗಳನ್ನು ಸೆಳೆದುಕೊಂಡು ತಮ್ಮ ಗೆಲುವಿನ ಸಫಲತೆಗೆ ತೊಡಗಿಸಿಕೊಳ್ಳುವುದು ಹೆಚ್ಚಾಗುತ್ತಿದೆ. ಇದೇ ರೀತಿಯಾಗಿ ವಿಧಾನಸಭೆ ಮತ್ತು ಸಂಸತ್ತುಗಳಲ್ಲಿ ಕೆಲವೇ ಕೆಲವು ಮಹಿಳೆಯರು ಮಾಡುವ ಸಾಧನೆಯನ್ನು ಎತ್ತಿ ಹಿಡಿಯುತ್ತಾ "ಮಹಿಳೆಯರು ಪ್ರಗತಿಯಲ್ಲಿದ್ದಾರೆ" ಎಂದು ತೋರಿಸುತ್ತಾರೆ. ಆದರೆ ವಾಸ್ತವವಾಗಿ ಮಹಿಳೆಯರು ಕ್ಷಣ ಕ್ಷಣವು ನೋವು ಅನುಭವಿಸುತ್ತಿದ್ದಾರೆ, ಸಾಯುತ್ತಿದ್ದಾರೆ. ಆದ್ದರಿಂದ ಸಂಘಟನೆಗಳು ಮಹಿಳಾ ಪರವಾಗಿ ಶ್ರಮಿಸಬೇಕಾದ ದೂರ ಅಗಾಧವಾಗಿದೆ ಮತ್ತು ಅನಂತವಾಗಿದೆ.

## ಸ್ವಯಂ ಸೇವಾ ಸಂಸ್ಥೆಗಳ ವ್ಯಾಖ್ಯೆಗಳು

೧. ಸಮಾಜದ ಏಳ್ಗೆಗಾಗಿ ನಿಶ್ಚಿತ ಗುರಿಯನ್ನು ಇಟ್ಟುಕೊಂಡು ಜನರಿಗೋಸ್ಕರ ಯಾವುದೇ ಫಲಾಪೇಕ್ಷೆಯಿಲ್ಲದೆ ಸೇವೆಯನ್ನು ಮಾಡುವ ಸಂಸ್ಥೆಗಳಿಗೆ ಎನ್.ಜಿ.ಓ. ಎಂದು ಕರೆಯುವರು.

೨. ವಿಶ್ವ ಬ್ಯಾಂಕ್ ಪ್ರಕಾರ ಇದು ಒಂದು ಖಾಸಗಿ ಸಂಘಟನೆಯಾಗಿದ್ದು, ಶೋಷಣೆ ತಡೆಗಟ್ಟುವುದು, ಬಡಜನರ ಹಿತಾಸಕ್ತಿಯನ್ನು ಕಾಪಾಡುವುದು, ಪರಿಸರ ರಕ್ಷಣೆ, ಸಮುದಾಯದ ಅಭಿವೃದ್ಧಿ ಸಾಧಿಸುವ ಸಂಸ್ಥೆಯೇ ಸ್ವಯಂ ಸೇವಾ ಸಂಘಟನೆಯಾಗಿದೆ.

೩. ಸ್ವತಂತ್ರವಾಗಿರುವ ಜನರಿಂದಲೇ ಕಟ್ಟಲ್ಪಟ್ಟ, ಪ್ರತಿಯೊಬ್ಬ ವ್ಯಕ್ತಿಗೂ ಮನ್ನಣೆ ನೀಡುವ, ಜಾತಿ, ಧರ್ಮ, ವರ್ಗ, ಲಿಂಗರಹಿತವಾದ ಸಮುದಾಯವನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಲಗೊಳಿಸುವ ಸಂಸ್ಥೆಯನ್ನು ಎನ್.ಜಿ.ಓ. ಎಂದು ಕರೆಯುವರು.

## ಸ್ವಯಂ ಸೇವಾ ಸಂಸ್ಥೆಗಳ ಐತಿಹಾಸಿಕ ಬೆಳವಣಿಗೆ

ಸ್ವಯಂ ಸೇವಾ ಸಂಸ್ಥೆಗಳು ಸಮಾಜದಲ್ಲಿ ನಿರ್ಗತಿಕರೆಂದು ಗುರುತಿಸಲ್ಪಟ್ಟವರು, ವಿಧವೆಯರು, ದಿಕ್ಕಿಲ್ಲದವರು, ಅಶಕ್ತರು, ಅನಾಥರು ಮೊದಲಾದ ವರ್ಗಗಳ ಜನರ ಬದುಕಿಗೆ ಆಸರೆ ನೀಡಲು ಹುಟ್ಟಿಕೊಂಡ ಸಂಸ್ಥೆಗಳಾಗಿವೆ. ಇಂತಹ ಸ್ವಯಂ ಸೇವಾ ಸಂಸ್ಥೆಗಳ ಅಸ್ತಿತ್ವ ಅಥವಾ ಬೆಳವಣಿಗೆಯನ್ನು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಹೀಗೆ ಎರಡು ರೀತಿಯಾಗಿ ಅಧ್ಯಯನ ಮಾಡಲಾಗಿದೆ.

## ಸ್ವಾತಂತ್ರ್ಯ ಪೂರ್ವದಲ್ಲಿ ಸ್ವಯಂ ಸೇವಾ ಸಂಸ್ಥೆಗಳು

ನಾವು ಇತಿಹಾಸವನ್ನು ಅವಲೋಕಿಸಿದಾಗ ಅರ್ಥಶಾಸ್ತ್ರದಲ್ಲಿ ಎನ್.ಜಿ.ಓ. ಉಲ್ಲೇಖವನ್ನು ಕಾಣುತ್ತೇವೆ. ಇವು ಶಿಕ್ಷಣ ಮತ್ತು ಆರೋಗ್ಯದಿಂದ ವಂಚಿತರಾದ ಅನಾಥರಿಗೆ, ಬಡವರಿಗೆ, ರೋಗಿಗಳಿಗೆ, ನೈಸರ್ಗಿಕ ವಿಕೋಪಗಳಲ್ಲಿ ಬಲಿಯಾದವರಿಗೆ ನೆರವು ನೀಡುತ್ತಾ ಬಂದಿವೆ ಹೀಗೆ ಒಂದಲ್ಲಾ ಒಂದು ರೀತಿಯಲ್ಲಿ ಸಮಾಜಕ್ಕೆ ಸಹಾಯಕವಾದ ಸಂಸ್ಥೆಗಳಾಗಿವೆ. ಇವು ೧೮, ೧೯ ಮತ್ತು ೨೦ನೇ ಶತಮಾನದಲ್ಲಿ ಸಮಾಜದಲ್ಲಿ ಇರುವ ಅನಿಷ್ಟ ಪದ್ಧತಿಯನ್ನು ಹೋಗಲಾಡಿಸಲು ಶ್ರಮಿಸಿದವು. ವಿಧವಾ ವಿವಾಹ, ಸತಿ ಸಹಗಮನ, ಬಾಲ್ಯ ವಿವಾಹ, ಪರದಾ ಪದ್ಧತಿ ಇನ್ನೂ ಮುಂತಾದ ಸಾಮಾಜಿಕ ಸಮಸ್ಯೆಗಳನ್ನು ಹೋಗಲಾಡಿಸಲು ರಾಜಾರಾಮ್ ಮೋಹನರಾಯ್, ಜ್ಯೋತಿ ಬಾ ಪುಲೆ, ಮಹಾತ್ಮ ಗಾಂಧೀಜಿ, ಅಂಬೇಡ್ಕರ್ ಮುಂತಾದವರು ತಮ್ಮದೇ ಆದ ಚಿಂತನೆ ಹಾಗೂ ಸಂಘಟನೆಗಳ ಮೂಲಕ ಮಹಿಳೆ ಮತ್ತು ಸಮಾಜದ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ.

## ಸ್ವಾತಂತ್ರ್ಯ ನಂತರದಲ್ಲಿ ಸ್ವಯಂ ಸೇವಾ ಸಂಸ್ಥೆಗಳು

ಸ್ವಾತಂತ್ರ್ಯ ಪೂರ್ವದಲ್ಲಿ ಯಾವುದೇ ಪ್ರಚಾರವಿಲ್ಲದೆ ಹೆಚ್ಚು ಶ್ರಮಿಸುತ್ತಿದ್ದ ಎನ್.ಜಿ.ಓ.ಗಳು ಸ್ವಾತಂತ್ರ್ಯದ ನಂತರ ಹೆಚ್ಚು ಬೆಳಕಿಗೆ ಬಂದವು. ೧೯೫೩ರಲ್ಲಿ ಸಿ.ಎಸ್.ಡಬ್ಲ್ಯೂ.ಜಿ. ಅಂದರೆ ಕೇಂದ್ರ ಕಲ್ಯಾಣ ಸೇವಾ ಇಲಾಖೆಯು ಸಮಾಜ ಕಲ್ಯಾಣ ಇಲಾಖೆಯನ್ನು ಸ್ಥಾಪಿಸಿತು. ಇದು ಅಭಿವೃದ್ಧಿ ಕಾರ್ಯಗಳಿಗಾಗಿ ಧನ ಸಹಾಯವನ್ನು ಒದಗಿಸುತ್ತದೆ.

೧೯೫೦ರಲ್ಲಿ ಯೋಜನಾ ಆಯೋಗ ಅಸ್ತಿತ್ವಕ್ಕೆ ಬಂದಿತು. ಮುಂಬೈಯಲ್ಲಿರುವ ಸಂಘಟನೆಗಳು ಮಕ್ಕಳ ಅಭಿವೃದ್ಧಿ ಕ್ಷೇತ್ರದಲ್ಲಿ ಮುಖ್ಯ ಪಾತ್ರವನ್ನು ಹೊಂದಿವೆ. PAD (People Action Development India) ಎಂಬ ಸಂಸ್ಥೆಯು ಕೆಲವು ಗ್ರಾಮೀಣ ಅಭಿವೃದ್ಧಿ ಯೋಜನೆಗೆ ಸಂಬಂಧಿಸಲ್ಪಟ್ಟಿದ್ದು, ಇದು ಕೋಳಿ ಸಾಕಾಣಿಕೆಯಲ್ಲಿ, ಹೈನುಗಾರಿಕೆಯಲ್ಲಿ, ಕೃಷಿಯಲ್ಲಿ ಹಾಗೂ ಅನೇಕ ಗ್ರಾಮೀಣ ಕೈಗಾರಿಕೆಗಳಲ್ಲಿ ಅಭಿವೃದ್ಧಿ ಹೊಂದಲು ಸಹಾಯ ಮಾಡುತ್ತದೆ.

ಅನೇಕ ಮಹಿಳಾ ಸಂಘಟನೆಗಳು, ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು, ಅನೇಕ ಬಗೆಯ ಸಬಲೀಕರಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಮಹಿಳಾ ಸ್ವಯಂ ಉದ್ಯೋಗ

ಸಂಸ್ಥೆ (Sewa) ಎಂಬ ಸಂಸ್ಥೆಯು ಮಹಿಳೆಯರಿಗೆ ಸ್ವಯಂ ಉದ್ಯೋಗದ ಅವಕಾಶಗಳನ್ನು ಒದಗಿಸಿಕೊಡುವುದರ ಜೊತೆ ಸಂಘಟನೆ ಬೆಳೆಸುವ ಹಾಗೂ ಮಹಿಳೆಯರಲ್ಲಿ ಜಾಗೃತ ಆತ್ಮಪ್ರಜ್ಞೆ ಯನ್ನು ಮೂಡಿಸುವ ಕಾರ್ಯ ಮಾಡುತ್ತಿದೆ.[೯]

## ಸರ್ಕಾರೇತರ ಸಂಘ ಸಂಸ್ಥೆಗಳ ಬೆಳವಣಿಗೆ

ಇತ್ತೀಚಿನ ದಶಕಗಳಲ್ಲಿ ಎನ್.ಜಿ.ಓ.ಗಳ ಸಂಖ್ಯೆಯೂ ಬೃಹತ್ ಪ್ರಮಾಣದಲ್ಲಿ ಬೆಳೆಯುತ್ತಿದೆ. ಒಂದು ಅಂದಾಜಿನ ಪ್ರಕಾರ ದಕ್ಷಿಣ ಏಷ್ಯಾದಲ್ಲಿ ೮೫,೦೦೦ ಎನ್.ಜಿ.ಓ. ಇವೆ ಎನ್ನಲಾಗಿದೆ. ಇವುಗಳಲ್ಲಿ ಭಾರತದಲ್ಲಿ ೨೫,೦೦೦, ಪಾಕಿಸ್ಥಾನದಲ್ಲಿ ೧,೦೦೦, ಬಾಂಗ್ಲಾ ದೇಶದಲ್ಲಿ ೧೯,೦೦೦, ಶ್ರೀಲಂಕಾದಲ್ಲಿ ಸುಮಾರು ೩೦,೦೦೦ ಕ್ರಿಯಾಶೀಲವಾಗಿವೆ. ಇವುಗಳಲ್ಲಿ ಕೆಲವು ಅತ್ಯಂತ ಚಿಕ್ಕದಾಗಿದ್ದರೆ ಕೆಲವು ಹೆಸರಿಗೆ ಮಾತ್ರ ಉಳಿದುಕೊಂಡಿದ್ದು ಅವು ಜಾಗತಿಕ ಸಂದೇಶವನ್ನು ಸಾರುತ್ತಿವೆ.

ಎನ್.ಜಿ.ಓ.ಗಳ ಕಾರ್ಯಗಳು ವೈವಿಧ್ಯಮಯವಾಗಿವೆ. ಎನ್.ಜಿ.ಓ.ಗಳ ಕಾರ್ಯವ್ಯಾಪ್ತಿ ಬಾಂಗ್ಲಾ ದೇಶದಲ್ಲಿ ವ್ಯಾಪಕವಾಗಿ ಬೆಳೆದಿದೆ. ಅಲ್ಲಿ ಎನ್.ಜಿಜಿ.ಓ.ಗಳು ಸುಮಾರು ಶೇ. ೭೫ರಷ್ಟು ಗ್ರಾಮಗಳನ್ನು ತಮ್ಮ ಕಾರ್ಯವ್ಯಾಪ್ತಿಗೆ ತಂದುಕೊಂಡಿವೆ. ಸುಮಾರು ೩೦೦ ಲಕ್ಷಕ್ಕೂ ಅಧಿಕ ಜನರು ಇವುಗಳಿಂದ ಅನುಕೂಲ ಪಡೆಯುತ್ತಿದ್ದಾರೆ. ಒಟ್ಟಾರೆ ಬಾಂಗ್ಲಾ ದೇಶದ ಜನಸಂಖ್ಯೆಯಲ್ಲಿ ಶೇ. ೨೫ರಷ್ಟು ಜನರು ಎನ್.ಜಿ.ಓ.ಗಳಿಂದ ಅನುಕೂಲ ಪಡೆಯುತ್ತಿದ್ದಾರೆ. ಪಾಕಿಸ್ಥಾನದಲ್ಲಿರುವ ಅರ್ಧದಷ್ಟು ಎನ್.ಜಿ.ಓ.ಗಳು ಮಹಿಳೆಯರ ಅಭಿವೃದ್ಧಿ ಕಾರ್ಯಕ್ರಮ ರೂಪಿಸುವಲ್ಲಿ ನಿರತವಾಗಿವೆ.

ಅನೇಕ ಬೃಹತ್ ಎನ್.ಜಿ.ಓ.ಗಳು ವಿದೇಶಿ ಸಂಸ್ಥೆಗಳಿಂದ ಅಪಾರ ಹಣಕಾಸು ನೆರವು ಪಡೆಯುತ್ತಿವೆ. ವಿದೇಶಿ ಸಾಮಾಜಿಕ ಸೇವಾ ಪ್ರತಿಷ್ಠಾನಗಳು ಅಭಿವೃದ್ಧಿಶೀಲ ದೇಶಗಳಲ್ಲಿ ಅಭಿವೃದ್ಧಿ ಚಟುವಟಿಕೆಗಳನ್ನು ಎನ್.ಜಿ.ಓ.ಗಳ ಮೂಲಕ ಕೈಗೊಳ್ಳಲು ಇಷ್ಟಪಡುತ್ತವೆ.

## ಸರ್ಕಾರೇತರ ಸಂಘ ಸಂಸ್ಥೆಗಳ ಮಹತ್ವ

ಇಂದಿನ ದಿನಗಳಲ್ಲಿ ಎನ್.ಜಿ.ಓ.ಗಳು ಎಲ್ಲ ದೇಶಗಳಲ್ಲಿ ಅಣಬೆಗಳಂತೆ ತಲೆ ಎತ್ತಿವೆ. ಕೆಲವು ಸಂಸ್ಥೆಗಳು ಸರ್ಕಾರದ ಆಶ್ರಯದಲ್ಲಿ ಕಾರ್ಯನಿರ್ವಹಿಸುತ್ತಿವೆ. ಇಂತಹ ಸಂಸ್ಥೆಗಳಿಂದ ನಾವು ಸಾಮಾಜಿಕ ಬದಲಾವಣೆಯನ್ನಾಗಲಿ, ಆತ್ಮಪ್ರಜ್ಞೆಯ ಜಾಗೃತಿಯನ್ನಾಗಲಿ, ಸಂಘರ್ಷಣೆಯ ಧೋರಣೆಯನ್ನಾಗಲಿ ಬಯಸಲು ಸಾಧ್ಯವಿಲ್ಲ. ಆದರೆ, ಅನೇಕ ಎನ್.ಜಿ.ಓ.ಗಳು ಅಸಮಾನ್ಯ ರೀತಿಯಲ್ಲಿ ಕೆಲಸ ಮಾಡುತ್ತಿರುವ ಸಂಗತಿಯನ್ನು ಅನೇಕ ಅಧ್ಯಯನಗಳು ತಿಳಿಸುತ್ತವೆ. ಎನ್.ಜಿ.ಓ.ಗಳು ಕೇವಲ ಬಡವರನ್ನು, ದುರ್ಬಲರನ್ನು, ಮಹಿಳೆಯರನ್ನು, ಅಂಚಿನಲ್ಲಿರುವವರನ್ನು ಮುಖ್ಯ ಗುರಿಯನ್ನಾಗಿಸಿಕೊಂಡು ಕೆಲಸ ಮಾಡುತ್ತಿವೆ. ಬುಡಕಟ್ಟು ಜನ ವರ್ಗಗಳ, ಪರಿಶಿಷ್ಟರ ಹೊಟ್ಟೆಬಟ್ಟೆ ಬದುಕನ್ನು ಉತ್ತಮಪಡಿಸುವ ಕೆಲಸಕ್ಕೆ ಮಾತ್ರ ತಮ್ಮನ್ನು ತಾವು ಮುಡುಪಾಗಿಟ್ಟುಕೊಂಡಿಲ್ಲ. ಅವು ಸಂಘಟನೆಗಳಲ್ಲಿ ತೊಡಗಿವೆ ಮತ್ತು ಸಂಘರ್ಷದಲ್ಲಿ

ಹೋರಾಡಿವೆ. ಬಡವರು ಬಡವರಾಗಿಯೇ ಇರುವುದಕ್ಕೆ ಸಾಮಾಜಿಕ, ಆರ್ಥಿಕ, ರಾಜಕೀಯ ಸಂಗತಿಗಳನ್ನು ಗುರುತಿಸಿ ಅವುಗಳನ್ನು ಪರಿವರ್ತಿಸುವ ನಿಟ್ಟಿನಲ್ಲಿ ನಿರತವಾಗಿವೆ. ಮಹಿಳೆಯರ ಅಭಿವೃದ್ಧಿ, ಉದ್ಯೋಗ, ಆರೋಗ್ಯ, ಶಿಕ್ಷಣ, ಜಾಗೃತಿ ಮುಂತಾದವುಗಳನ್ನು ಉತ್ತಮಪಡಿಸುವುದು ಎಷ್ಟೇ ಮುಖ್ಯವಾಗಿದ್ದರೂ ಅವುಗಳಲ್ಲಿ ಲಿಂಗತಾರತಮ್ಯ ಉಂಟಾಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಮತ್ತು ತಾರತಮ್ಯದ ಸುಧಾರಣೆಗೆ ಪ್ರಯತ್ನಿಸುವುದು ಎನ್.ಜಿ.ಓ.ಗಳು ಹೆಚ್ಚು ಮುಖ್ಯವಾಗುತ್ತದೆ.

ಜಾಗತಿಕ ಮಟ್ಟದಲ್ಲಿ ಉಂಟಾಗುತ್ತಿರುವ ಅನೇಕ ಬಗೆಯ ವಿವಾದಾತ್ಮಕ ಸಂಗತಿಗಳ ಬಗ್ಗೆ ಎಚ್ಚರಿಕೆ ಕೆಲಸವನ್ನು ನಿರಂತರವಾಗಿ ಮಾಡುತ್ತವೆ. ಅನೇಕ ಮಹಿಳಾ ಸಂಘಟನೆಗಳು ಮಹಿಳೆಯರ ಅಭಿವೃದ್ಧಿಯನ್ನು ಆನುಷಂಗಿಕ ಉದ್ದೇಶವನ್ನಾಗಿ ಮಾಡಿಕೊಂಡು ಮಹಿಳೆಯರನ್ನು ಸಂಘಟಿಸುವ ಕಾರ್ಯಕ್ಕೆ ಅವಧಾರಣೆ ನೀಡಿ ಕ್ರಿಯಾಶೀಲವಾಗಿವೆ. ಮಹಿಳೆಯರ ಸಬಲೀಕರಣ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅಭಿವೃದ್ಧಿಗಿಂತ ಅಧಿಕವಾಗಿ ಮಹಿಳೆಯರ ಆತ್ಮಪ್ರಜ್ಞೆ ಯನ್ನು ಜಾಗೃತಗೊಳಿಸುವ ಕೆಲಸವು ಮುಖ್ಯವಾಗಿದೆ. ಬಡವರಿಗೆ ಸಾಮಾಜಿಕ ಸೌಲಭ್ಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಒದಗಿಸುವ ಕೆಲಸವನ್ನು ಸರ್ಕಾರಗಳ ಪಾತ್ರ ಮತ್ತು ಗಾತ್ರ ಮಿತಿಮೀರಿ ಬೆಳೆದಿದ್ದರಿಂದಾಗಿ ಸಾಮಾಜಿಕ ವಲಯ ಅಲಕ್ಷಿಸಲ್ಪಟ್ಟಿತು. ಇದರಿಂದಾಗಿ ಸರಕಾರೇತರ ಸಂಘ ಸಂಸ್ಥೆ ಸಮಾಜದ ಅಭಿವೃದ್ಧಿಯತ್ತ ಗಮನಹರಿಸಿವೆ.[೨] ಸರ್ಕಾರಿ ಅಥವಾ ಅರೆ ಸರ್ಕಾರಿ ಸಂಸ್ಥೆ ಗಳ ವ್ಯಾಪ್ತಿಯ ಹೊರಗಿರುವ ಸಾಮಾಜಿಕ ಸೇವೆಯನ್ನು ಮೂಲ ಉದ್ದೇಶವನ್ನಾಗಿಟ್ಟುಕೊಂಡಿವೆ. 'ಸಂಘಟನೆಗಳೇ ಸರ್ಕಾರೇತರ ಸೇವಾ ಸಂಸ್ಥೆಗಳು' ಈ ಸಂಘಟನೆಗಳು ಸಂಸ್ಥೆಗಳು ಸರ್ಕಾರದ ಮತ್ತು ಅರೆ ಸರ್ಕಾರಿ ಸಂಸ್ಥೆಗಳಿಂದ ಹಣಕಾಸು ನೆರವನ್ನು ಪಡೆಯುತ್ತವೆ. ಅನೇಕ ಸಂದರ್ಭ ಗಳಲ್ಲಿ ಸರ್ಕಾರಗಳು ತಮ್ಮ ಅಭಿವೃದ್ಧಿ ಸಂಸ್ಥೆಗಳಿಂದ ಹಣಕಾಸು ನೆರವನ್ನು ಪಡೆಯುತ್ತವೆ. ಅನೇಕ ಸಂದರ್ಭಗಳಲ್ಲಿ ಸರ್ಕಾರಗಳು ತಮ್ಮ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸರ್ಕಾರೇತರ ಸೇವಾ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸಲು ಪ್ರಯತ್ನಿಸುತ್ತಿವೆ.[೩]

### ಸರ್ಕಾರೇತರ ಸಂಘ ಸಂಸ್ಥೆಗಳ ಲಕ್ಷಣಗಳು

ಯೋಜನಾ ಆಯೋಗವು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು ಹೊಂದಿರುವ ಲಕ್ಷಣಗಳನ್ನು ಹೀಗೆ ತಿಳಿಸಿದೆ.

೧. ಸರ್ಕಾರೇತರ ಸಂಘ ಸಂಸ್ಥೆಗಳು ಅಧಿಕೃತ ನೊಂದಾಯಿತ ಸಂಸ್ಥೆಗಳಾಗಿರಬೇಕು.
೨. ಗ್ರಾಮೀಣ ಪ್ರದೇಶದಲ್ಲಿ ನೆಲೆಗೊಂಡಿರಬೇಕು ಮತ್ತು ಕನಿಷ್ಟ ಮೂರು ವರ್ಷಗಳ ಕಾಲವಾದರೂ ಸ್ವಯಂ ಸೇವಾ ಚಟುವಟಿಕೆಗಳನ್ನು ಕೈಗೊಂಡಿರಬೇಕು.
೩. ಇಡೀ ಸಮುದಾಯದ ದುರ್ಬಲ, ವಂಚಿತ ವರ್ಗಗಳ ಸಾಮಾಜಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಪೂರೈಸುವ ಉದ್ದೇಶದೊಂದಿಗೆ ಸೇವಾ ಮನೋಭಾವವನ್ನು ಹೊಂದಿರ ಬೇಕು.

೪. ಲಾಭವನ್ನು ಮಾಡುವ ಉದ್ದೇಶವನ್ನು ಹೊಂದಿರದೇ, ಲಾಭ-ನಷ್ಟ ರಹಿತ ಸೇವೆಯಲ್ಲಿ ನಿರತರಾಗಿರಬೇಕು.

೫. ಸಂಸ್ಥೆಯ ಆಡಳಿತ ಮಂಡಳಿಯ ಜವಾಬ್ದಾರಿ ಇರುವ ಕಾರ್ಯಕರ್ತರು ಯಾವುದೇ ರಾಜಕೀಯ ಪಕ್ಷದ ಚುನಾಯಿತ ಸದಸ್ಯರಾಗಿರಬಾರದು.

೬. ಸಂಸ್ಥೆಗಳು ಅಭಿವೃದ್ಧಿಗಾಗಿ ಅಳವಡಿಸಿಕೊಳ್ಳುವ ವಿಧಾನಗಳನ್ನೂ ಸಂವಿಧಾನಾತ್ಮಕವೆಂದು ಮತ್ತು ಅಹಿಂಸಾತ್ಮಕವೆಂದು ಘೋಷಿಸಿಕೊಳ್ಳಬೇಕು.

೭. ನಿರ್ದಿಷ್ಟವಾಗಿ ಗುರಿ ಧ್ಯೇಯೋದ್ದೇಶಗಳನ್ನು ಹೊಂದಿರಬೇಕು. ಜೊತೆಗೆ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗೆ ಅಗತ್ಯವಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರಬೇಕು.

೮. ಜನರಿಗಾಗಿ, ಜನರಿಗೋಸ್ಕರವಾದ ಉದ್ದೇಶ ಹೊಂದಿರಬೇಕು. ಜನರಿಗೆ ಇದರ ಬಗ್ಗೆ ತಿಳಿವಳಿಕೆ ನೀಡಬೇಕು.

೯. ನಿಗಮದ ವ್ಯಾಪ್ತಿಯಲ್ಲಿ ಬರುವ ಮಹಿಳೆಯರಿಗಾಗಿ ನಿಗದಿತ ಸಂಯೋಜನಾ ವರದಿಗಳನ್ನು ತಯಾರಿಸುವುದು. ಭಾವಿ ಮಹಿಳಾ ಉದ್ಯಮಾಕಾಂಕ್ಷಿಗಳನ್ನು ಗುರುತಿಸುವುದು. ಮಹಿಳೆಯರಿಗೆ ಅವಶ್ಯಕ ಕೌಶಲ್ಯ ತರಬೇತಿಯನ್ನು ವ್ಯವಸ್ಥಿತಗೊಳಿಸುವುದು.

೧೦. ಸಂಘ ಸಂಸ್ಥೆಗಳು ಜನರ ಅಭಿವೃದ್ಧಿಗಾಗಿ ಮತ್ತು ಕಲ್ಯಾಣಕ್ಕಾಗಿ ವಚನಬದ್ಧವಾಗಿರುತ್ತವೆ. ಇವುಗಳ ಮುಖ್ಯ ಉದ್ದೇಶ ಸಾಮುದಾಯಕ ಅಭಿವೃದ್ಧಿಯಾಗಿದೆ.

೧೧. ಜನರ ಅವಶ್ಯಕತೆಗೆ ಮತ್ತು ಸಮಸ್ಯೆಗಳಿಗೆ ಹೆಚ್ಚು ಒತ್ತು ಕೊಡಬೇಕು.

## ಮಹಿಳೆಯರ ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಕಾರ್ಯಗಳು

೨೦ನೇ ಶತಮಾನದ ಪೂರ್ವಾರ್ಧದಲ್ಲಿ ರಾಷ್ಟ್ರೀಯವಾದಿ ವಿಚಾರಗಳಿಂದ ಮಹಿಳೆಯರ ಅಭಿವೃದ್ಧಿ ಹೋರಾಟಕ್ಕೆ ನಾಂದಿ ಹಾಡಿದವು. ಭಾರತ ಸ್ವತಂತ್ರವಾದ ನಂತರ ಸಮುದಾಯದ ಅಭಿವೃದ್ಧಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದವು. ಇದರಿಂದಾಗಿ ಕೇಂದ್ರಿಯ ಸಮಾಜ ಕಲ್ಯಾಣ ಮಂಡಳಿಗಳು ಮತ್ತು ರಾಜ್ಯ ಸಮಾಜ ಕಲ್ಯಾಣ ಮಂಡಳಿಗಳು ರಚನೆಯಾದವು. ಇದರಿಂದಾಗಿ ಸಾಕಷ್ಟು ಎನ್.ಜಿ.ಓ.ಗಳು ಹುಟ್ಟಿಕೊಂಡವು. ನಂತರ ಮಂಡಲಗಳು, ಮಹಿಳಾ ಸಮಾಜಗಳು ಸೃಷ್ಟಿಯಾದವು. ಕ್ರಮೇಣವಾಗಿ ಅಂತಾರಾಷ್ಟ್ರೀಯ ಏಜೆನ್ಸಿಗಳು ಎನ್.ಜಿ.ಓ.ಗಳಿಗೆ ನಿಧಿ ಮತ್ತು ದೇಣಿಗೆ ನೀಡತೊಡಗಿದವು. ಹೀಗೆ ಎನ್.ಜಿ.ಓ.ಗಳಿಗೆ ಸಾಕಷ್ಟು ಮೊತ್ತ ಲಭ್ಯವಾದ ಕಾರಣ ಮಹಿಳೆಯರ ಆರೋಗ್ಯ ಮತ್ತು ಶಿಕ್ಷಣದತ್ತ ಇವುಗಳು ತಮ್ಮ ಗಮನವನ್ನು ಕೇಂದ್ರೀಕರಿಸಿದವು.

ಮಹಿಳೆ ಪ್ರತಿಯೊಂದು ಕ್ಷೇತ್ರದಲ್ಲಿ ಧೈರ್ಯ, ಉತ್ಸಾಹ ಹಾಗೂ ಹುಮ್ಮಸ್ಸಿನಿಂದ ಧುಮುಕುವಂತಾಗಬೇಕು. ಯಾವಾಗ ಮಹಿಳೆಯು ಆರ್ಥಿಕವಾಗಿ ಸುಭದ್ರಳಾಗುತ್ತಾಳೊ ಅಂದಿನಿಂದ ಖಂಡಿತವಾಗಿ ಆಕೆಯ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳೂ ಖಂಡಿತವಾಗಿಯೂ ಉತ್ತಮಗೊಳ್ಳುತ್ತವೆ ಎಂಬುದು ಎನ್.ಜಿ.ಓ.ಗಳ ಮುಖ್ಯ ಉದ್ದೇಶವಾಗಿದೆ.[೪] ವೃತ್ತಿ ತರಬೇತಿ ಪಡೆಯುವ ಮಹಿಳೆಯರಿಗೆ ಆರ್ಥಿಕ ಸಹಾಯ : ಆರ್ಥಿಕವಾಗಿ ಹಿಂದುಳಿದ ಮಹಿಳೆಯರ ಸ್ಥಾನಮಾನ ಹೆಚ್ಚಿಸಿ ಅವರನ್ನು ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿ

ಮಾಡಲು ಮಹಿಳೆಯರಿಗೆ ಅವಶ್ಯವಿರುವ ನೈಪುಣ್ಯತೆ/ಕೌಶಲ್ಯತೆ ಒದಗಿಸಲು ನೆರವಾಗುವಂತೆ ವೃತ್ತಿ ತರಬೇತಿ ನೀಡಿ ಸರಕಾರದಿಂದ ಆರ್ಥಿಕ ಸಹಾಯವನ್ನು ಸರಕಾರದಿಂದ ಎನ್.ಜಿ.ಓ.ಗಳು ಒದಗಿಸುತ್ತವೆ.[೫] ಎನ್.ಜಿ.ಓ.ಗಳು ಅಭಿವೃದ್ಧಿ ಮಾದರಿಯಲ್ಲಿ ಜನರಲ್ಲಿ ಅರಿವು ಮೂಡಿಸುತ್ತಾ, ಮಹಿಳೆಯರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಪರಿಹಾರ ನೀಡುವಲ್ಲಿ ಮಹತ್ವದ ಹೆಜ್ಜೆಯನ್ನು ಇಡುತ್ತಿವೆ.[೬]

ಮಹಿಳೆಯರ ಸಮಸ್ಯೆಗಳನ್ನು ಪುರುಷ ಪ್ರಧಾನ ಸಮಾಜದ ಮತ್ತು ವರ್ಗ ಹಾಗೂ ಜಾತಿ ಆಧಾರಿತ ಸಮಾಜದ ಶೋಷಣೆಯಾಗಿ ಮಹಿಳಾ ಸಂಘಟನೆಗಳು ಪರಿಗಣಿಸುತ್ತವೆ. ಮೀರತ್‌ನಲ್ಲಿಯ 'ಬೇಡಿಯಾ' ಸಮುದಾಯದವರು ವೇಶ್ಯಾವೃತ್ತಿಯನ್ನು ಜೀವನೋಪಾಯಕ್ಕೆ ಬಳಸುತ್ತಿದ್ದರು. ಇವರ ವಿರುದ್ಧ ಕೆಲಸ ಮಾಡಲು ಬಯಸಿದಾಗ "ಅಖಿಲ ಭಾರತೀಯ ಸಾಮಾಜಿಕ ಸ್ವಸ್ಥ ಸಂಘ" ಇವರ ಬೆಂಬಲಕ್ಕೆ ನಿಂತು ಇಡೀ ಸಮುದಾಯವನ್ನು ವೇಶ್ಯಾವಾಟಿಕೆ ಯಿಂದ ಪಾರುಮಾಡಿತು.[೭] ಸಾಕಷ್ಟು ಜನರು ಎನ್.ಜಿ.ಓ.ಗಳ ಬೆಂಬಲದಿಂದ ತಾಲೂಕು ಪಂಚಾಯತ್, ಜಿಲ್ಲಾ ಪಂಚಾಯತ್, ಲೋಕಸಭೆ, ವಿಧಾನಸಭೆ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದು ಉತ್ತಮವಾದ ಆಡಳಿತ ನಡೆಸಿದ ಮತ್ತು ನಡೆಸುವ ಮಹಿಳೆಯರು ಇದ್ದಾರೆ. ಮಹಿಳೆಯರ ಬದುಕನ್ನು ಉತ್ತಮಪಡಿಸಲು, ದಯನೀಯ ಸ್ಥಿತಿಯಲ್ಲಿರುವ ಮಹಿಳೆಯರನ್ನು ಸಬಲ ರನ್ನಾಗಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮತ್ತು ಎನ್.ಜಿ.ಓ.ಗಳು ಕೇಂದ್ರ ಸರ್ಕಾರದ ನೆರವಿನೊಂದಿಗೆ ಕಾರ್ಯನಿರ್ವಹಿಸುತ್ತಿವೆ.[೮] ಎ.ಜಿ.ಓ.ಗಳು ಮಹಿಳಾ ಶಿಕ್ಷಣ, ಅರಿವು ಮೂಡಿಸುವುದು, ಪ್ರಜ್ಞೆ ಹೆಚ್ಚಿಸುವುದು, ಗುಂಪುಗಳನ್ನು ಬಲಪಡಿಸುವುದು, ಲಿಂಗತ್ವ ಸಮಾನತೆಯ ತರುವ ನಿಟ್ಟಿನಲ್ಲಿ ಮುತುವರ್ಜಿ ವಹಿಸುವಂತಹ ಕಾರ್ಯಗಳನ್ನು ಮಾಡುತ್ತಿವೆ.[೯] ಎನ್.ಜಿ.ಓ.ಗಳು ಬ್ಯಾಂಕುಗಳಿಂದ ಸಾಲ ಪಡೆದು ಸಾಮಾಜಿಕ ಪರಿವರ್ತನೆ ಹಾಗೂ ಆರ್ಥಿಕ ಬಲವರ್ಧನೆಗಾಗಿ ಮಹಿಳೆಯರನ್ನು ತರಬೇತಿಗೊಳಿಸುತ್ತಿವೆ. ಹೀಗಾಗಿ ಬ್ಯಾಂಕುಗಳು ಎನ್.ಜಿ.ಓ. ಗಳ ಅಭಿವೃದ್ಧಿ ಸಂಸ್ಥೆಗಳೆಂದು ಹಾಗೂ ಎನ್.ಜಿ.ಓ.ಗಳು, ಸಮಾಜ ಮತ್ತು ಮಹಿಳೆಯರ ಅಭಿವೃದ್ಧಿ ಸಾಧನಗಳೆಂದು ಹೇಳಬಹುದು. ಇಲ್ಲಿ ಸ್ವಸಹಾಯ ಗುಂಪುಗಳ ತರಬೇತಿ ಮತ್ತು ಅಭಿವೃದ್ಧಿ ಬಹಳ ಮಹತ್ವದ ವಿಷಯವಾಗಿದೆ.[೧೦] ಮಹಿಳೆಯರನ್ನು ತಾಯಂದಿರಾಗಿ, ಹೆಂಡತಿ ಯಾಗಿ, ಸಹೋದರಿಯಾಗಿ, ಅವರ ಸ್ಥಾನಮಾನಗಳನ್ನು ಗೌರವಿಸುವುದು ಮತ್ತು ಲಿಂಗತ್ವದ ಪರಿಕಲ್ಪನೆಯನ್ನು ಕಿತ್ತೊಗೆದು ಲಿಂಗಸಮಾನತೆಯನ್ನು ಕಾಪಾಡುವುದು ಎನ್.ಜಿ.ಓ.ಗಳ ಮುಖ್ಯ ಕಾಳಜಿಯಾಗಿದೆ.[೧೧]

ಮಹಿಳೆಯರಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಮೂಡಿಸುವಂತ ಪ್ರಕ್ರಿಯೆಯನ್ನು ಬಲಪಡಿಸುವುದು. ಎನ್.ಜಿ.ಓ.ಗಳು ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ಮಹಿಳೆಯರನ್ನು ತೊಡಗಿಸುವುದರ ಮೂಲಕ ಬಡಮಹಿಳೆ ಯರ ಆದಾಯವನ್ನು ಹೆಚ್ಚಿಸಿ, ಅವರಲ್ಲಿ ಆರ್ಥಿಕ ಸ್ಥಿರತೆಯನ್ನು ಮೂಡಿಸುವುದರ ಮೂಲಕ ಬಡತನ ನಿವಾರಣೆ ಮತ್ತು ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡುವ ಮನೋಭಾವ

ಬೆಳೆಸುತ್ತಿವೆ. ಎನ್.ಜಿ.ಓ.ಗಳು ಮಹಿಳೆಯರಲ್ಲಿ ಮೂಢನಂಬಿಕೆ, ಅಂಧಶ್ರದ್ಧೆ, ಮೌಢ್ಯತೆಗಳನ್ನು ಕಡಿಮೆ ಮಾಡುತ್ತಿವೆ. ಹಾಗೂ ಅನಕ್ಷರತೆ, ಬಡತನ, ವರದಕ್ಷಿಣೆ, ಕೌಟುಂಬಿಕ ಹಿಂಸೆ, ಲಿಂಗ ಅಸಮಾನತೆ ಮುಂತಾದ ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡುವ ಮನೋಭಾವವನ್ನು ಬೆಳೆಸುತ್ತಿವೆ.

ಮಹಿಳೆಯರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಾನಮಾನಗಳನ್ನು ಉತ್ತಮ ಪಡಿಸುವುದು, ದೇವದಾಸಿಯರಿಗಾಗಿ ಸರ್ಕಾರ ನೀಡುವ ಸವಲತ್ತುಗಳನ್ನು ದೊರಕಿಸುವ ಪ್ರಯತ್ನ ವನ್ನು ಎನ್.ಜಿ.ಓ.ಗಳು ಮಾಡುತ್ತಿವೆ. ಹೆಣ್ಣು ಶಿಶುಹತ್ಯೆ, ಹೆಣ್ಣಿನ ಮೇಲೆ ಅತ್ಯಾಚಾರ, ದೌರ್ಜನ್ಯ, ಲೈಂಗಿಕ ಕಿರುಕುಳ, ವರದಕ್ಷಿಣೆಗಾಗಿ ಪೀಡಿಸುವಿಕೆ, ದೈಹಿಕ ದಬ್ಬಾಳಿಕೆ, ಮನೆಯಿಂದ ಹೊರದೂಡುವಿಕೆ ಹೀಗೆ ಹತ್ತಾರು ಸಮಾಜ ವಿಮುಖಿ ಕೃತ್ಯಗಳಿಂದ ಹೆಣ್ಣನ್ನು ರಕ್ಷಿಸುವ ಕಾರ್ಯಗಳನ್ನು ಎನ್.ಜಿ.ಓ.ಗಳು ಮಾಡುತ್ತಿವೆ. ಹೆಣ್ಣನ್ನು ದೌರ್ಜನ್ಯ ಮುಕ್ತಳನ್ನಾಗಿಸಿ ಬಲಗೊಳಿಸುವುದು, ಅವಳು ತನ್ನ ಮನೆಯಲ್ಲಿ ಮತ್ತು ಸಮುದಾಯದಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಎನ್.ಜಿ.ಓ.ಗಳು ಸಹಕರಿಸುತ್ತಿವೆ.

## ಸ್ತ್ರೀಶಕ್ತಿ ಯೋಜನೆಯ ಪ್ರಮುಖ ಉದ್ದೇಶಗಳು

ಮಹಿಳೆಯರ ಆರ್ಥಿಕ ಅಭಿವೃದ್ಧಿಗಾಗಿ ಕರ್ನಾಟಕ ಸರಕಾರವು ೨೦೦೦-೨೦೦೧ ಮುಖ್ಯಮಂತ್ರಿ ಎಸ್.ಎಮ್. ಕೃಷ್ಣ ಆಡಳಿತ ಅವಧಿಯಲ್ಲಿ ಸ್ತ್ರೀಶಕ್ತಿ ಯೋಜನೆಯನ್ನು ಅನುಷ್ಠಾನದಲ್ಲಿ ತಂದಿತು.[೨] ಗಾಂಧೀಜಿಯವರು ಮಹಿಳೆಯರ ಏಳ್ಗೆಯಲ್ಲಿಯೇ ದೇಶದ ಏಳ್ಗೆ ಅಡಗಿದೆ ಎಂಬ ಧೋರಣೆಯನ್ನು ಸಾಕಾರಗೊಳಿಸುವುದೇ ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ ಎಂದಿದ್ದಾರೆ. ಕೆಲವು ಪ್ರಮುಖ ಉದ್ದೇಶಗಳು ಹೀಗಿವೆ.

೧. ಮಹಿಳೆಯರಿಗೆ ಆರ್ಥಿಕ ಭದ್ರತೆಯನ್ನು ದೊರಕಿಸಿ ಕೊಡುವುದು.
೨. ಮಹಿಳೆ ಸ್ವತಂತ್ರ ಮತ್ತು ಸ್ವಾವಲಂಬಿ ಬದುಕನ್ನು ಸಾಗಿಸಲು ಆಕೆಗೆ ಅನೇಕ ಉಪ ಜೀವನದ ಮಾರ್ಗಗಳನ್ನು ಕಲ್ಪಿಸಿಕೊಡುವುದು.
೩. ರಾಜ್ಯದ ೧೭೫ ತಾಲೂಕುಗಳಲ್ಲಿಯ ೨೦ ಮಹಿಳೆಯರಿಗೆ ಒಂದರಂತೆ ಸುಮಾರು ಒಂದು ಲಕ್ಷ ಸ್ವಸಹಾಯ ಗುಂಪುಗಳನ್ನು ನಿರ್ಮಿಸುವುದು.
೪. ಡಿಟರ್ಜಂಟ್ ಪೌಡರ, ಸಾಬೂನು, ಅಗರಬತ್ತಿ, ಮೇಣಬತ್ತಿ, ಬುಟ್ಟಿ, ಕಸೂತಿ, ನೇಯ್ಗೆ, ಸಿದ್ಧ ಉಡುಪುಗಳ ತಯಾರಿಕೆ, ಉಪ್ಪಿನಕಾಯಿ, ಸಾಂಬಾರ ಪದಾರ್ಥಗಳ ತಯಾರಿಕೆ ಮುಂತಾದ ವಿವಿಧ ಉದ್ಯೋಗಗಳಲ್ಲಿ ಮಹಿಳೆಯರಿಗೆ ತರಬೇತಿ ನೀಡುವುದು.
೫. ತರಬೇತಿ ಪಡೆದ ಮಹಿಳೆಯರಿಗೆ ರಾಷ್ಟ್ರೀಕೃತ ಹಾಗೂ ಸಹಕಾರಿ ಬ್ಯಾಂಕುಗಳಿಂದ ಅತ್ಯಂತ ಕಡಿಮೆ ಹಾಗೂ ಸರಳ ಬಡ್ಡಿ ದರದಲ್ಲಿ ಸಾಲ ಸೌಲಭ್ಯಗಳನ್ನು ನೀಡುವುದು.
೬. ಸ್ವಸಹಾಯ ತಂಡಗಳನ್ನು ಗುರುತಿಸುವ ಕಾರ್ಯವನ್ನು ಅಂಗನವಾಡಿ ಕಾರ್ಯಕರ್ತೆಯರು ಮಾಡುತ್ತಾರೆ. ಈ ದಿಸೆಯಲ್ಲಿ ಗ್ರಾಮ ಸೇವಕರು ಸಹಾಯ ನೀಡಬೇಕಾಗುತ್ತದೆ.

೭. ಸ್ವಸಹಾಯ ಗುಂಪಿನ ವ್ಯಾಪ್ತಿಯಲ್ಲಿ ಬರುವ ಮಹಿಳೆಯರ ಬಡತನ ರೇಖೆಯ ಕೆಳಗಿರುವವರು ಹಾಗೂ ಭೂರಹಿತ ಕೃಷಿ ಕಾರ್ಮಿಕ ಕುಟುಂಬಗಳಿಗೆ ಸಂಬಂಧಿಸಿದವರು ಇರಬೇಕು.

೮. ಪರಿಶಿಷ್ಟ ಜಾತಿ ಮತ್ತು ಜನಾಂಗಗಳಿಗೆ ಸಂಬಂಧಿಸಿದ ಮಹಿಳೆಯರಿಗೆ ಯೋಜನೆಯಲ್ಲಿ ವಿಶೇಷ ಪ್ರಾತಿನಿಧ್ಯ ನೀಡಲಾಗುತ್ತದೆ.

೯. ಅಂಗವಿಕಲ ಮಹಿಳೆಯರಿಗೆ, ಮದ್ಯಪಾನ ಹಾಗೂ ಮಾದಕ ಪದಾರ್ಥಗಳ ಸೇವನೆಯಿಂದ ಆರ್ಥಿಕವಾಗಿ ದುಸ್ಥಿತಿಯಲ್ಲಿರುವ ಕುಟುಂಬಗಳಿಗೆ ಸಂಬಂಧಿಸಿದ ಮಹಿಳೆಯರ ಯೋಜನೆಯ ನೆರವನ್ನು ಪಡೆಯಲು ಅರ್ಹರಾಗಿರುತ್ತಾರೆ.

೧೦. ಸ್ವಸಹಾಯ ಗುಂಪುಗಳು ಜಿಲ್ಲಾ ಕೈಗಾರಿಕಾ ಘಟಕದ ನೆರವಿನಿಂದ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಸಮಾಜ ಕಲ್ಯಾಣ ಮುಂತಾದ ಇಲಾಖೆಗಳಿಂದ ಆರ್ಥಿಕ ನೆರವು ಪಡೆದುಕೊಂಡಿವೆ. ಮಹಿಳೆಯರ ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯತ್‌ಗಳಿಂದ ತರಬೇತಿ ಶಿಬಿರಗಳಲ್ಲಿ ತರಬೇತಿಯನ್ನು ಪಡೆದುಕೊಂಡು ಸ್ವತಂತ್ರ ಉದ್ಯೋಗವನ್ನು ಮಾಡಲು ಸಬಲರಾಗಿದ್ದಾರೆ.[೧೩]

೧೧. ಮನೆಯೊಳಗೆ ದುಡಿಯುತ್ತಿದ್ದ ಮಹಿಳೆಯರು ಇಂದು ಮನೆಯಿಂದ ಹೊರಗೆ ಬರಲು ಸಾಧ್ಯವಾಗಿದೆ. ಹತ್ತಾರು ಜನರೊಡನೆ ಬೆರೆಯುವುದು, ವಿಚಾರ ವಿನಿಮಯ ನಡೆಸುವುದು, ಲೋಕ ವಿದ್ಯಮಾನಗಳನ್ನು ಅರಿಯುವುದು, ತನ್ನ ಕಷ್ಟ ಸುಖಗಳನ್ನು ಹಂಚಿಕೊಳ್ಳುವ ವೇದಿಕೆಯಾಗಿ ಸ್ತ್ರೀಶಕ್ತಿ ಗುಂಪು ನಿರ್ಮಾಣವಾಗಿವೆ.[೧೪]

೧೨. ಸ್ವಸಹಾಯ ಗುಂಪುಗಳು ಮಹಿಳಾ ಸಮಸ್ಯೆಗಳತ್ತ ತಮ್ಮ ಗಮನವನ್ನು ಕೇಂದ್ರೀಕರಿಸಲು ಎನ್.ಜಿ.ಓ.ಗಳು ನೀಡಿದ ತರಬೇತಿಗಳು ಮುಖ್ಯವಾಗಿ ಕಾರಣವಾಗಿವೆ.

೧೩. ಮಹಿಳೆಯರು ಸ್ವಸಹಾಯ ಸಂಘಗಳ ಲಾಭವನ್ನು ಮತ್ತು ಪ್ರಜಾಸತ್ತಾತ್ಮಕ ಪೌರತ್ವ ತರಬೇತಿಯನ್ನು ಪಡೆದುಕೊಳ್ಳುತ್ತಿದ್ದಾರೆ.

೧೪. ಸ್ವಸಹಾಯ ಗುಂಪುಗಳು ಮಹಿಳೆಯರಲ್ಲಿ ಅರಿವು, ಆತ್ಮವಿಶ್ವಾಸ, ಆತ್ಮಗೌರವದ ಬದುಕು, ಸ್ವಂತ ನಿರ್ಧಾರದ ನಿಲುವು, ಸಂಪನ್ಮೂಲದ ಮೇಲೆ ನಿಯಂತ್ರಣ, ಸ್ವಾವಲಂಬನೆ, ಸಮಾನತೆ ಸಾಧಿಸುವುದು, ಆಯ್ಕೆಯ ಹಕ್ಕು, ಉತ್ಪಾದನಾ ಸಾಮರ್ಥ್ಯ ವೃದ್ಧಿ, ಕೌಶಲ್ಯ ಮತ್ತು ಸಾಮರ್ಥ್ಯಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಶಕ್ತಿ ಬೆಳೆಸುತ್ತಿವೆ.

## ದೇಶದ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ

### ೧. ಮಹಿಳೆಯರ ಅಭಿವೃದ್ಧಿಯಲ್ಲಿ ಎನ್.ಜಿ.ಓ.ಗಳು

### ಅ. ಗ್ರಾಮಾಂತರ ಪ್ರದೇಶದ ಬಾಲಕಿಯರಿಗೆ ವಸತಿ ನಿಲಯ ನಡೆಸಲು ಆರ್ಥಿಕ ನೆರವು

ಗ್ರಾಮಾಂತರ ಪ್ರದೇಶದ ಹೆಣ್ಣುಮಕ್ಕಳ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲು ಹಾಗೂ ಅರ್ಧಕ್ಕೆ ಶಾಲೆ ಬಿಡುವುದನ್ನು ತಪ್ಪಿಸಲು ಅನುಕೂಲವಾಗುವಂತೆ ವಸತಿ ನಿಲಯಗಳನ್ನು

ಇಲಾಖಾ ವತಿಯಿಂದ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದೆ. ಕರ್ನಾಟಕ ರಾಜ್ಯದಲ್ಲಿ ೨೪ ವಸತಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆ.

**೮. ಶಿಶು ಪಾಲನಾ ಕೇಂದ್ರಗಳು**

ವ್ಯವಸಾಯ ಹಾಗೂ ಇನ್ನಿತರ ವರ್ಷದ ಮಕ್ಕಳಿಗೆ ಗ್ರಾಮಾಂತರ (ವೃತ್ತಿನಿರತ ಮಹಿಳೆಯರ ಮಕ್ಕಳಿಗೆ) ಆಶ್ರಯ ನೀಡಲು ಸೇವಾ ಸಂಸ್ಥೆಗಳು ಶಿಶು ಪಾಲನಾ ಕೇಂದ್ರಗಳನ್ನು ಸ್ಥಾಪಿಸುತ್ತಿವೆ.

**೨. ಮಹಿಳೆಯರಿಗೆ ಮತ್ತು ಬಾಲಕಿಯರಿಗೆ ತಾತ್ಕಾಲಿಕ ಆಶ್ರಯ ತಾಣಗಳು**

೧೯೬೯ರಲ್ಲಿ ಜಾರಿಗೆ ಬಂದ ಈ ಯೋಜನೆಯಡಿ ಕುಟುಂಬದ ಸಮಸ್ಯೆಗಳು, ಮಾನಸಿಕ ಒತ್ತಡ, ಸಾಮಾಜಿಕ ಬಹಿಷ್ಕಾರ ಹಾಗೂ ಇತರ ಶೋಷಣೆಗಳಿಂದ ಅಪಾಯಕ್ಕೀಡಾದ ಮಹಿಳೆಯರಿಗಾಗಿ ಮತ್ತು ಬಾಲಕಿಯರಿಗಾಗಿ ತೆರೆಯಲಾಯಿತು. ಇಲ್ಲಿ ವೈದ್ಯಕೀಯ ಸೌಲಭ್ಯ, ಮಾನಸಿಕ ಚಿಕಿತ್ಸೆ, ಶಿಕ್ಷಣ ಹಾಗೂ ವೃತ್ತಿ ತರಬೇತಿ ಮತ್ತು ಮನೋರಂಜನೆ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಇಂತಹ ಆಶ್ರಯ ತಾಣಗಳು ಇಲಾಖೆಯ ನೆರವಿನೊಂದಿಗೆ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತವೆ.

**೩. ಸ್ವಯಂ ಸಿದ್ಧ**

ಗ್ರಾಮೀಣ ಮಹಿಳೆಯರ ಅಭಿವೃದ್ಧಿ ಮತ್ತು ಸಶಕ್ತೀಕರಣಕ್ಕಾಗಿ ಕೇಂದ್ರ ಸರಕಾರದ ಸಮಗ್ರ ಯೋಜನೆಯಾಗಿದ್ದು ಬಡತನದಲ್ಲಿರುವ ಮಹಿಳೆಯರನ್ನು ಸಂಘಟಿಸುವುದು, ಸಂಘಟನೆಯ ಮೂಲಕ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗಾಗಿ ವಿವಿಧ ಸೇವೆಗಳನ್ನು ಒಗ್ಗೂಡಿಸುವುದು, ಸಣ್ಣ ಪ್ರಮಾಣದ ಸಾಲ ಸೌಲಭ್ಯಗಳಿಗೆ ದಾರಿ ಮಾಡಿಕೊಡುವುದು ಹಾಗೂ ಸಣ್ಣ ಉದ್ದಿಮೆಗಳನ್ನು ಉತ್ತೇಜಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ. ಇವುಗಳನ್ನು ಸ್ವಯಂ ಸೇವಾ ಸಂಸ್ಥೆಗಳು ನಿರ್ವಹಿಸುತ್ತವೆ.

**೪. ಮಕ್ಕಳ ಅಭಿವೃದ್ಧಿಯಲ್ಲಿ ಎನ್.ಜಿ.ಓ.ಗಳು**

**೧. ನಿರ್ಗತಿಕ ಮಕ್ಕಳ ಕುಟೀರಗಳು**

ಮಕ್ಕಳ ಕಲ್ಯಾಣ ಇಲಾಖೆಯು ಮಕ್ಕಳ ಪಾಲನೆ ಹಾಗೂ ಪೋಷಣೆಗಳಿಗೆ ನಿರ್ಗತಿಕ ಮಕ್ಕಳ ಕುಟೀರವನ್ನು ತೆರೆಯಲು ೨೫ ಸ್ವಯಂ ಸೇವಾ ಸಂಸ್ಥೆಗಳಿಗೆ ಅನುಮತಿಯನ್ನು ನೀಡಿದೆ.

**೮. ಅರ್ಹ ಸಂಸ್ಥೆಗಳು**

ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ಸಂಸ್ಥೆಗಳನ್ನು ಅರ್ಹ ಸಂಸ್ಥೆಗಳೆಂದು ಬಾಲನ್ಯಾಯ, ಕಾಯ್ದೆ ೨೦೦೦ರಲ್ಲಿ ಗುರುತಿಸಲಾಗಿದೆ. ಆ ಸಂಸ್ಥೆಗಳು ಮಕ್ಕಳಿಗೆ ಶಿಕ್ಷಣ, ವೃತ್ತಿ ತರಬೇತಿ ಸೌಲಭ್ಯ ನೀಡಿ ಮಕ್ಕಳಿಗೆ ಪುನರ್ವಸತಿ ಕಲ್ಪಿಸಲು ಪ್ರಯತ್ನಿಸಿದ. ಮಕ್ಕಳ ನಿರ್ವಹಣೆಗಾಗಿ ಸ್ವಯಂ ಸೇವಾ ಸಂಸ್ಥೆಗಳು ಪ್ರತಿ ಮಗುವಿಗೆ ತಿಂಗಳಿಗೆ ೩೦೦ ರೂಪಾಯಿಗಳಂತೆ ಅನುದಾನವನ್ನು ಪಡೆಯುತ್ತವೆ.

### ೩. ಮಕ್ಕಳ ಸಹಾಯವಾಣಿ ಕೇಂದ್ರ

ಇದು ಕೇಂದ್ರ ಸರಕಾರದ ಯೋಜನೆಯಾಗಿದ್ದು, ತೊಂದರೆಯಲ್ಲಿರುವ ಮಕ್ಕಳ ಪಾಲನೆ ಮತ್ತು ಪೋಷಣೆ, ರಕ್ಷಣೆ ಅವಶ್ಯವಿರುವ ಮಕ್ಕಳ ಕರೆಗಳಿಗೆ ಸ್ಪಂದಿಸುವ ಮೂಲಕ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಸಮುದಾಯದ ಸಹಭಾಗಿತ್ವದ ಜೊತೆಗೆ ಕೆಲಸ ಮಾಡುತ್ತಿವೆ.

### ೫. ಪರಿಸರ ಅಭಿವೃದ್ಧಿಯಲ್ಲಿ ಎನ್.ಜಿ.ಓ.ಗಳು

ಘನತ್ಯಾಜ್ಯ ವಸ್ತುಗಳ ನಿರ್ವಹಣೆ, ಜಲ ಸಂವರ್ಧನೆಗಾಗಿ ಯೋಜನೆ ಸಂಘ ಹೀಗೆ ಇನ್ನೂ ಹಲವಾರು ಸಂಸ್ಥೆಗಳ ಮೂಲಕ ಎನ್.ಜಿ.ಓ.ಗಳು ಪರಿಸರ ರಕ್ಷಿಸುವ ಕಾರ್ಯವನ್ನು ನಿರ್ವಹಿಸುತ್ತಿವೆ.

### ೬. ಆರೋಗ್ಯ ಅಭಿವೃದ್ಧಿಯಲ್ಲಿ ಎನ್.ಜಿ.ಓ.ಗಳು

ಇಂದು ಪ್ರಪಂಚದಾದ್ಯಂತ ಬೆಚ್ಚಿ ಬೀಳಿಸಿದ ಏಡ್ಸ್ ಬಗ್ಗೆ ಅರಿವು ನೀಡಲು ಎನ್.ಜಿ.ಓ.ಗಳು ಕಾರ್ಯನಿರತವಾಗಿವೆ. ಯುವಜನರ ಮೊದಲ ಹೆಜ್ಜೆ ಎಂಬ ಯೋಜನೆಯ ಮೂಲಕ ೧೪ ರಿಂದ ೨೫ರ ವಯಸ್ಸಿನ ಯುವಕ/ಯುವತಿಯರಿಗೆ ಏಡ್ಸ್ ಬಗ್ಗೆ ಮಾಹಿತಿ ಮತ್ತು ಅರಿವು ಮೂಡಿಸುತ್ತಿವೆ. ಜೊತೆಗೆ ಇದಕ್ಕೆ ಬೇಕಾದ ಸೇವೆಗಳನ್ನು ಒದಗಿಸುವಲ್ಲಿ ಸಹಾಯಕವಾಗಿವೆ.

ಜನರಲ್ಲಿ ಆರೋಗ್ಯ, ಶಿಕ್ಷಣ, ನೈರ್ಮಲ್ಯದ ಕುರಿತು ತಿಳಿಸಲು ಜನರಿಗೆ ಅರಿವು ಮೂಡಿಸಲು ಅನೇಕ ಕಾರ್ಯಕ್ರಮಗಳನ್ನು, ಚರ್ಚೆಗಳನ್ನು, ಸಭೆಗಳನ್ನು, ಸಂಘಟಿಸುತ್ತಿವೆ. ಹಲವಾರು ಸೋಂಕು ರೋಗಗಳ ಕುರಿತು ಮಾಹಿತಿಯನ್ನು ಒದಗಿಸುವುದು, ಜನರ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸುವುದು, ಅವುಗಳ ಬಗ್ಗೆ ಸಲಹೆ ಸೂಚನೆ, ಮುನ್ನೆಚ್ಚರಿಕಾ ಕ್ರಮಗಳ ಕುರಿತು ಸಲಹೆ ನೀಡಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಮಾಜದ ಅಭಿವೃದ್ಧಿಗೆ ಶ್ರಮಿಸುತ್ತಿವೆ.

ಭಾರತ ಸರಕಾರವು ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ಕೇಂದ್ರ ಸರ್ಕಾರ ಅಭಿವೃದ್ಧಿಗಾಗಿ ಹಲವಾರು ಯೋಜನೆ ಹಾಗೂ ಕಾರ್ಯಕ್ರಮಗಳನ್ನು ರೂಪಿಸುತ್ತಿದೆ. ಈ ಯೋಜನೆಗಳ ಅನುಷ್ಠಾನದ ಜವಾಬ್ದಾರಿಯನ್ನು ಹಲವಾರು ಸರ್ಕಾರೇತರ ಸಂಘ ಸಂಸ್ಥೆಗಳು ವಹಿಸಿಕೊಂಡಿವೆ. ಇವುಗಳನ್ನು ಯಶಸ್ವಿಯಾಗಿ ನಿರ್ವಹಿಸಿ ದೇಶದ ಅಭಿವೃದ್ಧಿಗೆ ತಮ್ಮದೇ ಆದ ಕೊಡುಗೆ ನೀಡಿವೆ. ಸರ್ಕಾರೇತರ ಸಂಘ ಸಂಸ್ಥೆಗಳು ಗ್ರಾಮೀಣ ಪ್ರದೇಶ ಮತ್ತು ನಗರ ಪ್ರದೇಶಗಳ ಅಭಿವೃದ್ಧಿಯಲ್ಲಿ ತೊಡಗಿ ಸಮುದಾಯದ ಅಭಿವೃದ್ಧಿಯನ್ನು ಸಾಧಿಸುವ ಮೂಲಕ ದೇಶದ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ.

### ಟಿಪ್ಪಣಿಗಳು

೧. ಚಂದ್ರಶೇಖರ ಟಿ.ಆರ್., ಮಹಿಳೆ-ಆರ್ಥಿಕತೆ ಮತ್ತು ಅಭಿವೃದ್ಧಿ, ಪುಟ. ೨೧೭.

೨. ಅದೇ, ಪುಟ. ೨೧೯-೨೨೦.

೩. ಅದೇ, ಪುಟ. ೨೨೧.

೪. ಹಿರೇಮಠ ಎಸ್.ಜಿ., ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ, ಪುಟ. ೧೭೧-೧೭೨.

೫. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಯೋಜನೆಗಳ ಕೈಪಿಡಿ, ಪುಟ. ೭.
೬. ಡಾ. ಶ್ರೀಮತಿ ಎಚ್.ಎಸ್. (ಸಂ), ಮಹಿಳಾ ಅಧ್ಯಯನ (ಉತ್ತರಾಯಣ ಸಂಚಿಕೆ), ಪುಟ. ೭೯.
೭. ಅದೇ, ಪುಟ. ೮೧.
೮. ಡಾ. ಹಾಲತಿ ಸೋಮಶೇಖರ, ಸ್ತ್ರೀಪರ ಕಾನೂನುಗಳು ಮತ್ತು ಸಂಘಟನೆಗಳು, ಪುಟ. ೮೯.
೯. ಡಾ. ಶ್ರೀಮತಿ ಎಚ್.ಎಸ್. (ಸಂ), ಮಹಿಳಾ ಅಧ್ಯಯನ (ಉತ್ತರಾಯಣ ಸಂಚಿಕೆ), ಪುಟ. ೭೯.
೧೦. ಎಸ್.ಜಿ.ಎಸ್.ವೈ. ಮಾರ್ಗಸೂಚಿಗಳು, ಪುಟ. ೨೪.
೧೧. ಡಾ. ಶ್ರೀಮತಿ ಎಚ್.ಎಸ್. (ಸಂ), ಮಹಿಳಾ ಅಧ್ಯಯನ (ಉತ್ತರಾಯಣ ಸಂಚಿಕೆ), ಪುಟ. ೭೯.
೧೨. ಹಿರೇಮಠ ಎಸ್.ಜಿ., ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ, ಪುಟ. ೧೭೨.
೧೩. ಅದೇ, ಪುಟ. ೧೭೨-೧೭೩.
೧೪. ಡಾ. ಹಾಲತಿ ಸೋಮಶೇಖರ, ಸ್ತ್ರೀಪರ ಕಾನೂನುಗಳು ಮತ್ತು ಸಂಘಟನೆಗಳು, ಪುಟ. ೧೦೭.

...

## ಈ ಸಂಚಿಕೆಯ ಲೇಖಕರು

೧. ವಿಮಲಾ ಕೆ.ಎಸ್., ನಂ. ೧೬೨, ೬ನೇ ಮುಖ್ಯರಸ್ತೆ, ೭ನೇ ವಿಭಾಗ, ೪ನೇ ಘಟ್ಟ, ಬನಶಂಕರಿ, ೩ನೇ ಹಂತ, ಬೆಂಗಳೂರು ೫೬೦ ೦೮೫.

೨. ಶ್ರೀ ಪ್ರಕಾಶ ಕೆ., C/o ನಂ. ೧೬೨, ೬ನೇ ಮುಖ್ಯರಸ್ತೆ, ೭ನೇ ವಿಭಾಗ, ೪ನೇ ಘಟ್ಟ, ಬನಶಂಕರಿ, ೩ನೇ ಹಂತ, ಬೆಂಗಳೂರು ೫೬೦ ೦೮೫.

೩. ಡಾ. ಬಸವರಾಜ ಸಬರದ, ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪. ಡಾ. ಶಿವಾನಂದ ಎಸ್. ವಿರಕ್ತಮಠ, ಸಹಪ್ರಾಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೫. ಡಾ. ಸೂರ್ಯಕಾಂತ ಎಸ್. ಸುಜ್ಯಾತ್, ಉಪನ್ಯಾಸಕರು, ನೂತನ ಪದವಿ ಮಹಾ ವಿದ್ಯಾಲಯ, ಗುಲಬರ್ಗಾ.

೬. ಡಾ. ರಾಮ ಕಲಾಲ್, ಶ್ರೀ ಬಸವೇಶ್ವರ ನಗರ, ಸ್ಟಾರ್ ಟಾಕೀಜ್ ಹಿಂದುಗಡೆ, ಕೊಪ್ಪಳ.

೭. ಡಾ. ಎಂ. ಭಾರತಿ, W/o ಡಾ. ಜಿ. ಪ್ರಶಾಂತ ನಾಯಕ, ಬಿ. ಬ್ಲಾಕ್, ನಂ. ೭, ಅಧ್ಯಾಪಕರ ವಸತಿಗೃಹ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ ೫೭೭ ೪೫೧, ಶಿವಮೊಗ್ಗ ಜಿಲ್ಲೆ

೮. ಸರೋಜಾ ಎಸ್. ಸಂತಿ, ಸಂಶೋಧನಾ ವಿದ್ಯಾರ್ಥಿ, ಯುಜಿಸಿ ಮಹಿಳಾ ಅಧ್ಯಯನ ಕೇಂದ್ರ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೯. ಡಾ. ಎಂ.ಬಿ. ದಿಲ್‌ಶಾದ್, ಅಧ್ಯಕ್ಷರು, ಮಹಿಳಾ ಅಧ್ಯಯನ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೧೦. ಡಾ. ಶಾಂತಾ ಮಠ, ಕನ್ನಡ ಉಪನ್ಯಾಸಕಿ, ವಿ.ಜಿ. ಮಹಿಳಾ ಮಹಾವಿದ್ಯಾಲಯ, ಗುಲಬರ್ಗಾ.

೧೧. ಡಾ. ಸಿ.ಡಿ. ವೆಂಕಟೇಶ್, ಸಹಪ್ರಾಧ್ಯಾಪಕ, ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೨. ಡಾ. ಈ. ಯರ್ರಿಸ್ವಾಮಿ, ಉಪನ್ಯಾಸಕರು, ಮಹಿಳಾ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು.

೧೩. ಡಾ. ರಾಜಲಕ್ಷ್ಮಿ ಎನ್.ಕೆ, ಆಂಗ್ಲ ವಿಭಾಗ, ವಿಶ್ವವಿದ್ಯಾಲಯ ಕಾಲೇಜು, ಹಂಪನಕಟ್ಟೆ, ಮಂಗಳೂರು ೫೭೫ ೦೦೧.

೧೪. ಶ್ರೀದೇವಿ ವಿ. ಆಲೂರು, C/o ಭರತಗೌಡ ಕಳಸಾಪುರ, ಯುಜಿಸಿ ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೧೫. ಶ್ರೀಮತಿ ಎಸ್. ಶಶಿಕಲಾ, ಸಹಾಯಕ ಪ್ರಾಧ್ಯಾಪಕಿ, ಸಮಾಜಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಂಡ್ಯ

೧೬. ಶ್ರೀದೇವಿ. ಎಲ್. ಸಂಶೋಧನಾ ವಿದ್ಯಾರ್ಥಿನಿ, ಮಹಿಳಾ ಅಧ್ಯಯನ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ ವಿಜಾಪುರ.

೧೭. ಡಾ. ಆರ್. ಸುನಂದಮ್ಮ, ನಿರ್ದೇಶಕರು, ಮಹಿಳಾ ಅಧ್ಯಯನ ಕೇಂದ್ರ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.

೧೮. ಡಾ. ಬಿ.ಎಸ್. ಗೀತಾ, ನಂ. ೬೮೮, ೬೧ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೫೬೦ ೦೧೦.

೧೯. ಸುಕನ್ಯಾ ಹಾವನೂರು, ಸಹಾಯಕ ಸಂಶೋಧಕರು, ಅಂಬೇಡ್ಕರ್ ಅಧ್ಯಯನ ಕೇಂದ್ರ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ

೨೦. ಶ್ರೀಮತಿ ಚಂದ್ರಕಲಾ ಎ., ೩-೯೯೪, ಗಾಜಿಪುರ, ಗುಲಬರ್ಗಾ.

೨೧. ಶ್ರೀಮತಿ ಶೈಲಶ್ರೀ ಅಹಿರಸಂಗ, ಪಿಎಚ್.ಡಿ. ವಿದ್ಯಾರ್ಥಿನಿ, ಮಹಿಳಾ ಅಧ್ಯಯನ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ

...

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯ ಹೊಂದಿವೆ.



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ